**MADRAS GOVERNMENT ORIENTAL MANUSCRIPTS SERIES No. 43.**




ವೆಂಕಾಮಾತ್ಯಕವಿವಿರಚಿತಂ

ಶ್ರೀ ಮ ದ್ರಾ ಮಾ ಯ ಣ ಂ

# ಕಿ ಷ್ಕಿಂ ಧಾ ಕಾ ಂ ಡ ಂ

# KISKINDHĀKĀṆḌAM

## (RĀMĀYAṆAM) OF VEṄKĀMĀTYA

EDITED BY

T. CHANDRASEKHARAN, M.A., L.T.,

*Curator, Government Oriental Manuscripts Library, Madras*

*and the staff of the Library*

*(Under the orders of the Government of Madras)*

PRINTED BY THE SUPERINTENDENT
GOVERNMENT PRESS
MADRAS
1955

# INTRODUCTION

This edition of Kiṣkindhākāṇḍa is the third volume of the Rāmāyaṇa of Veṅkāmātya of which two Kāṇḍas, namely, Ayōdhyā-Kāṇḍa and Sundarakāṇḍa have already been published. Details regarding the author and the literary value of this work have been noted in the first volume—Sundarakāṇḍa. It is enough to state here that the same flow of language and style which is seen in the first two volumes runs throughout this Kāṇḍa also with flashes of fine poetical thoughts. It is hoped that this volume will have the same good reception as the other two volumes. It may be mentioned here that Bālakāṇḍa will be taken up next and printed during 1955-56.

My thanks are due to Sri V. Hanumanthachar, M.A., L.T., Librarian, and Sri Vidvan C. Madhusudana Bhat, Kannada Pandit of this Library, for preparing the press copy and going through the proof. My thanks are also due to the Superintendent, Government Press, Madras, for printing the book in a very short time and making it available to the public.

GOVERNMENT ORIENTAL MANUSCRIPTS LIBRARY, MADRAS.
*20th January* 1955.

T. CHANDRASEKHARAN,
*Curator.*

# ಮುನ್ನುಡಿ

ವೆಂಕಮಾತ್ಯ ಕವಿಯಿಂದ ವಿರಚಿತವಾದ ರಾಮಾಯಣದ ಭಾಗಗಳ ಪೈಕಿ ಮೂರನೆಯ ಹೊತ್ತಗೆಯಾಗಿ ಈ ಕಿಷ್ಕಿಂಧಾಕಾಂಡವನ್ನು ಕನ್ನಡಿಗರ ಮುಂದಿಡಲು ನಾನು ಆನಂದಿಸುತ್ತೇನೆ. ಮೊದಲಿನ ಎರಡು ಪುಸ್ತಕಗಳಾದ ಸುಂದರಕಾಂಡ ಮತ್ತು ಅಯೋಧ್ಯಾಕಾಂಡಗಳು, ಮದ್ರಾಸು ಸರಕಾರದ ಪ್ರಾಚೀನ ಹಸ್ತಲಿಖಿತಪುಸ್ತಕಭಂಡಾಗಾರದ ಸಂಪಾದಕೀಯಸಮಿತಿಯವರಿಂದ ಆರಿಸಲ್ಪಟ್ಟ ಮೇರೆಗೆ ಈ ಮೊದಲೇ ಅಚ್ಚಾಗಿ ಬೆಳಕಿಗೆ ಬಂದಿವೆ.

ಕನ್ನಡ ಸಾಹಿತ್ಯದಲ್ಲಿ ವೆಂಕಮಾತ್ಯರಾಮಾಯಣಕ್ಕೆ ಇರುವ ಸ್ಥಾನಮಾನಗಳು, ಕವಿಯ ಕಾಲ, ದೇಶ ಮುಂತಾದುವು ಪ್ರಥಮದಲ್ಲಿ ಮುದ್ರಿತವಾದ ಸುಂದರಕಾಂಡದ ಮುನ್ನುಡಿಯಲ್ಲಿ ನಿರೂಪಿತವಾಗಿರುವುದರಿಂದ ಅವನ್ನಿಲ್ಲಿ ಪುನಃ ಪ್ರಸ್ತಾಪಿಸಿಲ್ಲ. ಇಷ್ಟು ವಿಸ್ತಾರವಾಗಿ ರಚಿತವಾದ ಈ ಗ್ರಂಥವು ಅಲ್ಲಲ್ಲಿ ಆಕರ್ಷಣೀಯವಾದ ಕವಿತಾಕೌಶಲಗಳಿಂದ ಕೂಡಿದ್ದು ಕನ್ನಡಸಾಹಿತ್ಯದ ಕಳೆಯನ್ನು ಹೆಚ್ಚಿಸುತ್ತದೆ ಎಂಬುದರಲ್ಲಿ ಸಂಶಯವಿಲ್ಲ. ಇಂತಹ ಗ್ರಂಥವನ್ನು ಪೂರ್ಣವಾಗಿ ಮುದ್ರಿಸಿ ಕನ್ನಡಿಗರಿಗೊದಗಿಸಲು ಶಕ್ತನಾದರೆ ನಾನು ಕೃತಾರ್ಥನೆಂದು ಭಾವಿಸುವೆನು. ಮುಂದಿನ ಸಂಚಿಕೆಯಾಗಿ ಬಾಲಕಾಂಡವನ್ನು ಮುದ್ರಿಸಬೇಕೆಂದಿದೆ.

ಇದರ ಮುದ್ರಣಪ್ರತಿಯನ್ನು ಸಿದ್ಧಪಡಿಸಿದ ಶ್ರೀ ವಿ. ಹನುಮಂತಾಚಾರ್, ಎಂ.ಎ., ಎಲ್.ಟಿ., ಮತ್ತು ಲೈಬ್ರೆರಿಯಲ್ಲಿ ಇತ್ತೀಚೆಗೆ ಕನ್ನಡಪಂಡಿತರಾಗಿ ನೇಮಕಹೊಂದಿದ ವಿದ್ವಾನ್ ಶ್ರೀ ಸಿ. ಮಧುಸೂದನ ಭಟ್ಟ ಇವರ ಕಾರ್ಯದಕ್ಷತೆಯು ಸ್ತುತ್ಯವಾದುದು.

ಕೊನೆಯದಾಗಿ ಈ ಗ್ರಂಥವನ್ನು ಸಕಾಲದಲ್ಲಿ ಅಂದವಾಗಿ ಅಚ್ಚುಮಾಡಿಕೊಟ್ಟಿರುವ ಸರಕಾರೀಮುದ್ರಣಾಲಯದ ಸೂಪರಿಂಟೆಂಡೆಂಟರವರಿಗೆ ಮತ್ತು ಅವರ ಸಿಬ್ಬಂದಿಗೆ ನನ್ನ ಹಾರ್ದಿಕಕೃತಜ್ಞತೆಗಳು.

ಗವರ್ನ್‌ಮೆಂಟ್ ಓರಿಯೆಂಟಲ್
ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರೆರಿ,
ಮದ್ರಾಸು-5,

ಟಿ. ಚಂದ್ರಶೇಖರನ್,
ಕ್ಯೂರೇಟರ್.

1955 ನೇ ಇಸವಿ ಜನವರಿ 20ನೇ ತಾರೀಕು.

ವೆಂಕಾಮಾತ್ಯ ವಿರಚಿತಂ

# ಶ್ರೀಮದ್ರಾಮಾಯಣಂ

# ಕಿಷ್ಕಿಂಧಾ ಕಾಂಡಂ

---

## ಒಂದನೆಯ ಸಂಧಿ.

ಶ್ರೀಜನಕನಂದಿನಿಯು ಶ್ರೀವತ್ಸದೆಡೆಯಿಟ್ಟು ।
ಮೂಜಗನ್ಮೋಹಿನಿಯು ಪೊರಗಿಟ್ಟು ನಸುನಗುತ ।
ಮೂಜಗತ್ಪ್ರಾಣ ನಂದನನ ಶುಭವಾಣಿಯುಂ ಪತಿಕರಿಸಿ ಸೂರ್ಯಸುತಗೇ ॥
ರಾಜತ್ವಮನ್ನಿತ್ತು ದಯದಿಂದಲುಂ ವಿಬುಧ ।
ರಾಜಸುತನಂ ತರಿದು ಹರಿಗಳಂ ಪೊರೆದ ರಘು ।
ರಾಜನೊಲಿದೆಮಗನಾರತಸೌಖ್ಯಸಂಪದಗಳೀಯಲಾನಂದಗಳನು ॥ (1)

ಬಲವು ಜಸವುಂ ಧೈರ್ಯಮಭಯ ಪ್ರಜ್ಞೆ ದಾರ್ಢ್ಯ ।
ನಲವು ಸೌಖ್ಯಂ ಚಾಟುತರವಚನರಚನೆಗಳು ।
ಕಲಿತಮಪ್ಪುದದಾರ ನಾಮಗ್ರಹಣಮಾತ್ರದೊಳಗಖಿಳಜೀವರಿಗೇ ।
ಸಲಲಿತೋದಾರ ಅಕ್ಷಾದಿ ರಕ್ಕಸಹಾರ ।
ಕಲಿಮಲಾಪಹ ಧೀರ ಕಾಮಿತದ ದಾತಾರ ।
ಅಲಘುಮತಿ ಪಾವನಸಮೀರನಕುಮಾರನಂ ಭಾವಿಸುವೆ ಭಕ್ತಿಯಿಂದ ॥ (2)

ಪಳೆಮಾತುಗಳ ಕೆಳೆಯನಾಂತಾಗಮಂಗಳಗೆ ।
ನಿಳಯಮೆನಿಸುವ ದಿವ್ಯಚರಿತ್ರೆಯನ್ನಮೃತರಸ ।
ತುಳುಕುವಂದದ ಭವ್ಯವಚನರಚನಾರಸವನೀಂಟಿ ಶ್ರುತಿಗಳ್ತಣಿಪವೇ ॥
ಜಳಜಾಕ್ಷನಭ್ಯುದಯಮೇಲ್ಗತೆಯನುಸುರೆಂದು ।
ನಳನಮುಖಿ ಪದಕೆರಗಿ ಬಿನ್ನವಿಸೆ ಹರ್ಷಮಂ ।
ತಳೆದು ವೃಷಕೇತನಂ ವಿಸ್ತರಿಸಲನುಗೈದನಖಿಲತ್ರಯೀಮಾತ್ರವನು ॥ (3)

ಹಿಮಗಿರಿತನೂಜಾತೆ ಕೇಳ್ಸಕಲಪುರುಷಾರ್ಥ ।
ದಮಿತವೈಭವಮಿತ್ತು ಪಾಲಿಪುದು ಲೋಕಮಂ ।
ದ್ಯುಮಣಿಕುಲರನ್ನನ ಚರಿತ್ರೆಯೊಳಗತಿಶಯವ ತಳೆದ ಕಿಷ್ಕಿಂಧಾಖ್ಯದಾ ॥
ಸುಮನಸಾನಂದಕರಕಾಂಡಮಂ ವಿಸ್ತರಿಪೆ ।
ಕಮಲಾಯತಾಕ್ಷಿ ಕಾಮಿಸಿದರ್ಥಗಳ ನೀವು ।
ದಮೃತೋಪಮಾನಮೆಂದಾನಂದದಿಂದನವರತ ಸೇವನಂಗೈಯಲು ॥ (4)

ಅಭಯಮನ್ನಿತ್ತು ಸುರಗಭೆ ಸಂತಸಂಗೊಳಲು ।
ಶಬರಿಯಂ ನಿಜಪದಕೆ ಕಳುಪಿ ಪಂಪಾಸಾಮು ।
ಶುಭಸರಸಿಯೆಡೆಯೊಂದು ತಾಣದೊಳ್ ಕುಳ್ಳಿರ್ದು ರಾಘವಂ ತನ್ನ ಸತಿಯಾ ॥
ವಿಭವಂಗಳಂ ನೆನೆದು ಹಂಬಳಸುತಾಗಳುಂ ।
ರಭಸದಿಂ ಮೊರೆವ ಭೃಂಗಾಳಿಗಿಳಿಕೋಗಿಲೆಯು ।
ಶುಭನಾದಗಳಗಳ್ಕಿ ಸೌಮಿತ್ರಿಯಂ ಕರೆದು ಪೇಳ್ದನಾ ಪರಿಯೆಲ್ಲಮಂ ॥ (5)

ಕಾಲಾಂಗನಾಕರದ ತಾಳವೃಂತಾಗ್ರಸಂ ।
ಚಾಲನೆಯಲುದುಭವಿಸಿ ಬರುತ ಕಲಶೋದ್ಭೂತ ।
ನಾಲಯೋಪರಿ ಕಷಾಯಾರ್ಥತೆಯನಪಹರಿಸಿ ಮಲಯನಿಲಯವನು ಸಾರಿ ॥
ಮೇಲಿರ್ಪ ಕಾಳಾಹಿಗಳ ವದನಚುಂಬನದಿ ।
ಹಾಲಾಹಲಾಂಗನೆಹ ಪವಮಾನನುರ್ವೃತ್ತು ।
ಬಾಲ ಹೃತ್ತಾಪಕಂ ಗೊಳಪುತಿಂದುಷ್ಣತೆಯನಾಂತುದಚ್ಚರಿಯು ನೋಡು ॥ (6)

ಕಾಂಚನಾಸೆಯನುಳಿದು ಸಕಲಾಗಮಾಂತ ಪ್ರ ।
ಪಂಚಂಗಳನ್ನಾಂತು ಮಾಧವಾಂಘ್ರಿಯೊಳು ನಿ ।
ಶ್ಚಂಚಲದಿ ಮನವಿಟ್ಟು ಮೃದುರವಾನಂದಕರಮಾಧುಕರ ಗೋತ್ರಂಗಳು ॥
ಪಂಚಶರನುಪದೇಶದಿಂದ ಮಧುಮತ್ತತೆಯು ।
ಮುಂಚೆ ಮೈಮರೆದು ಸಿಂಜನಿಯಂತೆ ಹೃದಯಾವ ಪ ।
ಳಂಚುತಿವೆ ಸೌಮಿತ್ರಿ ನೋಡು ದುಸ್ಸಹವಾಸವಾರಾರ ಕೆಡಿಸದಕಟಾ ॥ (7)

ತುತ್ತನುಳಿದನವರತಮೌಳಿದಳರುಮಂ ಮೆಲುತ ।
ಪೊತ್ತುಸಲಹಿದರ ಸಾಕದೆ ವಿಷ್ಣುಚರಣಂಗ ।
ಳೊತ್ತ ಸಾರುವೆನೆಂದು ಮೌನವ್ರತವ ಪಿಡಿದು ಕಾನನಪ್ರಿಯಗನಿಪರು ॥
ಬಿತ್ತರದ ಮಧುಘಾಯಿಗಳ ಬೆರೆದು ಜಾರಿಸುತ ।
ಮುತ್ತಮತೆಯಂ ಸಾಧುಚಿದ್ರವದಿ ನಡುಗಿಪರು ।
ಮತ್ತೆ ದುಷ್ಕಾಲ ಬರೆ ಮೃದು ಕಣ್ಣಾತರಮೆನಿಪುದೈಸ ಸೌಮಿತ್ರಿ ನೋಡು (8)

ಪಿಡಿದ ನಿಯಮದಿ ಫಲಾಹಾರಮಂ ಗೈದು ನಿಜ ।
ದೃಢದಿ ವರ್ನಿತ್ವಮಂ ಕೈಕೊಂಡು ವಚನದಿಂ ।
ದೆಡೆವಿಡದೆ ಶೌರಿಯಂ ಭಾವಿಸುವ ಶುಕಕುಲಂ ಮದನರಥಮೆಂದೆನಿಸುತಾ ॥
ಕಡುನಿಟ್ಟುರಗಳಂದವಲೆದೆವಡೆಯಲೀ ಬನದಿ ।
ಕುಡುದಂಷ್ಟ್ರನಂ ಕೋಪಿಸುವವೈದೆ ಖಗತತಿಯು ।
ತೊಡರಿದಡೆ ಮೌನಿಗಳು ಕೆಡದುಳಯರೀ ನೆಲದಿ ಸೌಮಿತ್ರಿ ನೋಡು ವಿಧಿಯಾ ॥ (9)

ಜ್ಞಾನಪದರನುವನಂಗೀಕರಿಸಿದಲೆ ತನ್ನ ।
ಮಾನಸಸರಸ್ಸಿನಲಿ ಕ್ರೀಡಿಸುತ ಬೇಗ ಚತು ।
ರಾನನಗತಿವಿಡಿದ ಪಾರವಶ್ಯತೆಯಾಂತ ಪದ್ಮಾಸನಾಭ್ಯಾಸದಿಂ ॥
ದೇಸೊಂದನೆಣಿಸದೀ ಹಂಸಕುಲ ದುಷ್ಕಾಲ ।
ಭಾಸದಿ ಪರಾಧೀನವೃತ್ತಿಯಂ ಜಗತಿಯಂ ।
ತಾನಲೆವದೇನೆಂಬೆನಾರ್ತಿಯೊಳು ಸಾಧುಗಳದೆಂದೆನಿಸಿಕೊಂಬರಹಹಾ ॥ (10)

ಭ್ರಮರಮಂಡಿತಕುವಲಯಂಗಳು ಕಂಗಳಂ ।
ವಿಮಲಸರಸಿಜ ಮುಖದ ಸಖತೆಯಂ ಬಿಸಕೊಂಡ ।
ಸಮತೆ ಬಾಹಾಲತೆಗಳಂ ವಳತ್ರಿವಳಿಗಳ ಶೈವಾಲ ರೋಮಾಳಿಯಂ ॥
ಭ್ರಮಿತಚಕ್ರಂಗಳು ಪಯೋಧರಗಳಂ ರಸೋ ।
ತ್ಕ್ರಮಮವು ಶೃಂಗಾರಹಾಸ್ಯಾದಿಗಳ ಸಂತತಿಯು ।
ಭ್ರಮೆಗೊಡುತಲೀ ಸರಸಿವಿರಸಮನ್ನೆಸಗುತಿರೆಯೆಂತುಸೈರಿಸುವೆನಣುಗಾ ॥ (11)

ದ್ರಾವಣಾ ವಶೀಕರಣಾ ಮೋಹನಂ ಶೋಷಣಂ ।
ರಾವರಾಜ್ಯಸ್ತ್ರಗಳ ತನ್ನೊಳಂಬಿಟ್ಟು ರತಿ ।
ದೇವಿಯರ ಸಂಗಾಸ್ಪದವ ಕೊಟ್ಟು ಬೇಡಿದುದ ಬೆಟ್ಟುಕಾರುತಗಳಂದೇ ॥
ತಾವೆನಿಸಿದೀ ಬನಂ ಕಪಟಿಯಹೃದಯದಂತ ।
ತೀವ ಹರ್ಷವ ನೀವುದೆನುತುಯದ್ಭುತಂದೆ ।
ವೀವಸುಧೆ ಗರಿಯುದುಚಿತ್ರಮನುಚಿತಂ ದೈವಕೃತವಿಕೃತಿ ಬೇರಿರ್ಪುದಕಟಾ ॥ (12)

ಹರನಿಟಾಲಾಗ್ನಿಯಿಂ ಬೆಂದು ಬೇಗುದಿಯಾದ ।
ಸ್ಮರ ತರುಣಿಯರ ಮನೋಜನ್ಮನಾಗುತ ದೃಷ್ಟ ।
ಪರಿಕರದೊಳೊಡೆವೆರೆದು ಪರಮಋಷಿಮುಖ್ಯರಂ ಕೊಲುವ ಪಾತಕೆಯು ಮನವಾ ॥
ಬರಿಸೆ ಪರಪುಷ್ಟ ಮಧುಪಗಳು ಮಂದಾನಿಲಂ ।
ಪುರಿಗೂಡಿ ಶುಕಪಿಕಾಳಿಗಳ ಸಾಹಾಯಕಂ ।
ಕರೆದೆಮ್ಮ ನಿಷ್ಕಾರಣದಿ ಬಾಧೆಗೊಳಸುತಿಹವೇನೆಂಬುದಚ್ಚರಿಯನೂ ॥ (13)

ಸ್ಮರನ ಬೋಧೆಯೊಳಂ ಬಸಂತ ತರುಪಲ್ಲವಗ ।
ಳುರಿಗಳಂ ಬೆರ್ಚಿಸುತ ಕುಣಿವ ಸೋಗೆಯ ಪಕ್ಕ ।
ನಿರಿಗಣ್ಗಳಂದ ಹಲಹಲ ಮರುತನಂ ಜಿಡುತ ಮೆಲ್ಲ ಮೋಹನಗೊಳಸುತ ॥
ಕರೆವುತಿಹ ಕೋಕಿಲಾರವದಿಂದ ಮಾದ್ರವವ ।
ಲಿರಲಸತ್ವತೆಯಾಂತುದಯ್ಯ ಲಕ್ಷ್ಮಣಾ ಪೋಗೆ ।
ಧರಣೀತನುಜೆಯೆನಗೆ ಖಗಮೃಗಂಗಳು ನಗುತ ಬಗೆವರತಿಪಾತಕಗಳಾ ॥ (14)

ನಲಿಯುವ ಮಯೂರಗಳನೊಲಿಸುಬಹಕೇಶನಿಗ ।
ಳಲಿವುತ್ತ ಸಾರಂಗ ಜೊತ್ತನರಸುತ ಬಪ್ಪ ।
ಚೆಲುವ ಭ್ರಮರೀಗಣವ ನೋಡು ಲಕ್ಷ್ಮಣಾ ಪರಾನ್ಯೋನ್ಯಾನುರಾಗಗಳನು ॥
ಪಲಬಗೆಯ ಲೀಲೆಯಿಂ ಕುಹುಕಿತ್ತು ಮುದ್ದಿಸುತ ।
ಮೊಲವಿಂದ ಸುಖಿಪ ಕೆಂಗಣ್ವಕ್ಕಿಗಳ ನೋಟ ।
ಲಲನೆಯಂ ನೆನೆದೆನ್ನ ಹೃದಯಮಿಬ್ಬಗೆಯಪ್ಪುದೇಂಗೈವೆ ಪೇಳ್ವುದೆನಗೆ ॥ (15)

ತಳತಮಾಮರ ಪಲ್ಲವಿತವ ಕಂಕೆಲ್ಲಿಗಳು ।
ತಿಲಕಚಂಪಕಕುಂದಮಂದಾರಕುಸುಮಂಗ ।
ಳೊಳು ನಮ್ರಪಾಟಲೀಪ್ರಮುಖತರುಗಳ ಲತೆಗಳಪ್ಪಿ ಮಸ್ತಕಕಡರುವಾ ॥
ಕಳೆಯು ನಿಟ್ಟಿಸುತಲೊಂದೊಂದರೊಳು ಸಂಚರಿಸಿ ।
ಪುಳಕಮಂಸಾಂತು ಮಂದಾನಿಲಂ ಚಲಿಸುತಿರೆ ।
ನಳಿನಮುಖಿಯಾಲಿಂಗನವ ನೆನೆದು ತೊಳಲುತಿಹುದೆಮ್ಮ ಮಾನಸ ಲಕ್ಷ್ಮಣಾ ॥ (16)

ಸೋಗೆಗಳ್ ನಿಟ್ಟಿಸುತ ಬರಲು ಮುಡಿದೋರುತಿದೆ।
ಶ್ರೀಗರುವ ಬಂದೂಕ ಬಾಯಿದೆರೆಯುಲ್ಃಸುರುತಿದೆ।
ಕೋಗಿಲೆಯು ನುಣ್ದನಿಯು ಗಿಳಿಗಳುಂ ಸವಿನುಡಿಯು ಚಮರಿಯುಂ ಚಿಕುರಂಗಳಾ ॥
ಪೂಗ ಕಂಠವ ಮರಾಳಂ ಗತಿಯು ತೋರುತ್ತ।
ಮಾಗಲುಂ ಪಗೆಯೂಂತು ತರುಮೃಗಂಗಳು ಕೊಂದು।
ಕೂಗುತಿರಲಾನೆಂತು ಸೈರಿಪೆನು ಸೌಮಿತ್ರಿ ಪೊರೆವೆನೆಂತೆನ್ನಸುಗಳಾ ॥ (17)

ಕಮಲಸೌರಭದ ಮಂದಾನಿಲನು ನಿಶ್ವಾಸ।
ಗವಾಕ್ಷಮಂ ತೋರುತಿಹನೆರಳಿಗಳು ನಿಜನೇತ್ರ।
ಭ್ರಮಣೆಯಿಂದಂಗನಾಥಾಳಿಥಳ್ಯಪ್ರಭಾಕಲಿತ ಸುಕಟಾಕ್ಷಂಗಳಾ ॥
ಕ್ರಮಗಳಂ ಸೂಚಿಸುತ ಸರ್ವರೊವ್ಮೊತ್ತದಿಂ।
ಭ್ರಮರಾಳಿಕೆಯು ನೆನಹ ಕೊಡುತಲಿರೆ ಧೈರ್ಯಮಂ।
ತಮುಮ ಪುಟ್ಟುವುದಕಟ ಕಾಯ್ವರಾರೆನ್ನನಿಂ ಪೇಳು ಸೌಮಿತ್ರಿ ದಯದಿ ॥ (18)

ಎಲ್ಲರೊಂದೆಸುತೆಡರುಗಳ ಪರಪಲ್ಮನುದ।
ನೆಲ್ಲಿ ಬದುಕುವ ಶೋಕವಡಸಿದೆಡೆಯೊಳು ದುಃಖ।
ದುಲ್ಲಾಸ ಬೆರ್ಚೆಬಹುದಖಿಲಪ್ರಾಣಿಗಳಿಲ್ಲ ಕೋಪಿಸುವರಾತನೊಡನೆ ॥
ಬಲ್ಲವಿಕೆಯುಜ್ಞಾನಕರಮಪ್ಪುದೆಂದೊರೆವ।
ಸೊಲ್ಲುಗಳಗಾಂ ಲಕ್ಷ್ಯಮಾದೆ ತೋರ್ಕೆ ಪ್ರಾಣ।
ವಲ್ಲಭೆಯುನಲ್ಲದಿರಲುಳಿಯುದೆನ್ನಯ ಜೀವ ಕಾವಡಿದು ಸಮಯ ದೇವಾ ॥ (19)

ಕುಸುಮಗಳ ಸಂಪದವ ಪೊಸಪಲ್ಲವದ ಹದರ।
ಬಸಜಗಂಧಾನಿಲನ ಸಸಿತಾರೆಗಳ ಕಲನ।
ದೆಸಕವಂ ಕಂಡೆನ್ನನುಳಿದ ಜಾನಕಿ ತನುವ ಪೊರೆದು ಜೀವದೊಳಪ್ಪುದೊ ॥
ಪುಸಿ ವಸುಮತೀಯುಣಾಗಿ ಪೋದಡೆನ್ನಯ ಜೀವ।
ನಸಿಯುದುಳ್ಳವುದೆ ಮಗುಳೆ ವಸುಮತಿಯೊಳಿತೆ ತನಯು।
ಬಸವಳಿದರೇಂ ಪೋಗು ಬನವನುಳಿದುಂ ಜೀವಿಯಾಗು ದುಃಖಗಳ ನೀಗು ॥ (20)

ಪಲವು ಮಾತಿನ್ನೇನು ಲಲಿತಾಂಗಿಯುಂ ಕಾಣ।
ದುಳಿಯುದೆನ್ನಯ ಪ್ರಾಣವಳಲುವದ ನೀಂ ಮಾಣು।
ಪೊಳಲಿಗಭಿಮುಖನಾಗಿ ಪೋಗಿ ಭರತನ ಪೊರೆಗೆ ಮದ್ವಾರ್ತೆಗಳನು ಪೇಳ ॥
ಸುಲಭದಿಂ ತನುವ ಸಲಹುವದುಚಿತವಿಾ ದುಃಖ।
ಕಳನೆಯುನ್ನಾಂ ತನುವ ತೊರೆವುದನುಚಿತಮೆಂದು।
ಪಲುಬುತಳಿ ಮೂರ್ಛೆಯುನ್ನಾಂತ ರಾಘವನನುಪಚರಿಸಿ ಲಕ್ಷ್ಮಣ ನುಡಿದನು ॥ (21)

ಕುಧರಸಮಧೈರ್ಯ ಕುತ್ಸಿತಕಾರ್ಯಕೆಂದಿಗುಂ।
ಬೆದರುವದೆ ಜೀಯ ಭವದೀಯ ಧೃತಿ ಮತಿ ಶಾಂತಿ।
ಸುದತಿಯು ವಿಯೋಗ ಸೊದನಸೈವುದುಂಟೆ ಮೇಣುಂಟೆ ವಿಕ್ರಮಸಾಟಿಯು।
ಉದಿತಾನುರಾಗದಿಂದಾದುದೀ ವಿಧುರೋಗ।
ಮಿದಕಲ್ಲಿ ಪೋದರುಂ ಕಡೆಗೊಳಸದಿರಲು ತ।
ನ್ನುದರಗತರೋಗಕಂ ಮೇಲೌಷಧಿಯು ತೊಡೆಯುಲಾರೋಗ್ಯಮಪ್ಪುದೆನುತಾ ॥ (22)

ಎಲ್ಲಿ ಪೋದಗು ಚಿಂತೆ ಪೊಲ್ಲಲಾಲಿಪ್ಪುದೆನ್ನ ।
ಸೊಲ್ಲ ಧೃತಿಯುಂ ತರಲು ಪೋಪುವಶುಭಗಳಿಲ್ಲ ।
ಮೆಲ್ಲನೆ ವಿವೇಕವಮಂ ಮೇಣ್ಣಿನಿಸುವಂತೆಸಗಿ ಮುಂದಪ್ಪ ಕಾರ್ಯದೆಸಕಾ ॥
ಯೆಲ್ಲಮಂ ಯೋಚಿಸಿದಡುಲ್ಲಾಸ ಸಂಭವಿಪ್ಪು ।
ದಲ್ಲಲ್ಲಿ ಶುಭತತಿಗಳೆಸದಪವು ಕಂಗಳಗೆ ।
ಬಲ್ಲಹರ ಬಲ್ಲಹಂ ದೇವ ನೀಂ ಸರ್ವಜ್ಞಗಜ್ಞನೇಂ ಬಿನ್ನವಿಪ್ಪುದು ॥ (23)
ಕಾಮವೃತ್ತಿಯು ಪಿಡಿಯೆ ಕೆಡುವುದೆಲ್ಲಂ ತಪೋ ।
ನೇಮಾದಿಗಳು ಪೋಪುವೈಸೆ ಬೃಂದಾಃಶಾಪ ।
ತಾಮುಸವನುಳದು ನೆನೆಯಾತ್ಮನಿಂದಾತ್ಮನಂ ತಳೆದಃಂ ಪರಾತ್ಮತೆಯನು ।
ಕೋಮಲಾಂತಃಕರಣದಿಂ ನೋಡೆ ನಿಮಗೆ ಭೂ ।
ವ್ಯೋಮಪಾತಾಳದೊಳಗೇನಸಾಧ್ಯಂ ಸುರ ।
ಸ್ತೋಮನುತ ಶೋಕವಂ ಪಂದಿಟ್ಟು ಮುಂದಪ್ಪ ಕಾರ್ಯಮಂ ಬೇಳ್ವುದನಘಾ ॥
ವೀರವಿಕ್ರಮವಿಜಯರೆಂದಾಗೆ ದೈನ್ಯದಲ । (24)
ಪಾರಚಿಂತೆಯೊಳು ಬಾಯಾರುವರೆ ದೇವ ನೀಂ ।
ಶೂರಾಗ್ರಗಣ್ಯ ರಾಜನ್ಯ ಗೋತ್ರವರೇಣ್ಯ ಶೋಕಮೆನಲೇನು ನಿನಗೆ ॥
ಧಾರಿಣೀಸುತೆಯನೊಯಿದಿರ್ಪ ಖಳನಂ ತಿಳಿಯೆ ।
ಸೂರಿಯನ ಸುತನೆಡೆಗೆ ಪೋಗಿ ಕರೆತಂದು ಚರ ।
ಕಾರವಿಂದದೊಳಡುವೆನಿದಕೆ ಚಿಂತಿಸಲೇಕೆ ಬಡಿವೆ ರಕ್ಕಸಕುಲವನು ॥ (25)
ಬೇಳದನಿತೂಳಗವ ಮಕುಟಾಗ್ರಸೀಮೆಯೊಳು ।
ತಾಳ ಸೇವನೆ ಗೈವದಲ್ಲದುಳದುವ ಬೇಳ್ವ ।
ರಾಳಲ್ಲವಾದರುಂ ಸಮಯದೊಳು ವಾಗ್ರೂಪಮೆನಿಪ ಸೇವೆಯೆನುತ್ತಲೀ ॥
ಖೂಳಬುದ್ಧಿಯೊಳನಿತ ಪದಕೆ ಬಿನ್ನವಿಸಿದೆ ದ ।
ಯಾಳುವೆನ್ನಪರಾಧಮೇನಿರ್ದಡಂ ಕ್ಷಮಿಸಿ ।
ಕಾಳರಕ್ಕಸಗನುವ ಚಿಂತಿಸಲ್ವೇಳ್ಕೆನುತಮೆರಗಿ ಕರಗಳ ಮುಗಿದನು ॥ (26)
ಚಿಕ್ಕವನದಾಗಿರಲಿ ಪಕ್ಕಿಯಾಗಲ್ ಶುಭವ ।
ಮುಕ್ಕುಳಪ ಯುಕ್ತಿಯುಕ್ತದ ಭಾಷೆಯಂ ಗ್ರಹಿಸ ।
ಲಕ್ಕುಮೆಂಬತಿನೀತಿಗಾಧಾರಭೂತ ನೀ ರಘುನಾಥನತ್ತ ಜಗದಿ ।
ಅಕ್ಕರಿಂದನುಜ ಬಿನ್ನವಿಸಿದರ್ಥಮಂ ಕೇಳ ।
ತಕ್ಕುದೆಂದರಿತು ಸಂತಸದಿಂದ ಶೋಕವು ।
ನ್ನಿಕ್ಕಡಿಯುವಾಡಿ ನಸುನಗೆಯಿಂದ ಲಕ್ಷ್ಮಣನ ನೋಡಿ ಮತ್ತಿಂತೆಂದನೂ । (27)
ಸಿರಿಯನುಂ ಬರೆ ಬಂದು ನೆರದಪರನೇಕಜನ ।
ತರಳಸತಿಸೋದರಾದಿಗಳೆಲ್ಲ ಸಂಕಟದಿ ।
ಬೆರದನೊಡನಿರದೈದಿ ಸ್ವಪ್ರಾಣಧಾರಣಗಳೆಸಗುವರು ಧರಣಿಯೊಳಗೆ ।
ನಿರತ ಬಹುವತ್ಸರಂಗಳ ಕಷ್ಟವಾದಡಂ ।
ಪರಿಕಿಸಲು ಪದಚಲನೆಗೈಯದೆಮ್ಮನುಸರಣೆ ।
ವೆರೆದು ಸಂತಸಗೊಳಪ ಸುದ್ಗುಣಂಗಳ ಕಣಿಯೆ ಸಾಧುಗಳ ಮಕುಟಮಣಿಯೆ ॥
(28)

ನಿನಗೆಣೆಯುದಾರಾಂಟು ಪೇಳ್ದ ನುಡಿ ಶುಭಕರಗ।
ಳೆನುತ ಸಂತಸದಿಂದ ತೆಗೆದಪ್ಪಿ ಸೌಮಿತ್ರಿ।
ಯನು ಹರುಷಗೊಳಿಸಿದಂ ಸರ್ವಜ್ಞತೆಯದೆಂತೊ ರಘುಕುಲಾನ್ವಯದೀಪನಾ॥
ತನಯು ಕೇಳಂದಧಿಕ ವಿನಯುವಹಾಧುರ್ಯಕರ
ದನುವಾಂತ ವಾಣಿಯಂ ಮಾರುತ್ರರಂಗೊಟ್ಟು।
ನನಿಮಿಷರ ಪೊರೆವ ದೇವಂ ಭಕ್ತ ಸಂಜೀವ ಪೊದ್ದಿದರನುಂ ಕಾಯ್ವನು॥ (29)
ಶ್ರೀಮಂತ ನೀಪೇಳ್ದ ನುಡಿ ಸತ್ಯಮದರಿಂದ।
ತಾಮುಸದಮುತಿ ಪೋದುದಾದುದುತ್ಸಹಪೆಮಗೆ।
ತಾಮರಸನೇತ್ರಯಂ ಕಾಣ್ಬ ಕಜ್ಜಕೆ ಸೂರ್ಯತನಯನಿಹ ತಾಣಕೈದಿ॥
ಸಾಮಂತಸಂಧಾನಗೈದು ಮನವಂ ಹರ್ಷ।
ಸಾಮರಸ್ಯಂಗೈದು ಸತ್ವರದಿ ಪೊರೆಯೆನುತ
ರಾಮಪುರದರಸನಾಜ್ಞಾಪಿಸಿದ ನಾನಂದಸಂದೋಹ ಮುಂದುವರಿಯೆ॥ (30)

ಪ್ರಥಮ ಸಂಧಿ ಸಮಾಪ್ತಂ.

---

## ಎರಡನೆಯ ಸಂಧಿ.

ಸೂಚನೆ॥ ತರಣಿಸುತನನುಮತದೊಳೈತಂದು ರಾಘವನ।
ಸಿರಿಚರಣಗಳ ಕಂಡು ರಿಷ್ಯಮೂಕಾಚಲಕೆ।
ಕರದೊಯ್ದು ಸುಗ್ರೀವಗೆಚ್ಚರಿಸಿದಂ ಪ್ರೀತಿಯಿಂದೆ ಮಾರುತಾತ್ಮಭವನು॥
ಗಿರಿರಾಜಸುತೆ ಕೇಳು ರಾಮಚಂದ್ರಂ ಪ್ರಿಯದಿ।
ಚರಿಸುತಿರೆ ಪಂಪಾಸರೋವರದ ತೀರದೊಳ್।
ಶರಚಾಪಹಸ್ತರಂ ಸೂರ್ಯಾಗ್ನಿನಿಭತೇಜರಿರ್ವರಂ ಕಂಡು ಭಯದಿ...
ಹರಿಕುಲಾಧಿಪ ವಾಯುವೇಗದಿಂ ಮಂತ್ರಿಗಳ।
ಬೆರೆದು ಬೆಗ್ಗಿಗಿದು ನಗನಗವಗ್ರಗಳನಡರಿ।
ಹರಿಸುತನ ಭಯದಿಂದ ಮಲಯಾಚಲವ ಸಾರ್ದ ಮುಂಗಾಣದೊಂದೆಣಿಸದೆ॥ (1)
ತಿರಿತಿರಿಗಿ ನೋಡುತ್ತ ಚೀರಿ ಪಲ್ಗಳ ಕಿರಿದು।
ಭರದಿ ವಾಲಧಿಯೆತ್ತಿ ಬಾಯಿಬಿಟ್ಟು ಮರನೇರಿ।
ಮರಳ ನೆಲದೊಳ್ಕೆಡೆದು ಮತ್ತೆ ಕಂಗಳ ತೆರೆದು ನಾಲ್ದೆಸೆಯ ನೋಡಿ ಚೀರ್ದು॥
ತ್ವರಿತದಿಂದಂಗಡಶೈಲಗಳ ಕುಪ್ಪಳಿಸಿ।
ಕರಿಸಿಂಹ ಶಾರ್ದೂಲ ಖಗಮೃಗಂಗಳನೆಲ್ಲ।
ತರುಬುತ್ತ ಕಪಿವೀರರೈದಿ ಮಲಯಾಚಲದೊಳೊಂದಡೆಯ ನಿಂದರೊಲಿದು॥ (2)
ಮೊದಲೆಮ್ಮನೀ ಪರಿಯ ಮುನಿದು ಬನದೆಡೆಗಟ್ಟಿ।
ಸುದತಿಯಂ ಸೆಳೆದು ಶುಭತತಿಗಳೆಲ್ಲವ ಮೆಟ್ಟಿ।
ಹೃದಯದುಮ್ಮಳ ಸವೆಯದತಿಮತ್ಸರಂ ಪುಟ್ಟಿ ತನುಗಳಂ ಕುಟ್ಟಕಡಿವೆ॥
ಬದಲಿಸುತ ವೇಷಮಂ ಬಂದ ಕುಲದ್ವೇಷದಿಂ।
ಸದೆಯಲೈತಂದಿರ್ಪ ವಾಲಿಯಲ್ಲದೆ ಪೆರರು।
ಪದವಿಡುವರೆಂತಿಲ್ಲಿ ಪವನಸುತ ನೋಡೆಂದು ದುರ್ದೆಸೆಯನೆನುತಳಲಿದಂ॥ (3)

ಪರರ ಬಾಧಿಸುವ ದುರ್ಜೀವಿಗಾಯುಷ್ಯಬಲ ।
ಪರರೆ ಪೆರ್ಚುವದು ಸರಸಿಜಭವನ ಸಾಮರ್ಥ್ಯ ।
ಕರಣೀಯವಲ್ಲದೀ ವಾಲಿಯೆಸಗಿದ ಪಾಪಭರದಿಂದ ಉಳಿವನೆಂತು ॥
ಅರಿತು ಧರ್ಮಂಗಳಾಚರಣೆಗೈಯುವ ಜನರಿ ।
ಗಿರದೆ ದುರ್ದಶೆ ಯುಳಿವುದೆನುತ ಹರಿವರ ಮರುಗು ।
ತಿರೆ ಕಂಡು ಮರುತಜಂ ಮಾವನೊಡನಿಂತೆಂದ ಮಾನಸೋಲ್ಲಾಸದಿಂದ ॥ (4)

ಈ ತಪೋವನವ ಪೊಗಲಮ್ಮನೆಂದಿಗು ವಾಲಿ ।
ಕಾತರಿಸಿ ಕಳವಳಿಸಿ ಕಡುಭಯದಲೈತಂದ ।
ಮಾತಿಗುತ್ತರವುಂಟೆ ಮಾವ ಲಾಲಿಸು ಧೈರ್ಯವಿಡಿಯೆ ಸರ್ವಾರ್ಥಸಿದ್ಧಿ ॥
ಜಾತವಾದಪುದೆಂದು ಮಾರುತೋದ್ಭವ ಪೇಳ್ದ ।
ನೀತಿಗಂ ಸಂತಸದಿ ಮಗುಳೆಂದ ದಿನಪಸಂ ।
ಭೂತ ಧೀಮಂತರೊಳು ಧೊರೆ ಸಕಲಸೌಖ್ಯಗಳದಾತಾರನಹುದೆನ್ನುತ ॥ (5)

ಅರಿತರಿಯದಾವಿಲ್ಲ ಪರಿಯಂತ ಸಂಕಟದಿ ।
ಬರುವದಾದುದು ತಾತ ಜಾತಾನುರಾಗದಿಂ ।
ಪರಿಹರಿಸುತೆಡರುಗಳ ಭಯರಸದ ತೊಡರುಗಳ ತತ್ಪ್ರತೀಕಾರವಂ ।
ವಿರಚಿಪುದುಪಾಯವಂ ಶತ್ರುಗಳಪಾಯವಂ ।
ತರಿಯುವೇಳ್ಕೆಂದೆನುತ ಸುಗ್ರೀವ ಮಾಧುರ್ಯ ।
ತರನುಡಿಗಳಿಂದವಮುಪಚರಿಸೆ ಮಾರುತಿ ನುಡಿದನಾ ವಿಭಾಕರತನಯಗೆ ॥ (6)

ನಿಗಮಾಗಮಂಗಳಧ್ಯಯನವಾಗಲ್ಮತ್ತೆ ।
ಖಗನ ಚರಣಕೆ ನಮಿಸಿ ಗುರುದಕ್ಷಿಣೆಗೆ ಚಿತ್ತ ।
ಸೊಗಸಿದುದು ಬೇಡಲೊಪ್ಪಿಗಿಸಿ ಕೃತಕೃತ್ಯನಹೆನೆನುತ ವಿಜ್ಞಾಪಿಸಿದರೆ ॥
ನಗುತಮಾಜ್ಞಾಪಿಸಿದ ನೀನು ಸಂತತವೆನ್ನ ।
ಮಗನೆಡೆಯುಲಿರ್ಪುದೆನಲೊಪ್ಪಿ ಪದಕೆರಗಿದಡೆ ।
ಪಗಲಾಣ್ಮ ಹರುಷದಿಂ ಪರಸಿ ಕಳುಪಿದನೆನ್ನ ದಯದಿಂ ಭವನ್ನಿಕಟಕೆ ॥ (7)

ಗುರುವಚನಗೌರವದಿ ಬಂದಾನು ಭವದೀಯ ।
ಪೊರೆಯುತೊಪ್ಪಿದೆ ಮತ್ತೆ ಮಜ್ಜನನಿ ನಿಮ್ಮ ಸೋ ।
ದರಿಯಾದ ಕತದಿಂದ ಗುರುವಿಗತಿಶಯವಾದ ಮಿತ್ರವು ಸಂಜನಿಸಿತೆನಗೆ ॥
ಹರಿಕುಲಾಧಿಪ ಚಿಂತೆ ಯಾತಕೆನ್ನಿಂದಪ್ಪ ।
ದರುಹಿದಡೆ ಮರೆಯುಳ್ಳ ತೆರದಿ ರಚಿಸುವೆನೆಂದು ।
ಮಾರುತಾತ್ಮಜಪೇಳೆ ತರಣಿಸುತನಿಂತೆಂದು ಬಿತ್ತರಿಸಿದಂ ಪ್ರಿಯದೊಳು ॥ (8)

ಕಪಿಯವೇಷವನುಳಿದು ತಪಸಿಯಾಕೃತಿದಳೆದು ।
ಗುಪಿತದಿಂ ನೀನೈದಿ ಪಂಪಾಸರತ್ತಟದಿ ।
ಸಪದಿ ಸಂಚರಿಪ ತಾಪಸರ ಪರಿಯಂ ತಿಳಿದು ಸಾಧ್ವಸಾಧುತೆಗಳರಿದು ॥
ಕಪಟವಿಲ್ಲದೆ ಸಹಜವಾಗಿ ತೋರಿದರೆ ನಮ ।
ಗುಪಕಾರಗೈವ ಸಾಹಸವು ಕಾಣ್ಪಟ್ಟರಾ ।
ನೃಪತಿಗಭಿಮತವನೆಚ್ಚರಿಸಿ ನೇಹವ ಬಳಸಿ ಮಗುಳ್ ನೀ ನೈತಪ್ಪುದು ॥ (9)

ಕ್ರೂರಕಲ್ಮಷರಾದರವರಿಗೆ ನಿಜಾಕೃತಿಯು ।
ತೋರದಲ್ಲದರ್ಗೆ ಕೈಸನ್ನೆ ಗೈದರೆ ಮರೆಯು ।
ಸಾರುವೆನೆನುತ್ತ ಸುಗ್ರೀವ ಪೇಳದ ಪರಿಯನವಧರಿಸಿ ಪ್ರೇಮದಿಂದ ॥
ಮಾರುತಾತ್ಮಜ ಗಿರಿಯನುಳಿದು ವಟುರೂಪ ಸಂ ।
ಧಾರಣಂಗೈದು ಫಲಪುಷ್ಪತುಳಸೀದಳಗ ।
ಳಾರೈವನಂದದಿಂದೈತಂದ ಶ್ರೀರಾಮಲಕ್ಷ್ಮಣರ್ ಚಲಿಸುವೆಡೆಗೆ ॥ (10)
ಧರಿಸಿರುವ ವಲ್ಕಲಾಂಬರದಿಂದ ಮಸ್ತಕದಿ ।
ತುರುಗುವ ಸಟಾಭಾರದಿಂದುಭಯಕರಗಳೊಳ್ ।
ಮೆರೆವ ಶರಚಾಪಗಳಿಂದ ಶುಭಲಕ್ಷಣಾನ್ವಿತದೇಹಭಾಸದಿಂದೆ ॥
ಹರುಷದಿಂ ಸೌಮಿತ್ರಿ ಸೇವಿಸುತ ಕೆಲದಲೊ ।
ಪ್ಪಿರುವ ರಾಘವನ ಸನ್ಮೂರ್ತಿಯಂ ಕಾಣುತ್ತೆ ।
ಪರಬೊಮ್ಮನೆಂದರಿದು ಹರುಷಿಸಿದ ಮಾರುತಿಯು ಜ್ಞಾನಬಲವಿನ್ನೆಂತುಟೊ ॥ (11
ಕಂಡಮಂದಾಧಿಕ್ಯಹರುಷದಿಂ ಮಾರುತಿಯು ।
ಖಂಡತೇಜೋರಾಶಿಯೆನುತರಿತು ಪ್ರೀತಿ ಮಂ ।
ಕೊಂಡು ಮನದಿಷ್ಟಾರ್ಥಪ್ರೊಡಗೂಡಿತೆಂದೆನುತ ಮೆಲ್ಲನಲ್ಲಿ ನಿಲುತಾ ॥
ಪುಂಡರೀಕಾಯತೇಕ್ಷನ ಪೊರೆಗೆ ನಡೆತಂದು ।
ಗಂಡುಗಲಿಗಳ ನೋಡಿ ಮಾನಸದ ಸಂತಸದಿ ।
ಮಂಡೆಯನ್ನೊಲದೊಲದು ಮೂದಲಿಸಲನುಗೈಯೆ ಮೃದುಮಧುರ ವಾಣಿಯಿಂದ ॥
ಹರಿಸರಸಿಜಾಸನರೊ, ಸುರಪಸುತಮನ್ಮಥರೊ । (12)
ತರಣಿಶಶಿಗಳೊ ಸುರೇಂದ್ರಾಪ್ತವೈದ್ಯರೊ ಮೇಣು ।
ವರುಣಮರುತರೊ ಚೈತ್ರ ವೈಶ್ರವಣನಂದನರೊ ಮಾನುಷಾಕಾರವಿಡಿದು ॥
ಶರಚಾಪಗಳ್ವಿಡಿದು ಮುನಿವೇಷಗಳ ತಳೆದು ।
ಕರುಣಾರಸಂ ಶಾಂತಿಯಾಕೃತಿಗಳಂ ತಳೆದು ।
ಧರಣಿಯಂ ಪೊರೆಯಲೈತಂದ ಮಾಳ್ಕೆಯೊಳೆನಗೆ ತೋರುತಿದೆ ನೃಪತಿಗಳಿರಾ ॥ (13)
ಶ್ರೀಮಂತರತಿರೂಪಸಂಪನ್ನರಮಿತ ಸು ।
ಪ್ರೇಮ ವಿಶ್ರಾಂತಗಾಮಿಗಳು ಚತುರಾಬ್ಧಿಯಂ ।
ತೀ ಮಹಿಯನಾಳ್ವ ಲಕ್ಷಣಸುಲಕ್ಷಿತಪದ್ಮನೇತ್ರರತಿಶೂರರೆನಿಸಿ ॥
ವ್ಯೋಮಚಿಕುರವ ಚಾಪನಿಭ ಚಾಪಗಳನಾಂತು ।
ಭೂಮಿಯಿಂದಾಗಸವನಿಳುಹುವ ಪರಾಕ್ರಮಿಗ ।
ಳೀಮಹಿಗದೃಷ್ಟಪೂರ್ವದಿ ಬಂದಿರೆಂದೆನಗೆ ತೋರುತಿಹುದಚ್ಚರಿಯನು ॥ (14)
ಸಕಲಾಂಗಸೌಂದರ್ಯಮಕಳಂಕತರ ಶೌರ್ಯ ।
ನಿಖಿಲಲೋಕವನಾಳುವೌದಾರ್ಯಗಾಂಭೀರ್ಯ ।
ಶಕುತ್ರಿಯುಕುತಿಗಳಿಂದಲೆಸದಿಹ ಮಹಾರಾಜಲಕ್ಷಣಗಳಾಂತೊಂಪ್ಪವಾ ॥
ಸುಕುಮಾರಶರೀರ ಸುಗುಣಭದ್ರಾಕಾರ ।
ರಕುಟಿಲಮಹೋತ್ಸಾಹಮಸ್ಯೋನ್ಯ ಸಮದೇಹ ।
ಪ್ರಕಟವಿಕ್ರಮರು ನೀವಾರದೇಂಕಾರಣದೊಳೀವನಕೆ ಬರ್ಪುದಾಯ್ತು ॥ (15)

ಧರೆಯೊಳು ಭವತ್ಸದೃಶರಿಲ್ಲ ಲಕುಮಿಯನಲ್ಲ ।
ಸರಸಿಜೋದ್ಭವರೆನಿಸಿ ತೋರುತಿದೆಯಾಕೃತಿಯು ।
ಪರಮಮಂಗಳಭರಿತವಾಗಿ ಕಂಗೊಳಿಸುತಿದೆ ಭಕ್ತಿ ಮುಂಬರಿವುತಿದೆಕೋ ॥
ಪರಿಪೂರ್ಣರೂಪ ನೀವರಿಯದುದದೇನಿಹುದು ।
ಧರೆಯಲಖಿಲಪ್ರಾಣಿಗಳು ಬುದ್ಧಿಸಾಕ್ಷಿಯೆಂ ।
ದರಿವುತಿದೆ ಮನವೆಂದು ಕಪಟವಟುಕೇಳ್ವುದಂ ಕಾಣುತಚ್ಚರಿಯಿಂದಲಿ ॥ (16)

ರಾಮಲಕ್ಷ್ಮಣರು ಮೊಗಮೊಗಗಳಂ ನೋಡುತ್ತ ।
ಪ್ರೇಮದಿಂ ನಸುನಗುತಲಿರೆ ಮರುತ್ಸಂಭೂತ ।
ನಾ ಮಹಿಮರೊಡನೆಂದ ದೇವರಾಲಿಪ್ಪುದೆನ್ನಪರಿಯ ಬಿತ್ತರಿಪೆ ನಯದಿ ॥
ತಾಮರಸಮಿತ್ರನಂದನನ ಸಚಿವ ನಾಂ ಮ ।
ತ್ತೀ ಮಹಾದ್ರಿಯೊಳಿರ್ದೆ ಭವದಾಗಮವ ಕಂಡು ।
ನೇಮಿಸಿದರಾಂ ಬಂದು ಕಂಡೆನು ಭವಚ್ಚರಣಪುಂಡರೀಕಂಗಳನ್ನು ॥ (17)

ವಂಚನಾಪರನಲ್ಲ ಭವದೀಯ ಕೃಪೆಯಿಂದ ।
ಕಿಂಚಿತಿರ್ಪುದು ಬುದ್ಧಿಯರಿತಿರ್ಪೆ ನಿಖಿಲಪ್ರ ।
ಪಂಚಾಧಿಪತಿಯೆನುತಮದಕೆಸಂದೆಗವಿಲ್ಲ ದಯದಿಂದ ವೃತ್ತಾಂತವಂ ॥
ಚಂಚಲಿಸದುಸುರವೇಳ್ಕೆನುತಲಿಂಗಿತವರಿತು ।
ಮುಂಚಿಸುವ ಯುಕುತಿಗಳ ಪೆರ್ಚಿಗೆಯ ಕಂಡು ರೋ ।
ಮಾಂಚಿತದಿ ರಘುವೀರ ಲಕ್ಷ್ಮಣನೊಳಂತೆಂದನಮಿತದಾಶ್ಚರ್ಯದಿಂದ ॥ (18)

ಎನಿತು ನಿಗಮಂಗಳೋದಿರ್ದನಿವಶಾಸ್ತ್ರಗಳ ।
ನೆನಿಸನಧ್ಯಯನಗೈದಿರ್ದ ಜಗತೀತಳದೊ ।
ಳೆನಿತು ಮಾತುಗಳುಂಟವೆಲ್ಲಮಂ ತಿಳಿದಿರ್ದ ಸರ್ವದರ್ಶಿಯೆನುತ್ತಲಿ ॥
ಮನಕೆ ತೋರುತ್ತಲಿದೆ ಸೌಮಿತ್ರಿ ನಾವುಕಂಡ ।
ಜನರೊಳೀಪರಿಯ ಸರ್ವಜ್ಞನಂ ನೋಡಿಲ್ಲ ।
ಮಿನಿತು ಸದ್ಗುಣಶಾಲಿ ಸಚಿವನಾಗಿರಲೀತನಧಿನಾಥನೆಂತಿರ್ಪನೋ ॥ (19)

ತ್ವರಿತಸಂದಿಗ್ಧವಿಸ್ವರವೆಂಬ ದೋಷಗಳ ।
ಪರಿದುರಸ್ಥಲಕಂಠಮೂರ್ಧಸ್ಥಾನಗಳ ಪೊಂದಿ ।
ಸುರೆವ ವರ್ಣಗಳಿಂದ ಮಧ್ಯಮಸ್ವರಪಿಡಿದು ಸಂಸ್ಕೃತಸುವಾಣಿಯಿಂದ ॥
ಬೆರಗುಗೊಳಿಸುವ ಪೆರರಚಿತ್ತವೃತ್ತಿಯೊಳಿರ್ಪ ।
ಪರಿಗಳೆಲ್ಲವತಿಳಿದು ಸೂಚಿಸುವನಿವ ನೋಡೆ ।
ಪರಮಸುಜ್ಞಾನವಿಗ್ರಹವಲ್ಲದೀ ಧರಾತಳದಿ ಸಾಮಾನ್ಯನಲ್ಲ ॥ (20)

ಇಂತಪ್ಪ ಮಿತ್ರನಂ ಸಂಗ್ರಹಿಸಿ ಪೊರೆದ ಭೂ ।
ಕಾಂತಂಗೆ ಮನದ ಬಯಕೆಗಳು ಕೈಸಾರುವದ ।
ಕಂತರವದೇನಿಹುದು ಮುಂದರಿತು ಮತ್ತೀತನೊಡನೆ ಮಾತಾಡೆನುತಲಿ ॥
ಸಂತಸದಿ ರಾಘವಂ ಬೆಸಸೆ ಲಕ್ಷ್ಮಣ ನಗುತ ।
ಮಂತರಂಗದಿ ಬಾಹ್ಯಜನರರಿಯದಂದದಿಂ ।
ಮುಂತಪ್ಪ ಕಜ್ಜಗಳ ಕೇಳಲುಜ್ಜುಗಗೊಂಡ ಚಿತ್ತದಾನಂದದಿಂದ ॥ (21)

ಪಂಡಿತಾಗ್ರಣಿ ಭವದ್ಗುಣಗಣಗಳೆಲ್ಲಮುಂ ।
ದ್ದಂಡತರವಾಗೆಮಗೆ ತಿಳದುದಾವ್ರುಬಂದು ಮಾ ।
ರ್ತಾಂಡತನಯನ ಕಾಂಬೆವೆಂಬಾಜ್ಞಗದೊಳಲ್ಲಿಗೈತಂದೆವೆಂದರಿವುದು ॥
ಗಂಡುಗಲಿ ರವಿತನಯ ನೋಡಿ ಪ್ರಿಯದಿ ಹರ್ಷ ।
ಗೊಂಡು ನಿನ್ನಂ ಕಳುಪಲಾದುದುತ್ತ್ರಮುಮವನ ।
ಕಂಡಪೆವೆನುತ್ತ ಸೌಮಿತ್ರಿ ಸೂಚಿಸೆ ಪ್ರೀತಿಗೊಂಡ ಪವಮಾನಾತ್ಮಭವನು ॥ (22)

ಕುವಲಯಾಧಿಪನನುಜನೊರೆದ ಶುಭವಾಣಿಗಂ ।
ಪವನಜಂ ಸಂತಸಂಗೊಂಡು ಸುಗ್ರೀವಂಗೆ ।
ತವಕದಿಂದೊದಗಿದುದು ಯೋಚಿಸಿದ ಕಾರ್ಯಮಿನ್ನೆಂತುಟೊ ಕೃತಪುಣ್ಯವ್ರು ॥
ಶಿವನ ಕೃಪೆಯಿಂ ಬಂದ ಕಾರ್ಯಕ್ಕೈಗೂಡಿತೆಂ ।
ದವಿರಳಾನಂದದಿಂ ಮಗುಳೆ ಸೌಮಿತ್ರಿಯೊಳು ।
ನವಸುಧಾರಸಕಲಿತ ವಾಣಿಯಿಂ ಮೂದಲಿಸಲನುಗೈದನತಿಶಯಮೆನೆ ॥ (23)

ದೊರೆತನದ ವೋಡಿಯಂ ಪರಿದು ಭೂಷಾಂಬರವ ।
ಧರಿಸುವದನುಳದು ಪವಗಮನದಿಂದೀ ಬನಕೆ ।
ಬರಲದೇಂ ಕಾರಣಂ ಭವದೀಯನಾಮಮಂ ತಿಳಪಿದೊಡೆ ಸಂಭ್ರಮದೊಳು ॥
ಚರಣಾಕಾನತನಪ್ಪೆನೆನುತ ಮಾರುತಿ ಕೇಳ ।
ಲರಿತು ರಘುವೀರನಪ್ಪಣೆಯಿಂದ ವೃತ್ತಾಂತ ।
ದಿರವ ಬಿತ್ತ್ರರಿಸಿದಂ ಸೌಮಿತ್ರಿ ನಿಜಮನೋಲ್ಲಾಸದೊರ್ಚಿಗೆಯಿಂದಲಿ ॥ (24)

ವಾಸವನಮಿತ್ರ ದಶರಥಮಹಾರಾಜ ನಿಜ ।
ವಾಸಿಯಿಂದಖಿಲಲೋಕವಪೊರೆದು ಸರ್ವಗುಣ ।
ರಾಸಿಯೆಂದೆನಿಸಿ ತಂದೆಯ ತಂದೆಯಂದದಿಂ ಲೋಕವಿಶ್ರುತ ಕೀರ್ತಿಯಿಂ ॥
ಭೂಸುರಸುರಾಸುರಪ್ರಕರ ಪೊಗಳುತ್ತಿರೆ ।
ವಾಸವೋಪಮಿತದಿಂ ಕೋಸಲದಿ ಸುಖಮಿರ್ದು ।
ಭಾಸುರ ಶ್ರೀನೃಪತಿಯಾತ್ಮಭವರೆಂದರಿವುದೆಮ್ಮನಂ ನೀವೆಂದನು ॥ (25)

ಜನಿಸಿದೆವ್ರು ತನ್ನೃಪಗೆ ನಾಲ್ವರು ಕುಮಾರಕರ್ ।
ಘನನೀಲಸಂಕಾಶನೀ ರಾಮನಗ್ರಭವ ।
ನನುಜಾತರೀತಗಾಂ ಭರತ ಶತ್ರುಘ್ನರಿರಲೊಂದಾಗಿ ಹರುಷದಿಂದಾ ॥
ಜನಪನರ್ಧಾಂಗಿ ಕೈಕೆತರುಣಿ ಪೂರ್ವದೊಳ ।
ಗನಿಮಿಷಾಸುರಯುದ್ಧದಲ್ಲಿ ಪತಿಯಿಂ ಪಡೆದ ।
ಳನುವಾದ ವರವೆರಡನದರಿಂದೆ ಯಾಚಿಸಿದಳರಸನೋಲ್ಕಾಲವಶದಿಂ ॥ (26)

ಭರತನಂ ಯುವರಾಜಪದವಿಯೊಳ್ನಿಲಿಸಿ ಕರ ।
ತರವಾದ ದಂಡಕಾರಣ್ಯದೊಳ್ ಪದಿನಾಲ್ಕು ।
ವರುಷಮಿ ರಾಮನಿರಲೆಂದು ನೇಮಿಪುದೆಂದ ವಾಣಿಯಂ ಕೇಳ ನೃಪನು ॥
ಪರವಶಂ ತಾನಾಗೆ ಕಾಣುತಂ ರಘುವರಂ ।
ಗುರುವಚನಕೆಂತಧಿಕಮಿಲ್ಲೆನುತನುಜ್ಞೆಯಿಂ ।
ಶಿರದೊಳಾಂತೈದುತಿರೆ ತತ್ಕಾಂತೆ ಪತಿಯೊಡನೆ ಬಂದಳತಿಭಕ್ತಿಯಿಂದ ॥ (27)

ತಂದೆಗಿಮ್ಮಡಿಯಾಗ್ರಭವನೆಂದು ತತ್ಪದರ।
ವಿಂದಮಂ ಸೇವಿಸುತಕೃತಕೃತ್ಯನಪ್ಪರೈ।
ತಂದೆನೀ ಶ್ರೀರಾಮನೊಡನೆ ಗುಹನಿಹ ಶೃಂಗಿವೇರಪುರಕಂ ಭರದೊಳು॥
ಮಂದಾಕಿನೀನದಿಯನುರೆ ದಾಂಟಿ ಗುಹನಿಂದೆ।
ಬಂದುಂ ಭರದ್ವಾಜಮುನಿಪನಂ ಕಂಡುವಾ।
ನಂದದೊಳ್ ಚಿತ್ರಕೂಟಾದ್ರಿಗಂ ನಡೆತಂದು ಪರ್ಣಮಂದಿರದೊಳಿರಲು॥ (28)

ತಾತನೀ ದುಃಖದಿಂದಮರೇಶನೆಡೆಗೈದೆ।
ಮಾತುಳನ ಪುರದಿಂದ ಬಂದು ಭರತಂ ತನ್ನ।
ಮಾತೆಯಂ ಧಿಕ್ಕರಿಸಿ ಪಿತೃ ಕೃತ್ಯಮಂ ರಚಿಸಿ ನಿಜಜನಂ ಸಹಿತ ಭರದಿ॥
ವೀತ ಕಲ್ಮಷನಾಗೆ ನಡೆತಂದು ಕಂಡು ರಘು।
ನಾಥನ ಪದಾಬ್ಜಮಂ ತತ್ಪಾದುಕೆಯ ಶಿರದೊ।
ಳಾಂತು ಕೊಂಡೈದಿದಂ ಮರಳಿ ಸಾಕೇತಪುರದತ್ತಪಿತ್ತ ಬಳಿಕ॥ (29)

ಚಿತ್ರಕೂಟಾದ್ರಿಯಿಂದೈತಂದು ವೇಗದಿಂ।
ದತ್ರಿಯಾಶ್ರಮಕೈದಿ ತನ್ಮುನಿಪನಂ ಕಂಡು।
ರಾತ್ರಿಂಚರಾಧಮ ವಿರಾಧನಂ ಸಂಹರಿಸಿ ಪೂರ್ವಪದವಂ ಕರುಣಿಸಿ।
ಮಿತ್ರಸಂಕಾಶ ಶರಭಂಗಮುನಿಗಂ ಮಣಿದು।
ಮೈತ್ರಾವರುಣಿಯನ್ನು ಕಾಂಬ ತವಕದೊಳಿ ತ।
ಚ್ಛಾತ್ರನಾದ ಸುತೀಕ್ಷ್ಣರುಷಿಯಂಪೆ ಬಂದೆನಾಯತಿನಾಥ ನಾಶ್ರಮಕ್ಕೆ॥ (30)

ಕಲಶಸಂಭವನಿಂದ ಶರಚಾಪಮಂ ಕೊಂಡು।
ವಿಲಸಿತದ ಪಂಚವಟಿಗೈತಂದು ನಿರ್ಮಲ।
ಸ್ಥಳದೊಳಿಲೆವನೆಗೈದು ಪಾವನೆಯುಮಾದ ಗೋದಾವರೀತೀರದಲಿ।
ನಲವಿನಿಂದಿರಲೊಂದು ದಿನಮಸುರೆಶೂರ್ಪನಖಿ।
ಚೆಲುವತನವಂ ತೋರ್ದು ಮಾಯೆಯಿಂ ಬಳಸಿರಲ್।
ಕಳವಳಸೆ ಕರ್ಣನಾಸಿಕಗಳಂ ತರಿದೆನಾನಗ್ರಜನನುಜ್ಞೆಯಿಂದ॥ (31)

ಅಸುರೆ ಘೋಳೆಂದಳುತ ಪೋಗಿ ಖರನೆಂಬ ರಾ।
ಕ್ಷಸಗುಸುರೆ ತ್ರಿಶಿರಧೂಷಣಮುಖ್ಯರುಂ ಚತು।
ರ್ದಶಸಹಸ್ರಾತಿಬಲದ ದನುಜರೊಡನೈತಂದುದಂ ಕಂಡು ರಘುನಾಥನು॥
ನಿಶಿತಾಸ್ತ್ರದಿಂದಮರರಿಪುಗಳಂ ಸಂಹರಿಸಿ।
ಬಸವಳಿದುಮಾದಸುರೆ ಲಂಕೇಶಗಂ ದೂರೆ।
ಸಸಿನೆ ಮಾಯಾವಿಮಾರೀಚಸಹಿತಂ ಬಂದನೇನೆಂಬೆನಚ್ಚರಿಯನು॥ (32)

ಸುಳಿಯೆ ಮಾರೀಚನತಿಚಿತ್ರತರ ಮೃಗವಾಗಿ।
ಲಲನೆಸೀತಾದೇವಿ ಕಂಡು ಬೇಡಲ್ಕೆ ರಘು।
ಕುಲತಿಲಕನದರ ಬೆಂಬೊತ್ತಿದೊಡೆ ಸಿಲ್ಕದಿರೆ ಮಾಯೆಯೆಂದರಿತು ಕೊಲಲು॥
ನೆಲಕವಂ ಬೀಳ್ವಾಗ ಸೀತೆಲಕ್ಷ್ಮಣರೆಂದು।
ಮುಲಿಯಲಂಬಿಕೆ ತನ್ನನಟ್ಟಲತ್ತಲುಮಿತ್ತ।
ಖಳದಶಾಸ್ಯಂ ಯತಿಯ ರೂಪಾಂತುಕೊಂಡೊಯ್ದನಟವಿಯೊಳ್ಭೂಸುತೆಯನು॥ (33)

ಸೀತೆಯಂ ಕಾಣದರಸುತ್ತಿರೆ ರಾವಣನ ।
ಘಾತದಿಂದಸುವೊತ್ತುವಿರ್ಪ ವಿಹಗೇಂದ್ರನಂ ।
ವಾತನಾಡಿಸಿ ಮಗುಳೆ ವೃತ್ತಾಂತಮಂ ಕೇಳ ಸುರಪದವಿಗವನ ನಿಲಿಸಿ ॥
ಭೂತನೂಜಾತೆಯಂ ಕಾಂಬ ಕತದಿಂದ ಮುಂ।
ದೈತರುತವಿರೆ ಕಬಂಧಾಖ್ಯನೆಂದೆಂಬೊರ್ವ ।
ದೈತೇಯನ ವಿಕಾರದೇಹಮಂ ಕಾಣುತಂ ವಿಸ್ಮಯಂಗೊಂಡವನಸ್ತಾ ॥ (34)

ಬಂದೊಂದುಯೋಜನದ ಬಾಹುಗಳನತಿಶೀಘ್ರ ।
ದಿಂದತರಿದಿಟ್ಟು ಬಳಿಕವನಸುವನೆಳೆಯಲ್ಕೆ ।
ಗಂಧರ್ವರೂಪಮಂ ತಾಳ್ದಂಬರಾಂಗಣದೊಳಂತೆಂದನತಿವಿನಯದಿಂ ॥
ಇಂದಿರಾಪತಿ ನಿಮ್ಮ ಮನದಿಷ್ಟಮಪ್ಪುದರ ।
ಿಂದಸಖಸಂಜಾತನಿಂದೆನುತ ಮರಳದಂ ।
ಬಂದೆವಾತನನುಡಿಯು ನಾಂತ್ರಿತ್ತಮುಖವಾಗಿ ಕಪಿನಾಥನಂ ಕಾಣಲು ॥ (35)

ಬರುತಿರಲ್ಕ ಬರಿಯೆಂಬೊರ್ವಳತಿಭಕ್ತಿಯಿಂ ।
ಕರದೊಯ್ದು ನಿಜಗೃಹಕೆ ಶ್ರೀರಾಮಚಂದ್ರನಂ ।
ಧರೆಯು ಭಾರವ ಕಳೆಯಲೋಸುಗಂ ಬಂದಿರ್ಪ ಹರಿಯೆಂದು ತಿಳದು ನುತಿಸಿ ॥
ನರದೇಹಮಂ ಬಿಟ್ಟು ದಿವ್ಯರೂಪವ ತಾಳ ।
ಪರಮಋಷಿಪದವಿಯಂ ಸಾರಲ್ಕೆ ಬಂದೆವಾವು ।
ನರರೂಪನಾಂತೆಸೆವ ನೀನಾರೆನಲ್ಪವನತನುಜಾತನಿಂತೆಂದನು ॥ (36)

ಬಲ್ಲೆನಾಂ ರಘುವನೆಪದಪಲ್ಲವಂಗಳಂ ।
ಬಲ್ಲದರ ಬಲ್ಲಿದನೆನುತ್ತಿರಿವೆ ಮರೆವೂಜ ।
ದೆಲ್ಲಮಂ ವಿಸ್ತರದಿ ಬಿನ್ನವಿಪೆ ತಿಳವುದೆನ್ನಭಿಮತಗಳನ್ನು ಮುದದಿ ॥
ಇಲ್ಲಿಗೈತರಲು ಮಾನುಷರೂಪನಾಂತೆ ಯತಿ ।
ಯಲ್ಲಂ ಪ್ಲವಂಗಮಂ ಪವನಸಂಭೂತ ಕಪಿ ।
ವಲ್ಲಭನ ಮಂತ್ರಿ ಹನುಮಂತನೆಂಭಿದಾನವೆಸಗಿತೀ ಲೋಕದೊಳಗೆ ॥ (37)

ವಾಲಿಸುಗ್ರೀವರೆಂದೀರ್ವರೇಕೋದರರು ।
ಮೇಲೆ ವಿದ್ವೇಷ ಸಂಭವಿಸಿತಿಬ್ಬರಿಗೊಂದು ।
ಕಾಲದೊಳು ಬಲಿಯತಾಗಿದಿರಾಗಿ ಕಾದುತಂ ಕಣ್ಣೆಟ್ಟುತರಹರಿಸದೇ ॥
ಭೂಲೋಕಮಂ ಸುತ್ತಿ ಬಂದು ಮೌನಿಯ ಪರ್ಣ ।
ಶಾಲೆಯೊತ್ತಂ ಸಾರಿ ತನ್ನಿಧಿಯೊಳಿರೆ ಯುವಿಗ ।
ಳಾಲಯಕೆ ಬರಶಾಪಭಯದಿಂದ ಸುರಪಸುತ ಹೇಳನಂಗೈದುಳದನು ॥ (38)

ಸಿರಿಪೋಗಿ ಪಟ್ಟಣವ ನೀಗಿಭಯದಿಂ ಬಂದು ।
ಗಿರಿಯಗ್ರದೊಳು ನಿಂದು ಮುಂಗಾಣದಳ ಚಿಂತೆ ।
ವೆರದಳಲುತಿರಲನ್ನೆಗಂ ಬಂದ ನಾರದಂ ಪರಮಕಾರುಣ್ಯದಿಂದ ॥
ವರಮೌನಿಯಂ ಕಂಡು ಚರಣಕಾನತನಾಗಿ ।
ಕರಗಳಂ ಮುಗಿದರ್ಚನಂಗೈದು ಪ್ರೀತಿಯಿಂ ।
ಬರಿಸಿಕೊಳಲಾಮೌನಿ ಕಂಡವಸ್ಥೆಯು ಪರಿಯ ಮುಗುಳ್ನಗೆಯಲಿಂತೆಂದನು ॥ (39)

ತರಣಿಸುತ ನೀನೇತಕಳಲುತಿಹೆ ಪರಬೊಮ್ಮ ।
ಬರುವ ಭೂಮಿಾತ್ರಳಕೆ ದಶರಥಗೆ ಸುತನೆನಿಸಿ ।
ದುರುಳದಶಕಂಠನಂ ಮಥಿಸಲೆಂದೈತಪ್ಪನಾ ಜನಸ್ಥಾನದೆಡೆಗೆ ॥
ಖರದೂಷಣತ್ರಿಸಿರಮುಖ್ಯದಾನವರುಗಳ ।
ತರಿದಾ ಕಬಂಧನಂ ಕಡಿದಿಟ್ಟು ಶಬರಿಯಂ ।
ಪೊರೆದು ಪಂಪಾತಟಕೆ ಬರುವ ಲಕ್ಷ್ಮಣಸಹಿತ ಮಾನುಷಾಕಾರದಿಂದ ॥ (40)
ನಳನಾಕ್ಷ ರಾಮನಂ ಕಂಡು ಸಂತಸಗೊಂಡು ।
ನಳಿನಮುಖಿಯಿರವ ಸೂಚನೆ ಗೈದರಾಕ್ಷಣದಿ ।
ಕೆಳೆಯಿಂದ ಕೈವಿಡಿದು ವಾಲಿಯಂ ಸಂಹರಿಸಿ ದೊರೆತನದ ಸಿರಿಯನಿತ್ತು ॥
ಜಲಧಿಮೇಖಲೆಗಧಿಕವೆನಿಪ ನೀ ಚಪಲತೆಯ ।
ಅಳಲಬೇಡವೆನುತ್ತ ಸುರಮುನಿ ಪೇಳ್ದರುಗ ।
ಉಳದು ಚಿಂತೆಯ ಭವನ್ಮಾರ್ಗರಕ್ಷಣೆ ಗೈವುತಿರ್ದೆವಾವಿನಿಸು ದಿನವು ॥ (41)
ಕೃತಪುಣ್ಯ ಪರಿಪಾಕದಿಂದ ಶ್ರೀಮೂರ್ತಿ ಸಂ ।
ಗತಿಯಾದುದೆಮಗೆ ಸುಗ್ರೀವನತಿ ಭಕ್ತಿಯಿಂ ।
ಸತಿಯ ತಂದೊಪ್ಪಿಸುವನಿದಕೆ ಸಂದೆಗಮಿಲ್ಲ ಹಿತವಿಡಿದು ತಿಳದುಸೊಲ್ಲ ॥
ಪತಿಕರಿಸಿ ದಯದಿಂದ ಪಾಲಿಸಲ್ಕಾಸೂರ್ಯ ।
ಸುತನಿಂದ ಮನದಿಷ್ಟವಹುದೆನುತ ಪೇಳ್ದ ಶುಭ ।
ಮತಿಯು ವಾಣಿಯು ಕೇಳ ಸಂತಸದಿ ಶ್ರೀರಾಮಚಂದ್ರನಿಂತೆಂದನೊಲಿದು ॥ (42)
ತರಣಿ ಕುಲದೊಳಗಮಿತ ನರನಾಥರುದಿಸಿದರು ।
ತರಣಿಸಮವಿಕ್ರಮರು ಮತ್ತಾವ ಗೋತ್ರದವ ।
ತರಣವಾದುದರಿಂದ ಸಂತತಿಗೆ ದುಷ್ಕೀರ್ತಿ ಸಮನಿಸಲ್ಬಾರದೆನುತ ॥
ದುರುಳದಶಕಂಧರನ ತರಿಯಲೆಂದೈತಂದೆ ।
ವರುಣ ಸಾಕ್ಷಾತ್ಪುತ್ರನಿವನನ್ಯಾಯದ ಲೇಸು ।
ಕರಕಷ್ಟಮಾತಗಾವಸ್ಯಕದಿ ಪೇಳ್ವುದೇನುಂಟು ಪೊಸತಲ್ಲ ನಂಟೂ ॥ (43)
ಕುಂಜರಾವಾರ್ಯಂಗೆ ಪುತ್ರನಾತಂ ತನ್ನ ।
ಬಲವಿಕ್ರಮಂಗಳಂ ಬಂದ ದುಷ್ಕೀರ್ತಿಯಂ ।
ಗೆಲಿದು ಗೋತ್ರಪ್ರವರ್ಧನಗೈವ ಬಾಧ್ಯತೆಯನಾಂತ ಸುಗ್ರೀವನಿಂಗೆ ॥
ಪಲವು ವಿಧದಿಂದ ಪೇಳ್ವುದೇನು ಪವನಸುತ ।
ಬಲಬುದ್ಧಿಗಳ ನೇತ ನೀನರಿಯದೇನಿಹುದು ।
ಛಲದಂತ ಕುಲಪರಂಪರೆಯು ಜಸಕೊಣ್ಣೆಯಂ ಬಾರದೊಲು ಕಾಯ್ವುದೆಂದಂ ॥ (44)
ಎಂದು ರಘುನಂದನಂ ಪ್ರೇಮದಿಂ ಪೇಳಲಾ ।
ನಂದದಿಂ ಪವನಸುತ ಪದಯುಗಳಕಭಿನಮಿಸಿ ।
ಇಂದಿನಿಂದೆನ್ನ ಸರ್ವಸ್ವಮಂ ಪದಪದ್ಮಕರ್ಪಿಸಿದೆ ದಾಸನಾದೆ ॥
ಪೊಂದಿದೆ ಪದಾಬ್ಜಮಂ ಕರವಿಡಿದು ಪೊರೆ ದೀನ ।
ಬಂಧು ಸರ್ವಶರಣ್ಯ ಸೂರ್ಯವಂಶವರೇಣ್ಯ ।
ಇಂದಿರಾವರ ದಯಾಪರ ಪರಾತ್ಪರ ಪಾಪಹರ ಭಕ್ತರಘವಿದೂರ ॥ (45)

ಎನುತ ವಂದಿಸಿ ತನುಮನಂಗಳನೊಪ್ಪಿಸಿ ।
ದನುವನಿಚ್ಛೈಸಿ ರಾಮ ವಾತ್ಸಲ್ಯದಿಂ ಪವನ ।
ತನಯನಂ ಕುಸ್ತರಿಸಿ ತ್ರಿಭುವನಾನಂದಕರಮೆನಿಪಭಯಮನ್ನಿತ್ತನು ॥
ನಿನಗೆನಗೆ ಭೇದಮೆಳ್ಳನಿತ ನೆನೆಯದೆ ಸುಖ ।
ಮನೆಯೆನಿಸಿ ಬಾಳ್ವುದೆಂದಾಜ್ಞಾಪಿಸಲು ಪಾದ ।
ವನೆಜಗಳಗೆರಗಿ ಕರಗಳ ಮುಗಿದು ಬಿನ್ನಪಂಗೈದ ಕಜ್ಜದ ಪರಿಯನು ॥ (46)

ದೇವ ಬಿನ್ನಪಮೊಂದನಾಲಿಪುದು ಸುಗ್ರೀವ ।
ಜೀವಭಯದಿಂದರುಗಿ ಮಲಯಾಚಲವ ಸಾರ್ದ ।
ಪಾವನಾಂಘ್ರಿಯ ರಿಷ್ಯಮೂಕಾದ್ರಿಪರಿಯಂತ ಬಳಲಿಸಿದಡರೆನಿಮಿಷದಿ ॥
ಯಾವಸುಧೆಗಾತನಂ ಕರತಂದು ಕಾಣಿಸುವೆ ।
ದೇವರಾವುದ ನೆನೆದರೆಲ್ಲಮಂ ಕೈಗೈವೆ ।
ಸಾವಧಾನದೊಳಿನ್ನ ಬಿನ್ನಪವನವಧರಿಸವೇಳ್ಕೆನುತ ಮುಗುಳೆರಗಿದಂ ॥ (47)

ಮಾರುತಿಯ ವಾಣಿಯಂ ಪತಿಕರಿಸಿ ರಘು ।
ವೀರ ಪೇಳದನೆಲೆ ಕುಮಾರ ನೀಂ ಪೇಳದುದು ।
ಮೀರುವದದೆಂದಿಗುಂ ಬರಲರಿಯದಾಡಿಮುದ ಮರಳಿಸುವಡರಿಯೆವಾವು ॥
ಕಾರಿಯದಪಥಮಾವುದುಂಟದೆಲ್ಲವ ತಿಳಿವು ।
ದಾರೈವುದೆನೆ ಪುಳಕಿತಾಂಗನಾಗುತ ಚರಣ ।
ಸಾರಸಂಗಳಗೆರಗಿ ಪ್ರೀತಿಯಿಂದೊರೆದಂ ಸಮೀರಣಾತ್ಮಜ ಬೇಗದಿ ॥ (48)

ಪೆಗಲೇರ್ದರೀ ಕ್ಷಣಂ ಕರದೊಯ್ದು ಮುಂದಪ್ಪ ।
ಬಗೆಯನಾರೈವೆನೆನಲಿಂತಾಗಲೆನಲುಭಯ ।
ರಿಗೆ ನಮಿಸಿ ಬೆನ್ನೆದೆಯೊಳಾಂತು ಬಾನೆಡೆಯ ಪಥವಿಡಿದು ಭರದಿಂದ ನಡೆದು ॥
ಸುಗುಣರ ಕರದೊಯ್ದು ರಿಷ್ಯಮೂಕಾದ್ರಿಯೊಳು ।
ಸೊಗಸೆನಿಪ ತರುನೆಳಲೊಳೊಂದುತಾಣದೊಳಿಟ್ಟು ।
ಖಗಸುತನ ಪೊರೆಗೆನಡೆದಂ ಪವನನಂದನಂ ತುಳ್ಕುವಾನಂದದಿಂದ ॥ (49)

ಜವದಿಂದ ಬಂದು ಸುಗ್ರೀವನೆಡೆಗೈತಂದು ।
ಸುವಿಮಲೋತ್ಕರ್ಷಹರ್ಷದಿ ವಾರ್ತೆಯಂ ಪೇಳ್ದ ।
ಕುವಲಯಂಗಳ ಪೊರೆವ ಸರ್ವಾರ್ಥದಾತಾರ ಶೂರ ದುರ್ಭಯವಿದೂರ ॥
ನವನೀರದಶ್ಯಾಮ ರಾಮಪುರದರಸ ನೀ ।
ಭುವಿಯೊಳವತರಿಸಿ ಶರಣಾಗತರ ರಕ್ಷಿಸುವ ।
ಲವಲವಿಕೆಯಿಂ ಬಂದನೆಂದು ಶುಭವಾರ್ತೆಯಂ ಪೇಳ್ದನತಿಪ್ರೇಮದಿಂದ ॥ (50)

ಸಂಧಿ 2 ಕ್ಕಂ ಪದ 80.

# ಮೂರನೆಯ ಸಂಧಿ-

ಸೂಚನೆ ॥ ಅಂಜನಾತನಯನನುಮತಿಯಿಂದ ಸುಗ್ರೀವ ।
ಕಂಜಾಕ್ಷನಂಘ್ರಿಯಂ ಕಂಡಭಯಮಂ ಕೊಂಡು ।
ಭಂಜಿಸುತ ಚಿಂತೆಯಂ ನಿಜವೃತ್ತಗಳನೆಲ್ಲ ವಿಜ್ಞಾಪನಂ ಗೈದನು ॥

ಹೆಂಗಳಶಿರೋರನ್ನೆ ಕೇಳ್ ಪ್ರಭಂಜನತನಯ ।
ಪಿಂಗಾಕ್ಷನೆಡೆಗೆ ನಡೆತಂದು ಪೇಳ್ದನು ನರ ।
ಪುಂಗವನ ಪಾವನಚರಿತ್ರೆಯಂ ಶ್ರುತಿಶಿರಶ್ರೀಮಂತಕರ ಕೀರ್ತಿಯಂ ॥
ಅಂಗಜಾರಿಯ ಮನೋನಿಲಯ ಬ್ರಹ್ಮಾಂಡಗಳ ।
ನಂಗಂಗದೊಳಗಿಟ್ಟು ಪರಬೊಮ್ಮನೀತನ ಪ ।
ದಂಗಳಂ ಮರೆಯೊಕ್ಕರಿಂಗೆ ಭವಭಂಧಂಗಳಲ್ಲವು ಪತಂಗತನಯಾ ॥ (1)

ಸುರಧೇನುವೀ ನೆಲನ ಪೊರೆಯಲ್ಕೈತಂದುದೋ ।
ಸುರಪಾದಪಂ ಧರೆಯ ನೋಡಲೆಂ ಬಂದಿಹುದೊ ।
ಸುರರನ್ನವೀ ಭೂಮಿಯನ್ನು ಪಾಲಿಸಲೆಂದು ಪುರುಷಾಕೃತಿಯನಾಂತುದೊ ॥
ಪರಮ ಮುನಿಗಳ ತಪಃಪುಣ್ಯರಾಶಿಯೊ ದೈವ ।
ದುರು ಭಾಗ್ಯತೇಜವೊಯಿಂತಂತೆನುತ ಮೂರ್ತಿ ।
ಯಿರವ ಪೇಳಲ್ಕಾರಿಗಳವಹುದು ವಾಚಾಮಗೋಚರ ಮಹಾತ್ಮೆಗಳನು ॥ (2)

ಚಂಡತರ ಕೋದಂಡ ಕಾಂಡ ಕಲಿತದ ಕರೋ ।
ದ್ದಂಡಂಗಳಂದ ಸುರನೀಲ ನೀಲಾಭ್ರಮುಂ ।
ಮಂಡಿಸಿದ ಮಾಳ್ಕೆಯೊಳ್ಗುರುಜಟಾಭಾರದಿಂ ವಲ್ಕಲಾಜಿನಗಳಂದ ॥
ಖಂಡೇಂದುಧರ ಬೊಮ್ಮ ಹರಿ ಮುಖ್ಯರಂ ಪಡೆದ ।
ಖಂಡ ತೇಜೋರಾಶಿ ಮಾನುಷಾಕೃತಿಯಲಿರೆ ।
ಕಂಡೆ ಕೃತಸುಕೃತಪರಿಪಾಕದಿಂದಾನಂದಮಯನಾದೆ ತರಣಿತನಯಾ ॥ (3)

ಕಮಲಪೀಠನಿಗಭಯಮಿತ್ತಕತದಿಂ ಬಂದು ।
ದ್ಯುಮಣಿ ವಂಶಜ ನೆನಿಸಿ ಪಿತುರಾಜ್ಞೆಯಂ ಸಲಿಸಿ ।
ಕ್ರಮದಿಂ ಜನಸ್ಥಾನದೆಡೆಗೆ ಬರೆ ರಾವಣಾಂ ಧರಣಿಜೆಯ ಕದೊಯ್ಯಲು ॥
ಶ್ರಮಣಿ ಪೇಳ್ದ ಪರಿಯೊಳಲ್ಲಿ ಪರಿಯಂತ ಸಂ ।
ಭ್ರಮದಿಂದ ಬಂದುದಾದುದು ತಾತ ಪೂರ್ವ ಕೃತ ।
ಮಿಮಗೆ ಫಲರೂಪವಾಂತು ಕಂಗೆಸದುದೇನೆಂಬೆನಚ್ಚರಿಯ ಪೆರ್ಚಿಗೆಯನು ॥ (4)

ಗುರುಭಕ್ತ ದಾಂತ ಶಾಂತಂ ಸದಾ ಹರಿರೂಪ ।
ಪುರುಷ ಸೌಮಿತ್ರಿಯೆಂದನುಜನೊಪ್ಪಿಹನವರ ।
ಪರಿಯ ಚಿಂತಿಸಲು ವೇದಾಂತಾಗಮಂಗಳುಂ ಬಳಲಿ ಪಿಂತಿರುಗುತಿಹವು ॥
ತರಣಿಸುತ ನಿನ್ನಾಜ್ಞೆಯಿಂದಲಾಂ ವಟುರೂಪ ।
ಧರಿಸಿ ಪೊರೆಗೈದಲೀಕ್ಷಿಸುತೆನ್ನ ಬುದ್ಧಿಯಂ ।
ಪರಿಕಿಸುತ ಬಂದ ವೃತ್ತಾಂತಮಂ ಲಾಲಿಸಿದರಮಿತಸಂತೋಷದಿಂದಾ ॥ (5)

ವಾಲಿಯುಪಟಳದಿಂದ ವನದಲಿಹ ಸೂರ್ಯಸುತ ।
ಲೀಲೆಯಿಂದವನ ಕರವಿಡಿದರೆ ಭವತ್ಕಾರ್ಯ ।
ಮೂಲಸ್ಯವಿಲ್ಲದಾಗುವದೆನ್ನುತಾನರುಪಲಾರಾಜಸುತನೆಂದನು ॥
ಯಿಾಲೋಕನೇತ್ರಕುಲಸಂಭೂತರಾವು ತರಣಿ ।
ಬಾಲಕಂ ಸುಗ್ರೀವ ಬಾಂಧವಂ ನವುಗಿನ್ನು ।
ಮೇಲಪ್ಪ ಕಾರ್ಯವುವನಾಧೀನವೆುಂದೊಪ್ಪಿಸುತ ಪಿಂದೆ ನಡೆತಂದರು ॥ (6)
ಕರತಂದು ಮತ್ತೊಂದು ತರುನೆಳಲೊಳಟ್ಟು ಬಂ ।
ದಿರುವೆನೆಂದಾ ಮರುತಭವ ಪೇಳೆ ಶೋಕಮಂ ।
ಪರಿದು ಸುಗ್ರೀವ ಪೊಗಳುತವುಂಜನಾಸುತನ ಬಂದಪ್ಪಿ ಮುಂಡಾಡುತಾ ।
ನರದೇವನಂ ಕಾಣಲಾಕ್ಷಣದಲೈತಂದ ।
ನರದೇಹ ವಿಡಿದರಸಿನಂದದಿಂ ಶ್ರೀರಾವು ।
ಚರಣಕಭಿನವಿುಸೆ ಪಿಡಿದೆತ್ತಿ ಕುಳ್ಳಿರಿಸಲತಿ ಪ್ರೀತಿಯಿಂದಂ ನುಡಿದನು ॥ (7)
ದೇವನೀಂ ಧರ್ಮಜ್ಞ ಧರ್ಮವತ್ಸಲ ಜಗ ।
ಜ್ಜೀವನಾಧಾರ ದೇವೋತ್ತವು ನೆನುತ್ತವಿತ ।
ಪಾವನನ ಗುಣಗಳಂ ಪವನಸುತ ತಿಳದನಿತು ಪೇಳ್ದುದಂ ಕೇಳ ಭಯುದಾ ॥
ಠಾವಿಗಪ್ಪಣೆಯಿತ್ತು ತವಕದಿಂದೈತಂದೆ ।
ನೀವತಿ ಪ್ರಿಯುದಿಂದ ಕಪಿಕುಲದೊಳೆಂ ಸಖ್ಯ ।
ಗೈವುದಾದಡೆ ಕರವ ಪಿಡಿದು ಮರಿಯಾದೆಯುಂ ಮನ್ನಿಸಲ್ವೇಕು ಜೀಯಾ ॥ (8)
ಎನುತ ಸುಗ್ರೀವ ಸಂಪ್ರೀತಿಯಿಂ ತನ್ನ ಕರ ।
ವನು ನೀಡೆ ರಘುನಾಥ ನಸುನಗುತ ಕೈವಿಡಿದು ।
ಎನಗೆ ನೀಂ ಪ್ರಿಯತವುನೆನುತ್ತಲಾಲಿಂಗನಂ ಗೈದು ಪ್ರಿಯುದಿಂದ ಬಳಕ ॥
ಹನುವುನನಿತರೊಳುಭಯು ಮಧ್ಯದೊಳ್ ಕ್ರತುಭುಜನ ।
ಮಿನುಗಿಸುತ ಪೂಜಿಸಲು ಕಂಡು ಕರಗಳ ಪಿಡಿದು ।
ವುನದೊಲವಿನಿಂ ಪ್ರದಕ್ಷಿಣೆಗೈದು ತತ್ಸಾಕ್ಷಿಯಿಂ ರಾವುನಿಂತೆಂದನು ॥ (9)
ಹರಿತನಯು ಕೇಳ್ ಭರತಸೌವಿುತ್ರಿಗಿಂ ನೀನೆ ।
ಪಿರಿಯುನುಜನೆಂದರಿತೆ ಪ್ರಾಣಸಖ ನಿನಗಿಂತ ।
ಪೆರತಿಲ್ಲ ಮನದಂದವಿದೆ ಕೊಟ್ಟ ಭಾಷೆಗಂ ಪುಸಿಯಿಲ್ಲ ಮೆಂದೆಂದಿಗುಂ ॥
ತರಣಿಯೌರಸತನಯು ನೀನು ನಿನ್ನಯು ಕುಲಾ ।
ಕರರಾವು ಕೀರ್ತಿ ದುಷ್ಕೀರ್ತಿ ಸುಖದುಃಖಗಳ ।
ಪರಿಯುುಭಯುಸವುವಿುದಕೆ ಸಾಕ್ಷಿಭೂತಗಳೆನುತ ರಾವುನಭಯುವನಿತ್ತನು ॥ (10)
ದಿನಪಸುತ ರಾವುವಾಣಿಯು ಕೇಳ ಸಂತಸದಿ ।
ವುನದಹರ್ಷದಿ ಹಿಗ್ಗುವನಿತರೊಳು ಮರುತಜಂ ।
ವಿನಯುದಿಂ ಸಾಲ ಪಲ್ಲವಗಳಂ ನೆಲದೊಳಂ ಪರಪಿ ಪರಿತೋಷದಿಂದ ।
ನನುವುತಿಸಿ ಕುಳ್ಳಿರ್ಪುದೆನಲು ರವಿಸುತನೃಪತಿ ।
ತನಯುರೀರ್ವರು ಸುಖದಿ ಮಂಡಿಸಲು ಲಕ್ಷ್ಮಣಗೆ ।
ಹನುವು ಚಂದನದಳರ ಪಾಸಿಗೆಯುನೆಸಗಿದಂ ಸಂತಸದಿ ಕುಳ್ಳಿರ್ಪರೆ ॥ (11)

ಸಂತಸದಿ ಕುಳ್ಳಿರ್ದರ್ ಸಕಲ ಕಪಿಗಳು ನೋಡು।
ವಂತೆ ಸುಗ್ರೀವ ಬಿನ್ನಪಗೈದ ರಘುನಾಥ।
ಪಿಂತೆ ಸುರಪತಿಯಣುಗನಾದಣ್ಣನಿಂದಾದವಸ್ಥೆಗಳ ವಿಸ್ತರಿಪೆನು॥
ಕಾಂತೆಯು ಸೆಳದು ಕಾರ್ಪಣ್ಯಗೊಳಸಲ್ವಿಪಿನ।
ದಂತರಾಳದೊಳಂದಿನಿಂದ ಬಿದ್ದಿಹೆನೆನ್ನ।
ಚಿಂತೆಯಂ ಪರಿಹರಿಸಿ ಕಾಯಬೇಕೆನೆ ರಾಮ ನಸುನಗುತಲಿಂತೆಂದನು॥ (12)

ರಾಮವಾಕ್ಯದ ಪರಿಯು ಮೈತ್ರಿಯ ಫಲಂಗಳಂ।
ಪ್ರೇಮಲಕ್ಷಣವ ನಿಟ್ಟಿಸುವೆ ಸುಗ್ರೀವ ನಿ।
ನ್ನಾಮಹಾರಿಪು ವಾಲಿಯನುಮೊಂದು ಶರದಿಂದ ಭೂತಳದ ಧೂಳಿಯೊಳಗೆ॥
ಭ್ರಾಮಕಂಗೊಳಪುದ ಕಪಿರಾಜ್ಯ ದೈಶ್ವರ್ಯ।
ವಾಮಹತ್ತರ ಸುಖವನೀವ ಸತಿಸುತರೆಲ್ಲ।
ಪ್ರೇಮಗೊಳಿಸುವದನುಂ ಕಾಣ್ಬೆ ಭಯಬೇಡೆನುತ ಹರಿಗಭಯವನ್ನಿತ್ತನು॥ (13)

ಯೆಂದೊರೆದ ಮಧುರತರ ರಾಮವಾಕ್ಯದಿ ಹರ್ಷ।
ದಿಂದ ಸುಗ್ರೀವ ನುತಿಸುತಲೆಂದ ದೇವಪತಿ।
ನಂದನನ ದೆಸೆಯಿಂದಲೆನಗೆ ಭಯ ಸಂಜನಿಸದಂತಭಯಮಿತ್ತಪರಿಯ।
ಛಂದದಿಂ ಪರಿಪಾಲಿಸಲ್ವೇಳ್ಕುಮೆನುತ ನಯ।
ದಿಂದ ಬಿನ್ನವಿಸುತಿರಲನಿತರೊಳು ಸುಗ್ರೀವ।
ಗಂದು ವಾಮಾಂಬಕಸ್ಪಂದವಾದುದು ಶುಭಗಳಂದಮಂ ಸೂಚಿಪಂತೆ॥ (14)

ಹೊಮ್ಮರಿಯ ಸುಳಿಸಿ ಸೆಲೆಯಿಂದ ನಿಮ್ಮೊರ್ವರಂ।
ಗಮ್ಮನೊಂದೆಡೆಗೆಳೆದು ಧರಣಿಜೆಯ ಕದ್ದೊಯ್ದ।
ದುರ್ಮಾರ್ಗಿ ದಶಶಿರ ರಸಾತಲವಲಿರ್ದಡಂ ಛೇದಿಸುತಲವನ ಕುಲವ।
ಕಾಮ್ಯಗೊಳಿಸುತ ಭೂಮಿಸುತೆಯ ತಂದೀವೆನಿದ।
ನಮ್ಮಸಚಿವಂ ಪೇಳ್ದ ನಿದಕೆ ಸಂದೆಗವಿಲ್ಲ।
ನೆಮ್ಮರುವ ಚಿಂತೆಯಂ ಕಳೆ ನೃಪತಿಕುಲಚಂದ್ರ ದೈತ್ಯಸಂತಾನತಂದ್ರಾ॥ (15)

ಮಿತ್ತ್ರ ವಾಲಿಯ ಭಯಕೆ ತೆತ್ತು ತನುವಂ ಚಿಂತೆ।
ವೆತ್ತೈವರಾವು ಶೈಲ ಮಸ್ತಕದಿ ಕುಳ್ಳಿರಲ್।
ಮತ್ತೇಭಗಮನೆಯಂ ಕಳ್ದೊಯ್ವ ದಶಕಂಠ ಕಂಗೆಸದನಂಬರದೊಳು॥
ಮತ್ತಕಾಶಿನಿಯಳುತ ಯೆಮ್ಮ ನಿಟ್ಟಿಸಿ ತನ್ನ।
ಉತ್ತರೀಯವ ಪರಿದು ಭೂಷಣಂಗಳ ಕಟ್ಟಿ।
ಬಿತ್ತರಿಪುದೆನ್ನಪರಿಯಂ ರಘೋತ್ತಮಗಿದಂ ಕೊಡುಗೆನುತ ಪರಿದಿಟ್ಟಳು॥ (16)

ಒಡವೆಗಳನೆಲ್ಲವೊಂದೆಡೆಯೊಳಾಂ ಮಡಗಿಸಿಹೆ।
ಪೊಡವೆನಸುರನ ನಿಳಯದಾದನಂದಿಗೆ ದುಷ್ಟ।
ನಡತೆಯಿಚ್ಛೈಸಿದನ ಪಿಡಿತಂದೊಪ್ಪಿಗಿಪೆ ನೆನುತ ಸುಗ್ರೀವ ಪೇಳೆ॥
ಕಡುಮಮತೆಶೋಕಗಳ್ ಪೆರ್ಚಿಬರೆ ಕಣ್ಬನಿಯ।
ಕೆಡವುತಲೆ ರಾಘವಂ ನುಡಿದನೆಲೆ ಸುಗ್ರೀವ।
ಮಡದಿಯಿತ್ತಾಭರಣಗಳ ತಂದುಕೊಡುವುದೆನೆ ನೋಡೆನುತ ಮುಂದಿಟ್ಟನು॥ (17)

ಚೆಲುವ ಭೂಷಣವಸ್ತ್ರಕಲಿತದಿಂ ಮುಂಗಡೆಯು ।
ನೆಲದಲಿರೆ ಕಂಡೆತ್ತಿ ವಕ್ಷಸ್ಥಳದೊಳಟ್ಟು ।
ಲಲನೆಯಂ ನೆನೆನೆನೆದು ಪಲುಬಿದನದೇನೆಂಬೆ ಕಲುಮರಂ ಕರಗುವಂತೆ ॥
ಹಲವು ವಿಧದಿಂದಳಲಲಾದುಃಖ ತನ್ನಿಂದ ।
ಚಲಿಸದಿರೆ ಕ್ರೋಧಶಿಖಿ ಮುಂಬರಿದು ಬರೆ ಬಾಣ ।
ದಲಗಪಿಡಿದಿಂತೆಂದ ಸರ್ವರುಂ ಭಯದಿಂದ ನೋಡುತಿರೆ ರೌದ್ರದಿಂದ ॥ (18)

ಪಾಪದಾಚರಣೆಯನುಸರಣೆ ಗೈದನ ಶರದ ।
ದೀಪದಿಂ ಸುಡುವೆ ನಜಭವಪಿನಾಕಿಗಳನೈ ।
ರೂಪಮಂ ನಂದಿಸುವೆ ನಿಂದೆ ಮೂಲೋಕಮಂ ಕಲ್ಪಾವಸಾನಮೆನಿಪೆಂ ॥
ಪಾಪಿರಕ್ಕಸ ಪೋಗಿ ಪದುಮಾಕ್ಷನೆಡೆಯಲಿರ ।
ಲಾಪನೀರ್ವರನು ಕೆಂಗರಿಗೋಲಿನಿಂದ ಸಂ ।
ತಾಪಗೊಳಿಸುವೆನೆಂದು ಭೋರ್ಮೊರೆದ ಕಾಲಾಗ್ನಿಯುಗ್ರದಿಂ ಮೊರೆವಂದದಿ ॥ (19)

ಒಡಲುಪಿಡಿಯದೆ ಬರ್ಪ ಕಡುಶೋಕಕೋಪಗಳ ।
ಪಿಡಿಯಲಸದಳವಾಗಿ ರಾಘವಂ ಸಂಕ್ಷೋಭ ।
ಬಡುತಲಿರೆ ಸುಗ್ರೀವ ನೋಡಿ ಚಿಂತಿಸಿ ಕರವ ಮುಗಿದು ಮಗುಳಿಂತೆಂದನು ॥
ಕೆಡೆಗು ದುಃಖದಿ ಕಾರ್ಯತತಿಗಳುಂ ರಘುನಾಥ ।
ಬಿಡು ಚಿಂತೆಯಂ ಧೈರ್ಯವಿಡಿದೆನ್ನ ನಿಚ್ಚೈಪುದು ।
ಮಡದಿಮನೆಯುನ್ನಳದು ಪಿಡಿದ ಧೈರ್ಯದೊಳಿರ್ಪ ದೃಢವನಿಚ್ಚೈಸು ನರೇಂದ್ರ ॥ (20)

ಬಿರುಗಾಳಿಯಿಂದ ಕಿರುಮರಗಳುರುಳುವ ತೆರದಿ ।
ಗಿರಿಗಳೇಂ ಚಲಿಸುವವೆ ಸಾಮಾನ್ಯ ಜನರಿಂದ ।
ಪರಿಸುವಕ್ಲೇಶ ಮಹಾತ್ಮರದ ನಿಚ್ಚೈಪರೆ ಬಗೆವರೆ ಮಹತ್ತುನ್ನತ ॥
ಪಿರಿದುಸಿರಿಯಡಸಲತಿಕಷ್ಟಸಂಭವ ಮಾಗ ।
ಲುರದೈನ್ಯದಿಂದದಂ ಪರಿಗಣನೆಗೈಯದಲೆ ।
ಹರಿಯಕ್ಷನಂತಿರ್ಪುದದು ಮಹಾಪುರುಷಗುಣ ಸರ್ವಜ್ಞಗೇಂ ಪೇಳ್ವುದು ॥ (21)

ದೊರೆಯಲತಿಪೊನ್ನು ಸಂತಸದಿ ಹಿಗ್ಗುತ ಪೋದ ।
ರರೆತಾಸು ದುಃಖಸಾಗರದಿ ಮುಳುಗುವ ದುಷ್ಟ ।
ನರರಸ್ವಭಾವಮದು ದುಃಖಮಲ್ಲದುಮರಸ ಶೂರಸಂಪದಕೆ ಬಳಿಕ ॥
ಇರದು ಸುಖಮುಂ ಶಾಂತಿಬಲಧೈರ್ಯಸಂಪತ್ತಿ ।
ಉರುವಿಕ್ರಮಂಗಳಾ ಶೋಕಕಿನಿತಾದಡಂ ।
ಇರುಗೆಗಾಸ್ಪದಮಿತ್ತಡಾ ಪುರುಷ ಜೀವಿಪ್ಪುದು ದುಷ್ಕರಂ ಜಗತಿಯೊಳಗೆ ॥ (22)

ಚಿಂತೆ ಸಕಲೋಪಾಯಶಾಂತಿಯುತ್ಸಾಹಗಳ ।
ಗಂತಮೆನುತಂ ಸಂತರಾಡುವರು ಸರ್ವಜ್ಞ ।
ನೀಂ ತಿಳಿಯದೇನಿಹುದು ಸೇವಕಗೆ ತೋರಿದುದ ನರುಪದಿರಸಲ್ಲದೆನುತ ॥
ಮುಂತೆ ತಿಳಿದನಿತ ವಿಜ್ಞಾಪಿಸಿದೆ ಚಿತ್ತದೊಳ ।
ಗಾಂತೆನ್ನ ನುಡಿಯ ದಯದಿಂದ ಪಾಲಿಸವೇಳ್ಕು ॥
ಮೆಂತೆನುತ ಸುಗ್ರೀವ ಪೇಳ್ದರಾ ರಘುವೀರನಾಲಿಸುತಲಿಂತೆಂದನು ॥ (23)

ಹಿತವರಿನ್ನುಂಟೆ ನಿನ್ನಿಂದೆಮಗೆ ಭಾಸ್ಕರನ ।
ಸುತನೆ ಸರ್ವಾಗಮಾಮ್ನಾಯಕೋವಿದನೆ ಭವ ।
ನ್ಮತಿಗೆ ಪಾಸಟಿಯುಂಟೆಯೆನುತ ನುತಿಸುತಲಪ್ಪಿ ತನ್ನ ಚಿಂತೆಯನು ಬಿಟ್ಟು ॥
ಹಿತಕರದ ವಾಣಿಯಿಂದಿಂತೆಂದ ರಾವಣನ ।
ಗತಿಯು ನೀನೇ ತಿಳಿದು ಧರಣಿಸುತೆಯಂ ತಂದು ।
ಕೃತಿಯಮಾಡೆಂದು ಬಹುವಿಧದಿಂದಲುಸುರಿದಂ ರಾಘವಂ ಪ್ರೀತಿಯಿಂದಾ ॥ (24)

ರಾಮನಾಡಿದ ನುಡಿಗೆ ಸುಗ್ರೀವ ಸಂಭ್ರಮ ।
ಸ್ತೋಮಲಾಭವಿ ಹಿಗ್ಗುತತಿಗೆರಗಿ ಸಕಲ ಗುಣ ।
ಧಾಮ ನಿಮ್ಮಯ ಕೃಪೆಯೊಳಮರಾಧಿಪತ್ಯಮೆನಗಾಯಿತೆಂದು ನಿಶ್ಚೈಸಿದೆಂ ॥
ಪ್ರೇಮದಿಂದಿತ್ತ ಭಾಷೆಗೆ ಮೋಸಮುಂಟೇ ಸೀ ।
ತಾ ಮನೋಹರನೆ ಪತಿಕರಿಸಿ ಮದ್ವಾಕ್ಯದಿಂ ।
ದಾಮೋದಚಿತ್ತನಾದುದಕೆ ಸಂತಸಗೊಂಡೆನೆನುತೊರೆದು ಮಗುಳಿಂದನು ॥ (25)

ಮೂರು ಲೋಕಾಧಿಪತಿ ನಿಮ್ಮಂಘ್ರಿಗಳಗಾನು ।
ತೋರಯುಕ್ತಿಯ ನೋಡೆಯೆಲೇಸರವ ಕರುಣದ ಕು ।
ಮಾರನೆಂದೆನಗೊಲಿದು ಪಾಲಿಪುದು ಸಾಧುಗಳ ನೈಜಮಲ್ಲವೆ ಧರೆಯೊಳು ॥
ಶೂರನಾಗಲಿ ಗುಣವಿಕಾರನಾಗಲಿ ಧನಾ
ಧಾರನಾಗಲಿ ನಿಸ್ವನಾಗಲಿ ದುಃಖದಾ ।
ಗಾರನಾಗಲಿ ಸೌಖ್ಯಯುತನಾದಡಂ ಮಿತ್ರನಿಗೆ ಹಿತನು ನೀನುಮಲ್ತೆ ॥ (26)

ಕುಲ ಛಲಂ ಗುಣ ರೂಪು ಜಾತಿ ಗೋತ್ರಂ ದೇಹ ।
ಬಲಪೌರುಷಂಗಳೊಂದೆಣಿಸದೇ ನೇಹಿತರ ।
ಪಲವು ವಿಧದುಪಚರಣೆಯಿಂದ ಭೇದದಿ ತಿಳಿವ ಸುಖಕಷ್ಟಮೇಕಮೆನುತ ॥
ಸುಲಭರಾದರು ಮಿತ್ರತೆಯನೆಣಿಸಿ ಸಾಮ್ರಾಜ್ಯ ।
ವೊಲಿದೀವುದವು ಜಗತ್ಪೂಜ್ಯಮತಮೆಂಬುದೀ ।
ನೆಲದಿ ಪ್ರತ್ಯಕ್ಷಮಂಗೈದೆ ಕಪಿಯಂ ಪಿಡಿದು ಸಖನೆಂಬ ಪ್ರೀತಿವಿಡಿದು ॥ (27)

ಮೂದೇವರೊಡೆಯ ಕೇಳ್ಮನ್ನಸುರಪತಿಯಣುಗ ।
ಬಾಧೆಯಿಂ ಮತಿಮಾಂದ್ಯವಾಗಿ ಮುಂಗಾಣದಿದೆ ।
ಯಾದುರಾತ್ಮನ ಕೃತ್ಯಮೊಮ್ಮೆ ಮನಗೊಂಡೊಲಿದು ಮತ್ತೆ ವಿಕಳತೆಗೊಳುತಿದೆ ॥
ಆದರಾಸಂಬಾಧದಿಂದೆನ್ನ ಪ್ರಕೃತಿಯಿಂ ।
ದಾ ಧರಾಸುತೆ ಪೋದ ಹಾದಿಯಂ ಶೋಧಿಸುತ ।
ಮೋದಗೊಳಸುವೆನೆಂದು ಸುಗ್ರೀವ ಮರುಗುತಿರೆ ರಘುವೀರನಿಂತೆಂದನು ॥ (28)

ವೀರನಿನಗಪಕಾರಮೆಸಗಿದ ದುರಾತ್ಮನ ವಿ ।
ದಾರಣಂಗೈದು ಕಪಿರಾಜ್ಯರುಮೆತಾರೆಯರ ।
ನೋರಂತೆ ನಿನಗಿತ್ತೆನೆಂದಾನು ಪೇಳ್ದರ್ದ ಮೇಲೆ ಸಂಶಯಮೇತಕೆ ॥
ಸಾಂದರ ಕ್ಲೇಶಗಳ ಪರಿಹರಿಸಿ ಸೌಖ್ಯದಾ ।
ಗಾರಮೆನಿಸದೆ ಸುಮ್ಮನಿರ್ದರೆಮ್ಮಂ ಭಜಿಪ ।
ರಾರಕಟ ನುಡಿದೆರಡನಾಡಲುಂಟೇ ರಘುಕುಲಾನ್ವಯ ನೃಪರು ಬಳಿಕ ॥ (29)

ಎಂದು ನಿನಗಭಯಮನ್ನಿತ್ತೆನಾದಿನ ಪ್ಲವಗ ।
ಬಂಧು ಹಿತವಾದನೆಂಬುದತಿಳಿಯುಹಸ್ಕರನ ।
ನಂದನನೆ ಕಪಿರಾಜ್ಯ ಸ್ತ್ರೀರತ್ನ ಧನವಶವಾದವೆಂದರಿತಿರು ॥
ಪೊಂದಿದರಿಗೋಸುಗ ಶರೀರವಮಂ ತೆತ್ತಿರುವೆ ।
ಕುಂದುಕೊರತೆಗಳೆನ್ನದೆಂದು ಮನದೋಳ್ಬಗೆದು।
ಬಂಧುರ ಪ್ರೇಮದಿಂ ಪಿಂದೆ ಕಾಯ್ದಿಹೆ ನಲ್ಲದರೆನಿಮಿಷ ಮರೆದಿರುವೆನೆ ॥ (30)
ಶರಣರಿಂಗೆನಗೆ ಭೇದಮದಿಲ್ಲ ಮವರೆಲ್ಲ ।
ಚರಿಸುವಾಚರಣೆಯೆನ್ನದು ಸುಖಾಸುಖಗಳೆಂ ।
ದುರೆಸಮರ್ಪಿಸುತೆನಗೆ ಮನದೊಳೊಂದಂ ನೆನೆಯುದನುಪಮಾನಂದದಿಂದ ॥
ಹರಸರಸಿಜಾಸರ ಗಣಿಸೆ ಗೈಯುದೆ ಸುಖದಿ ।
ಬೆರದಿರ್ಪೊಲಾಂ ಗೈವೆನಲ್ಲದೊಂದೇ ನಿಮಿಷ ।
ಮರದಿರೆನಿದೆನ್ನ ಮತವೆನ್ನ ಶರಣರ ಜೀವನವೆ ಜೀವವೆನಗೆ ಕೇಳು ॥ (31)
ಕೋಗಿಲೆಯು ಬನವನಂ ಪಗಲಂ ಬಿಸಿಲ್ವಕ್ಕಿ ।
ಸೋಗೆ ಕಾರ್ಮುಗಿಲನೆಳೆಗಂಧಿ ಕರುವಂ ಸಾಧ್ವಿ ।
ಯಾಗ ಪತ್ರಿಯನ್ನೆನಪ್ರೊಲೆಮ್ಮನಲಿಂ ಸಾರಿದರ ಸಕಲ ಯೋಗಕ್ಷೇಮಮಂ ॥
ಬೇಗಲನಪದಬಿಡದ ಲಾರ್ಯೆವೆನಳ ಮನವ ।
ನೀಗುತೆನ್ನವನೆಂದು ಮರೆಯೊಕ್ಕಡಾರಾದ ।
ಡಾಗಲವರಂ ಬಿಡದೆ ಪೊರೆವ ವ್ರತವೆಮಗೆ ಕೇಳ್ ಸೂರ್ಯಸುತ ನಂಬು ದೃಢದಿ ॥
ಎನಲಖಿಲ ಲೋಕ ಹಿಗ್ಗುವ ತೆರದಿ ರಘುನಾಥ । (32)
ನಿನಸುತನ ಸಂತೈಸಲತುಲ ಮೋದದಿ ಸೂರ್ಯ ।
ತನಯು ವಿಜ್ಞಾಪಿಸಿದ ದೇವ ಕೇಳ್ಬವದೀಯ ಚರಣದರ್ಶನಮಾತ್ರದೆ ॥
ವನಜಪೀಠನ ಲೋಕವನದೊಲಾಂ ಸಂಚರಿಪ ।
ಬನಮೆನುತ ತಿಳದಿರ್ದೆ ನಾರದನ ಶಶಿಮೌಳಿ ।
ಮುನಿಗಳ ಸಮಾಧಿಯೊಳು ಸಿಲ್ಕಿದ ಪರಂಜ್ಯೋತಿಯೆನಗೆ ವಶವಾದುದೆನುತ ॥ (33)
ಸಂತಸಂ ದಳೆದಿರ್ದೆ ಕರದಿ ಚಿಂತಾಮಣಿಯು ।
ತಾಂತಳೆದು ಬಯಸುವುದದೇನ ಮನದಿಷ್ಟಗಳ ।
ತಾಂತಿಳದು ಸಫಲ ಗೈದಪ್ಪುದೆನುತ ನಿಶ್ಚಯದೊಳರಿತಿರ್ದೆ ರಘುಕುಲೇಶ ॥
ಚಿಂತೆಯೊಳ್ಳನಿತಿಲ್ಲ ಸಾಮ್ರಾಜ್ಯ ವೈಭವವ ।
ಸ್ವಾಂತಾನುಮೋದವಮಂ ತಾಳ್ದಿ ದುರ್ದಶೆಗಳಂ ।
ಪಿಂತಣ್ಣನೆಸಗಿದುದ ನೆನೆದರೆನ್ನಯ ಮನಂ ಕಂದುತಿದೆ ನೃಪಲಲಾಮ ॥ (34)
ಜನಪತಿತ್ವವನುಳದು ಸನುಮಾರ್ಗಮಂ ಪಳದು ।
ಮನವ ಕ್ರೋಧಕೆ ತಂದು ತನುಜೆಯೆಂಬುದದೊಂದು ।
ನೆನೆಯದೆನ್ನಯ ವನಿತೆಯನು ಸೆಳದು ರಾಜ್ಯಮಂ ತೆಗೆದು ಬನಕಟ್ಟಿ ಮಗುಳೆ ॥
ಅನುಜನೆಂದೆನಿಸದಪಯಶಸ್ಸಂ ಗಣಿಸದಲೆ ।
ಯೆನಗಹಿತಮಂ ಮಾಡಿ ಘನತೆಯಂ ಪೋಗಾಡಿ ।
ದಿನಿಸನುಂ ಬಗೆದೀಗ ಮೂಡಿ ಶೋಕಂ ಬೇಗ ತೊಳಲುವಂತಾದುದಕಟ ॥ (35)

ತಿರುಗಿದೆನು ಭೂಲೋಕಮೆಲ್ಲಮಂ ಕಾಲೂರ ।
ಲರಗೇಣಿ ನೆಲನಿಲ್ಲದಳಲಿ ಬಳಲುತ ವಾಲಿ ।
ಯುರುಬೆಗಂ ನಿಲಲಮ್ಮದುವಾವ ತಾಣಗಳ ಪೊಕ್ಕಡರಸುತಲಿ ಬಂದು ॥
ತಱವಡೆಳಸಿದ ಪಾಪಿ ಕರುಣಮೆಳ್ಳನಿತಿಲ್ಲ ।
ದರರೆ ನೆಲನೆಂತು ಪೊತ್ತಿರ್ಪುದೆನ್ನುತ ನೆನೆದು ।
ಮರುಗುತಿದೆ ಚಿತ್ತಮಿದ ಸಾರ್ಗೋರವೆ ರಘುನಾಥ ಲಾಲಿಸುವುದೆನ್ನನೆನುತ॥ (36)
ರಾಜಧರ್ಮವನುಳಿದು ಖಲಮಾರ್ಗವಿಡಿದು ಸುರ ।
ರಾಜಸುತಗಾಯುಷ್ಯಮೈಶ್ವರ್ಯ ಜಯಸಿರಿಯು ।
ರಾಜೆ ಪೆರ್ಚುವುದದಂ ನೋಡೆ ಧರ್ಮಂ ಪೋಗಿ ನೀರಧಿಯು ಪೊಕ್ಕು ಕುರುಹಂ ॥
ಮಾಜಕೊಂಡುದೊ ಧರ್ಮಗಳ ಪೇಳ್ವನೈಗಮ ಸ ।
ಮಾಜಮೇಂ ಪುಸಿಯೊ ಕಾಣಿಸದೆನುತ ಕಮಲಭವ ॥
ನೋಜೆಯು ಸ್ಮರಿಸಿ ಸಂಕಟಗೊಂಬೆ ರಘುವೀರ ಕಾರುಣ್ಯಮಯಶರೀರ ॥ (37)
ಎಂದು ನಾನಾಪರಿಯೊಲತಿದೈನ್ಯದಲಿ ನುಡಿಯು ।
ಲಂದು ರಘುವರ ನೋಡಿ ನುಡಿದ ನಸುನಗೆಗೂಡಿ ।
ಕುಂದಲೇತಕೆ ತಾತ ಕೇಳ್ವುದೆನ್ನಯಮಾತ ಭೀತಿಯಂ ಬಿಟ್ಟು ಖ್ಯಾತಾ ॥
ಕೊಂದಪೆನು ಬಾಲಿಯಂ ಕೊಡುವೆ ಕುಶಲಾಳಿಯಂ ।
ಪಿಂದಿರುಗದೆನ್ನ ನುಡಿ ಬೆದರದೆಲೆ ಧೃತಿಯು ಪಿಡಿ ।
ಸಂದೇಹಮಂ ಮಾಡಿ ಹಿಂದು ಮುಂದಂ ನೋಡಿ ಖತಿಯನುಳಿ ಹರುಷಮೂಡಿ ॥
ಹರಿಯು ಚಕ್ರವಯಸ್ಯದನುಷಂಗವೊಪ್ಪಿರುತ । (38)
ಮರಿಭಯದ ದೈನ್ಯಮೊಶಸ್ಕೃತಿಗೆ ತರಲದೇಂ ।
ಕರದ ಧನುವಾರೋಪಣಂ ಗೈವುದಕೆ ಮುನ್ನಮಿಬ್ಬಹತ್ಕಂ ಕೋಪದ ॥
ಭರವನನುಸರಣೆ ಗೈವುದರೆಂದ ಮೊದಲೆ ನೀ ।
ನೊರೆಯುಲಹಿತನ ವೈರಕಾರಣವ ಬಿತ್ತರದೊ ।
ಳರಿಮ ನಿಷ್ಕೃತಿಯು ನೆಸಗುವೆನಿಂದೆ ದುಷ್ಕೃತಿಯುತನುಹರಣಮಂ ಗೈದಪೆಂ ॥ (39)
ಚರಮಗಿರಿಯಾಗ್ರಮಂ ನಾರ್ವ ಮಿತ್ರನ ಕಂಡು ।
ಕೊರಗುತಿಹ ಸಾರಸವ ಮಾಳ್ಕೆಯನುಮನುಸರಿಸಿ ।
ಮರುಕಗೊಳುತಿದೆ ಚಿತ್ತ ಭವದೀಯ ದುರ್ಭರದ ದೈನ್ಯನಿರ್ಭರವ ತಿಳಿದು ॥
ನಿರಿಗೆಗೊಂಡುದದೇನು ಕತದಿ ಸಹಜನ್ಮರಿಂ ।
ಗುರುತರದ ಕಿಲ್ಬಿಷಾಕರ ವಿಧಾನವನೆನ್ನೊ ।
ಳೊರೆದ ರರೆನಿಮಿಷದೊಳ್ ಮಾಳ್ಪೆ ಪ್ರತಿಕ್ರಿಯುವ ನಿರ್ವೈರಮಪ್ಪಂದದಿ ॥ (40)
ಸ್ಪರ್ಧಾನುಬೀಜಮಂ ರಿಪುಬಲಾಬಲಗಳನು ।
ಸುರ್ದಡೆ ಪ್ರತೀಕಾರಮೆಸಗಿ ಜಯಸಿರಿಯನಂ ।
ಪೊರ್ದಿಸುವೆನೆಂದು ಶ್ರೀರಾಮ ಪುರದಧಿನಾಥ ಪ್ರೀತಿಯಿಂದಾಜ್ಞಾಪಿಸಿ ॥
ಹೃದ್ರೋಗಮಂ ನೀಗಿ ಮಿತ್ರಸುತನತುಳ ಹರು ।
ಷೋದ್ರೇಕದಿಂದಮಾವೃತ್ತಮಂ ಬಿತ್ತರಿಸೆ ।
ನಿರ್ಧಾರಣಂಗೈದು ತನ್ನೊಳಾಲೋಚಿಸುತಮಿರ್ದನಾ ಕ್ರೋಡದೊಳಗೆ ॥ (41)

ಸಂಧಿ 3 ಕ್ಕಂ ಪದ 121.

## ನಾಲ್ಕನೆಯ ಸಂಧಿ.

ಸೂಚನೆ ॥ ಅಗ್ರಜಾನುಜವೈರ ಕಾರಣವನೆಲ್ಲಂ ಸ।
ಮಗ್ರಮೆನೆ ವಿಸ್ತರದಿ ಬಿನ್ನಪಂಗೈದರಾ।
ಸುಗ್ರೀವನಂ ದಯದಿ ಮನ್ನಿಸುತಮಭಯಮಂ ದಯಗೈದ ರಘುವೀರನು ॥

ಗಿರಿಜೆ ಕೇಳ್ ರಾಘವಂ ಬೆಸಗೊಳಲ್ ಸುಗ್ರೀವ।
ಪರಮ ಹರುಷದಿ ಪೂರ್ವ ವೃತ್ತಾಂತಮೆಲ್ಲಮಂ।
ಪರಮ ಪುರುಷಂಗೆ ಬಿತ್ತರಿಸಿ ಪೇಳ್ದ ದೇವ ಲಾಲಿಪುದು ಬಿನ್ನಪವನು ॥
ವರಮಹಾಕಿಷ್ಕಿಂಧಿ ಬೆಗ್ಗಿರಿಗೆ ಮಹಿಲದಿಂ।
ಪರವೃಥ ತಾನಾಗಿ ಸುರನರ ಭುಜಂಗರಿಂ।
ನರರೆ ಕಡಕರ್ಕಶಂ ಬಳತಾಗಿ ಬಲಿಯದಿಂದಿದಿರಿಲ್ಲದಾವೋದದಿ ॥ (1)

ಸರಸಿಜಾಸನ ತನಯ ರಿಕ್ಷನವನಾತ್ಮಜರು।
ಧುರವಿಜಯ ವಾಲಿಯಾತನ ತಮ್ಮನಾಂ ಜಗ।
ದ್ಭರಿತ ಜಸಮಂ ಪಡೆಯಲಯ್ಯನೊಡನೈತಂದೆ ಛಂದದಿಂದೆ ॥
ಪರಮ ಸುಖದಿಂದ ಕಪಿರಾಜ್ಯಮಂ ಪಾಲಿಸುತ।
ಧೊರೆಯೆನಿಸಿ ರಿಕ್ಷನಿರಲಖಿಳ ಭೋಗಂಗಳಂ।
ಸರಭಸದಿ ಕೈಕೊಂಡು ಸಕಲ ಸನ್ಮತದಿಂದ ಪಲಕಾಲ ಬಾಳ್ದನರಸಾ ॥ (2)

ದೇವನಿರ್ಮಿತವಾದ ಕಿಷ್ಕಿಂಧಿಯೊಳು ಮಹಾ।
ದೇವನಪ್ಪಣೆಯಿಂದ ಸಕಲ ಕಪಿ ಕರಡಿಗಳ।
ದೇವತಾತ್ಮವನಾಂತು ರಿಕ್ಷರಾಜಂ ಸುಖದಲಿರ್ದ ಕೆಲಕಾಲಕರಸಾ ॥
ಆವ ಕಾಲದಲಪ್ಪದದು ತಪ್ಪದೆಂದಾತ।
ದೇವಲೋಕಕೆ ನಡೆದನಾದುದೈಸಿರಿಯಣ್ಣ।
ದೇವಗನುದಿನ ನಾನು ಪಿತೃಭಕ್ತಿಗಿಂದಧಿಕ ಸೇವೆಯೆಸಗುತಮಿರ್ದೆನು ॥ (3)

ನುಡಿಯಮೀರದೆ ಧರ್ಮನಡತೆಯಂ ಜಾರಿಸದೆ।
ದೃಢಭಕ್ತಿಯಿಂದಣ್ಣ ಪೇಳ್ದಂತ ಸಂತಸದೊ।
ಳೆಡೆವಿಡದೆ ಪ್ರಾಣವೊಂದೆನಿಸಿ ತನುವೆರಡಾಗಿ ತೋರ್ಪಂತೆ ನಡೆಯುತಿರಲು ॥
ಕಡುಮಮತೆಯಿಂದಗ್ರ ಭವನೆನ್ನ ಪ್ರೀತಿಯಿಂ।
ಪೊಡೆಯೊಳುದಿಸಿದ ತರುಣನಿಂದಧಿಕವೆಂದು ಸಂ।
ಗಡಿಗನಂ ಗೈದೊಂದು ಕಾರ್ಯದೊಳ್ಬಿಡದೆ ಪೋಷಿಸಿದ ನೆನ್ನನೊಲಿದು ॥ (4)

ದುಂದುಭಿಯ ತನುಜ ಮಾಯಾನಿದಾನವನೇನ।
ದೊಂದು ದಿನ ಕಿಷ್ಕಿಂಧದೊತ್ತಿಗೈತಂದು ಬಲ।
ದಿಂದ ಪ್ರಳಯಾನಿಲಂ ಮೊರವಂತೆ ಭೋರ್ಮೊರೆದನರ್ಧರಾತ್ರಿಯೊಳು ಪೊರಗೆ ॥
ಬಂದುದಾಸಮಯದೊಳ್ ಕೋಪವಣ್ಣಂಗದಾ।
ರಿಂದ ಶಾಂತಂ ಪೊಂದದಾದುದತಿ ರೋಷದಿಂ।
ಕೊಂದಿಡುವೆ ರಕ್ಕಸನ ನೀಕ್ಷಣದೊಳೆಂದೆನುತ ಪೊರಟನುತ್ಸವದಿ ವಾಲಿ ॥ (5)

ಕಾಲಾಗ್ನಿ ಸದೃಶ ಸುರಪತಿಯ ಸುತನಂ ಕಂಡು ।
ಜ್ವಾಲಂಗಳಂ ತೋರಿ ನಿಲಲಮ್ಮದಸುರಂ ನಿ
ಜಾಲಯಕೆ ಗಮಿಸುತಿರೆ ಪಿಂದಿಟ್ಟು ಪೋದನೇನೊಂದನೆಣಿಸದೆ ಕೋಪದಿಂ ॥
ಕಾಲ ಪ್ರಾಣಿಗಳ ಮೇಲ್ವರಿವಂತೆ ಬೆಂಬಿಡದೆ ।
ವಾಲಿ ದೈತ್ಯನ ಪಿಡಿಯಲವ್ವಳಿಸಿ ಪೋಗುತಿರ ।
ಲಾಲಸ್ಯಮಿಲ್ಲದಾದೈತ್ಯಂದೆನಾತನೊಡನೆಡೆವಿಡದೆ ಮಮತೆಯಿಂದ ॥ (6)

ಕತ್ತಲೆಯ ಮೊತ್ತ ಬಲು ಮುತ್ತಿರಲು ಸುತ್ತಲೆ ।
ತ್ತಿತ್ತಲುಂ ಕಾಣದಂಧತೆಯಿಂದಲಸುರನಂ ।
ಪತ್ತಿ ಬೆಂಬೊತ್ತಿ ಮುಗುಳ್ದೊತ್ತಿ ಪಿಡಿದಪೆನೆಂಬ ಮಮಕಾರವೆತ್ತು ಬಳಕ ॥
ಆತ್ತಿತ್ತನೋಡದೊಂದೊತ್ತ ನಾಗದೆ ಕ್ರೋಧ ।
ಚಿತ್ತಮುತ್ತತೆವೆತ್ತ ಮಮಕಾರದಿಂ ಬಾಲಿ ।
ಬಿತ್ತರದ ಉತ್ತಮಂ ಚಿತ್ತ ಬಲದಿಂ ಶೈಲದೊತ್ತ ನಾಂದ ನರೇಶಾ ॥ (7)

ಕಕ್ಕುಲಿತೆಗೊಂಡು ಸಿಲ್ಕದೆ ದೈತ್ಯ ನೋಟದಿಂ ।
ಮಿಕ್ಕು ಮತ್ತೊಂದು ಬಿಲಮಂ ಪೊಕ್ಕು ಕಾಣದಿರ ।
ಲಾಕ್ಕುವತಿ ಕೋಪ ಮೇಲೊಕ್ಕುದಣ್ಣಗದೇನ ಪೇಳ್ವೆ ಕಾಳಾಹಿಯಂತೆ ॥
ಒಕ್ಕಲಿಕ್ಕದೆ ಮಾಣೆ ಬಪ್ಪನ್ನ ಬಾಗಿಲೊಳ ।
ಗಿಕ್ಕೆಯೆನಿಸೊಂದಕ್ಕೆ ತಾಣಮಂ ಕೊಡದೆ ನೀ ।
ನಿಕ್ಕುಮೆಂದೊರೆದು ಪೊಕ್ಕ ಬಿಲವ ಪಾತಾಳನಿಭವನಾ ರಾತ್ರಿಯೊಳಗೆ ॥ (8)

ತಾಂಬು ಜವ್ವನದ ಮದದಿಂ ಬಲಿದ ವಾಲಿ ತ್ರಮ ।
ದಂಭದಾಡಂಬರದ ಗುಹೆಯನೊಳಪೊಕ್ಕಾಗ ।
ಜಂಭ ವೃತ್ರಾಸುರನ ದಂಭವ ವಿಡಂಬಿಸುವ ಮಾಯಾವಿಯೊಡನೆ ಬಣಗಿ ॥
ಇಂಬುಗೂಡದವನ ವಿಕ್ರಮಕೆ ದೈತ್ಯನ ಶೌರ್ಯ ।
ದಂಭಮಂ ಕೆಡಿಸಿ ಕಾದುತಮಿರ್ದರನ್ನೆಗಂ ।
ತುಂಬಿದುದು ವರ್ಷಮೇನೆಂಬೆ ಮುಗುಳದನಾರ ಬೆಸಗೊಂಬೆನೆಂತು ಕೌತ್ಕ್ಯ ॥ (9)

ಪ್ರಳಯಕಾಲದ ಮೇಘದಾರ್ಭಟೆಯ
ನೊಳಕೊಂಡು ಬಲುತೋಳಹೋರಟೆಗಳಿಂದಲುಂ ।
ಬೆಳಗಿದುದು ವೀರನಾದಂ ಗುಹಂಕಾರದೊಳ್ ಧರಣಿಯೆದೆ ಬಿರಿವಂದದಿ ॥
ಕಳಕಳದ ಬೊಬ್ಬೆಯುಬ್ಬರಮುಡಸಿತಾಕ್ಷಣಂ ।
ದಳದಳನೆ ಪೊರಟುದುದು ಸಫೇನ ಬುದ್ಬುದಗಳಂ ।
ತಳೆದ ರೋಹಿತದ ಪೆರ್ದೊರೆಯನಂ ಕಂಡಾನು ತಲ್ಲಣಂಗೊಂಡೆ ಜೀಯಾ ॥ (10)

ಅನಿತರೊಳು ದಾನವನ ಘನರವಂ ಪೆರ್ಚಿದುದು ।
ಮಿನುಗದಾದುದು ಮಹೇಂದ್ರಾತ್ಮಜನ ವೀರರವ
ಮೆನಗೊಂದು ಪರಿಯಾಗಿ ತೋರ್ದುದಂತರವರಿಯದಾತವೋ ನಿಲಯದೊಳಗೆ ॥
ಮನದೊಳಗೆ ಕುದಿದಾನು ಕೆಲಕಾಲ ಕಾಯ್ದಿರ್ದೆ ।
ರೆನಿತಾದರಣ್ಣನಬ್ಬರ ಕಾಣದಾದರಂ ।
ಜನಿಸಿತತಿಭೀತಿ ಮುಂಗಾಣದಲೆ ಕೆಲವುದಿನ ಬಿಲದೆಡೆಯ ತೊಳಲ್ದೆನರಸಾ ॥ (11)

ತಿಳಿದುದೆನಗಣ್ಣನಂ ಪೊಡೆದನಾಸುರ ತನ್ನ ।
ಖಳತ್ರೆಯುಂ ಮಿಂಚಿಸಿದನೆಂದು ಭಾರಿಯು ಶಿಲೆಯು ।
ತಳೆದುತಂದಾ ಗುಹದ್ವಾರವನು ಬಂಧಿಸಿದೆನೊಂದು ನಿಮಿಷದಿ ವೇಗದಿ ॥
ಅಳುತಳುತಮಣ್ಣನಂ ನೆನೆನೆನೆದು ದುಃಖಿಸುತ ।
ಜಳವನಿತ್ತೈತಂದು ಜೋರವೃತ್ತಿಯೊಳಾನು ।
ಪೊಳಲೊಳೊಂದಡೆಯು ಮೊಗದೋರದಾರಿಗು ಮರೆಯೊಳಿರ್ದೆನುರಸಂಕಟದಲಿ ॥

ಹಲಕೆಲವು ದಿನ ಮೌನವಿಡಿದು ಮತ್ತನ ತೆರದಿ । (12)
ನಿಲಯದೊಳ್ಕಿಡದಿರ್ದೆನಲ್ಲಿದ್ದರುಂ ಬಿಡದೆ ।
ಲಲನೆಯನು ಪಿಡಿದೆಳದು ಮಂತ್ರಿಗಳು ಕಪಿರಾಜ್ಯದರಸುತನವಂ ನೇಮಿಸಿ ॥
ಪಲವು ವಿಧದಿಂದ ಬೋಧಿಸಿದರಂತಃಕರಣ ।
ನಿಲದಾಯ್ತು ಭೋಗದೊಳ್ ತೊಳಲುತಣ್ಣನ ನೆನೆದು ।
ಬಲಬುತನ್ಮತ್ರನಂತಿರ್ದೆನಂತಃಪುರದೊಳೊಂದನಾಂತರಿಸದನಘಾ ॥ (13)

ಕಾಲಹರನಂ ಕೆಣಕೆ ಬಾಳ್ದಖರದಾರುಂಟು ।
ಮೇಲೆ ದೈತ್ಯನ ಪೊಡೆದು ಬಾಲಿ ಪೊರಮಟ್ಟು ಬಾ ।
ಗಿಲಲಿ ಕಾಣದೆ ಕೋಪವೆರ್ಚೆ ಕಡುರೋಷದಿಂದೌಡನೊಡೆಯುಗಿದು ಬಳಕಾ ॥
ಕಾಲಲೊದೆಯಲ್ ಶೈಲ ಕಡೆಗುರುಳಲೆಡೆಬಲನ ।
ಲೀಲೆಯಿಂ ದಿಟ್ಟಿಸುತಮೆನ್ನ ಕಾಣದೆ ಕೋಪ ।
ಜಾಲ ಪೆರ್ಚುತ ಬರಲ್ಜವದಿಂದಲೈತಂದು ಕೆಲಕನ್ನ ತ್ರವಕದಿಂದ ॥ (14)

ಗುರು ಬರುವದರಿದಾನು ಹರುಷದಿಂ ಪೊರಮಟ್ಟು ।
ಚರಣಕಾನತನಾಗಿ ಪರಿಪರಿಯು ಭಕ್ತಿಯಿಂ ।
ಕರಗಳಂ ಮುಗಿದು ಕಲುಷಿತೆಯಿಲ್ಲದತಿ ಮೃದುಲ ನುಡಿಗಳಂ ಪ್ರಾರ್ಥಿಸಿದೆನು ॥
ಕರುಣವೆಳ್ಳನಿತಿಲ್ಲದಾದುದಾತಗೆ ಕೋಪ ।
ಕರಿಗೊಂಡು ಚಪಲತೆಯೊಳೆನ್ನ ನಾನಾ ವಿಧದಿ ।
ಬಿರುನುಡಿಗಳಂ ಬೈದು ಮಂತ್ರಿಜನರೊಡನೆಂದ ವಾಲಿಯತಿರೋಷದಿಂದ ॥ (15)

ಕೇಳಿರೈ ಮಂತ್ರಿಜನರಂದು ನಡುರಾತ್ರಿಯೊಳು ।
ಖೂಳರಕ್ಕಸಬಂದು ಕೂಗಲವನಂ ಕೊಲಲು ।
ತಾಳದೈದಿದರೆನ್ನ ಬಿಡದೆ ಸಂಗಡಿಗನಂತೈತಂದನನುಜನೆಂದು ॥
ತಾಳ ಹರ್ಷದೊಳಾನು ಬೆನ್ನಟ್ಟಿ ಪೋಗುತಿರೆ ।
ಕಾಳ ದಾನವ ನೋಡಿ ಪೊಕ್ಕು ಗುಹೆಯುಂ ಬಿಲದೊ ।
ಳಾಳುತನವಂ ಗೈವುದೆನುತ ಬೇಳ್ದಾಂ ಪೋದೆ ಪಾತಾಳಸದೃಶದೆಡೆಗೆ ॥ (16)

ಒಳಪೊಕ್ಕು ನೋಡ್ದರಾಖಳನ ಕುಲಗೋತ್ರಮುಂ ।
ಬೆಳಗಿದುದು ಕಾಳಗಂ ಬೆಳೆದುದವನೊಡನೆನಗೆ ।
ಕೊಳುಗುಳದೊಳೆಲ್ಲರಂ ಸವರಿಬರ್ಪುದಕಾದುದೈಸೆ ಮತ್ತೊಂದು ವರುಷ ॥
ಖಳನೊಡನೆ ಪೋದುದಂ ಕಂಡಾಬಿಲದ್ವಾರ ।
ದೊಳಗಾರು ಚರಿಸದಂತೊಂದು ಪೆರ್ಬಟ್ಟುವಂ ।
ತುಳದು ನಗರಿಗೆ ಬಂದು ರಾಜ್ಯವಂ ಪರಿಪಾಲನೆಂಗೈದ ಸಂತಸದೊಳು ॥ (17)

ದೈತ್ಯೇಯಕುಲವ ಸಂಹರಿಸಿ ವಿಕ್ರಮದಿಂದ ।
ಐತಂದು ಹಾದಿಯಂ ಕಾಣದಲೆ ಕೂಗುತಿರೆ ।
ಮಾತಾಡಲೋರ್ವರಂ ಕಾಣದಾಂ ಖತಿಯಿಂದಲೊದೆದಾಗುಹದ್ವಾರದಿಂ ॥
ಆತುರದಲೈತಂದು ನಾಲ್ದೆಸೆಯ ನಿಟ್ಟಿಸುತ ।
ಭ್ರಾತನಂ ಕಾಣದತಿ ದುಃಖದಿಂದಳಲುತ್ತ ।
ಈತೆರದೊಳಿರುವನಂ ಕಂಡು ಖತಿ ಮುಂಕೊಂಡುದೆನುತವರೊಳೊರೆದನಾಗ ॥

ಕಿಡಿಯಿಡುವ ಕೋಪದಿಂದೆನ್ನ ನಿಟ್ಟಿಸಿ ಕ್ರೂರ । (18)
ನುಡಿಗಳಂ ಬೈದರಾಂ ಪದಯುಗಳ ಮಂಪಿಡಿದು ।
ಕಡುದೈನ್ಯದಿಂದ ಗುರುವೆನುತ ನಾನಾಪರಿಯಲಿ ಬೇಡಿ ಬಿನ್ನಪಗೈಯಲು ॥
ಪೊಡೆವುತ್ತೈತರಲಾನು ಪದುಳದಿಂದಿರ್ದೆಡೆಯು ।
ಕೆಡುವುದೊಡಲೆಂದು ಮುಂಗಡೆಯ ನಿಲೆಶೈಲಗಳ ।
ತುಡುಕಿ ಮರಮರಡಿಗಳೊಳಟ್ಟೆನ್ನ ಭಂಗಿಸಿದನಂಗನಾಜನದೆಡೆಯೊಳು ॥ (19)

ತಂದೆಯಿಂದಧಿಕನಗ್ರಜನೆಂದು ಭಕ್ತಿಯಿಂ ।
ದೊಂದನೆಣಿಸದೆ ಭೀತಿಯಿಂದ ಮೈದೆಗದೈದೆ ।
ಪಿಂದಟ್ಟಿ ಭೂತಳವನೆಲ್ಲವಂ ಸುತ್ತಿದರು ಬಿಡದೆ ಪೊಯ್ಯುತ್ತ ಬರಲು ॥
ನಿಂದು ನಿರ್ವಹಿಸುವರೆ ನೆಲನಿಲ್ಲದಿರಲೆನಗೆ ।
ಬಂದು ಮರುತಾತ್ಮಭವನೀ ಗಿರಿಯ ತೋರಿಸಿದ ।
ರಂದಿನಿಂದಿಹೆನರಸ ಶಾಪಭಯದಿಂ ವಾಲಿ ಬರಲಮ್ಮನೀ ಶೈಲಕೆ ॥ (20)

ದೇವ ಕೇಳ್ ಗುಣಕೆ ಹುರುಡುಂಟೆ ಮೂಲೋಕದೊಳ ।
ಗಾವನಾದರು ಸುರಪಸುತನಿದಿರೊಳು ನಿಂದು ।
ಜೀವದಿಂ ಪೋಗುವಡಸಾಧ್ಯವಾತನ ಶೌರ್ಯದಿರವ ಬಿತ್ತರಿಪೆ ಜೀಯ ॥
ಸಾವಧಾನದಿ ಲಾಲಿಸಲ್ವೇಳ್ಕು ದಿನದಿನದಿ ।
ತೀವಿಯಿಂದವ ಮಾಳ್ಪ ಲೀಲೆಗಳ ಗಿರಿಗಳಂ ।
ಠಾವತಪ್ಪಿಸುವ ಶಶಿರವಿಗಳೆಡೆಯಾಟವಂ ನಿಲಿಸುವಂ ವಾಲಧಿಯೊಳು ॥ (21)

ತರಣಿಯುದಿಸದ ಮುನ್ನಲೈದಿ ಚತುರಾಬ್ಧಿಯೊಳು ।
ವಿರಚಿಸುವನರ್ಘ್ಯಗಳ ಗಿರಿಗಳಂ ಕಿತ್ತಿಟ್ಟ ।
ಕರತಳದೊಳಾನವಂ ದಶಕಂಠನಂ ಕಕ್ಷದೊಳಗಿಟ್ಟುಮತ್ತೊತ್ತಲು ॥
ನರಿಯಂತೆ ಪಲ್ಗಿರಿದು ಧರೆಗೆ ಕೆಡೆವಂ ತಾರೆ ।
ಯರಲನಂ ಸುಮಗೈದು ಮುಡಿವುತಿಹ ಮತ್ತವನ ।
ಸರಿಸದೊಳ್ನಿಲುವರುಂಟೇ ದೇವ ಮಗುಳೊಂದು ಚಿತ್ರವಂ ಬಿತ್ತರಿಪೆನು ॥

ದುಂದುಭಿಯೆನುತ್ತೋರ್ವನಸುರ ಸರಸಿಜಪೀರ । (22)
ನಿಂದವನು ಸಾಹಸ್ರ ನಾಗಬಲವಂ ಪಡೆದು ।
ಮುಂದರಿಯುತುನ್ಮತ್ತನೆನಿಸಿ ದೇವಾಸುರರ ಭಂಗಿಸುತ ತನ್ನಿಚ್ಛೆಯಿಂ ॥
ಸಿಂಧುರಾಜನ ಪೊರೆಗೆ ಬಂದತುಲ ದರ್ಪದಿಂ ।
ಬಂಧಿಸುತಮಾರ್ಭಟಿಯಲಖಿಳ ದಿಕ್ತಟಗಳಂ ।
ಕಂಧರವ ಪೋಲ್ವ ಮಹಿಷಾಕೃತಿಯ ತಳೆದಸುರನೆಂದನತಿಗಡಣದಿಂದ ॥ (23)

ನೀರೊಟ್ಟಿಲಾಣ್ಮನೀ ಜಗತಿಯೊಳಗತ್ಯಂತ।
ಶೂರನೆನ್ನುತ ಪೇಳುತಿರೆ ಕೇಳ ರಣದೊಳ।
ಜ್ಝುರೆಯಾನುತೆಚ್ಚಾ ಡಲೆಂದು ಬಂದಿಹೆನೆಂದು ರಕ್ಕಸಂ ನುಡಿಯೆ ಬೆದರಿ॥
ಆರೆನ್ನ ಸುಖಹನೆಂದಾಡಿದವ ನೋಡುವರ।
ತೋರು ಜಡಧಿಯೆನುತ್ತಲೆಲ್ಲ ರರಿತಿಪರೆಂದು।
ವೀರತ್ವಮಂ ಬಿಟ್ಟು ನುಡಿದುದಧಿಯನ್ನೋಡಿ ದಾನವಂ ಮಗುಳೆಂದನು॥ (24)

ನುಡಿಯಿಂದ ಹೇಯುಗೈದರೆ ನಿನ್ನನಾನೆಂತು।
ಬಿಡುವೆ ಯುದ್ಧಾತಿಥ್ಯಮಿತ್ತಪುದದಲ್ಲದೊಡೆ।
ಪೊಡವಿಯೊಳಗಾರಿರ್ಪರೆನಗೆ ತೋರುವುದೆನಲ್ ನೀರಧಿಯು ಕೈಮುಗಿಯುತಾ॥
ನಡುಗುತಾಳೋಚನಂ ಗೈದ ಪೈಶಾಚಮಿದು।
ಕಡೆಗಟ್ಟುದಲ್ಲದರುಗದೆನುತ್ತ ಮನದೊಳಗೆ।
ಮಡಗಿ ಸಮಯೋಚಿತದ ನುಡಿಗಳಂ ಪೇಳದಂ ರಕ್ಕಸರ ರಾಯನಿಂಗೆ॥ (25)

ಹರಗೆ ಮಾವಂ ಧರಾಧರಗಳರಸಂ ಧೈರ್ಯ।
ದೆರೆಯು ಹಿಮಶೈಲೇಂದ್ರನಿರ್ಪನಲ್ಲಿಗೆ ಪೋಗೆ।
ಕರದು ರಣಭೋಜನವನುಣಬಡಿಸಿ ಸಂತಸಂ ಬಡಿಸುವನೆನುತ್ತ ಪೇಳೆ॥
ತರಿಸಿ ರತ್ನಂಗಳಂ ಕಾಣಿಕೆಯನೊಪ್ಪಗಿಸಿ।
ಕರತಳಗಳಂ ಮುಗಿದು ಪರಿಪರಿಯನುತಿ ಗೈಯೆ।
ಹರುಷದಿಂದಾಸುರಂ ಹಿಮಗಿರಿಯನರಸುತ್ತ ಕ್ರೋಧದಿಂದೈತಂದನು॥ (26)

ಪುಟನೆಗವುತಾರ್ಭಟಿಸಿ ಕೂಗಿದಡೆ ಬ್ರಹ್ಮಾಂಡ।
ಪಟಪಟನೆ ಸಿಡಿವುದೆಂಬಂತೆ ರಕ್ಕಸಲೋಕ।
ಕಟಕಿ ದುಂದುಭಿ ಬಂದು ಹಿಮಶೈಲದಾಪತ್ಯ ಕಚ್ಚದೊಳ್ ನಿಂದು ಮೆರೆದು॥
ಕಟಕಟನೆ ಖುರಗಳಂ ಪರ್ವತವನಪ್ಪಳಿಸೆ।
ಚಟಚಟನೆ ಗಂಡ ಶೈಲಗಳೊಡೆದು ಧರೆಗುರುಳೆ।
ಪಟಪಟಾರ್ಭಟೆಗಂಜಿ ತಲ್ಲಣಿಸಿ ಗಿರಿರಾಜ ನಡೆತಂದ ನಸುರನೆಡೆಗೆ॥ (27)

ಬರಸಿಡಿಲ್ಮೂರ್ತಿಯಂ ತಾಳ್ದಂತೆ ಕಂಗೆಸೆವ।
ದುರುಳ ದೈತ್ಯನ ಕಂಡು ಕರಪದಂಗಳು ನಡುಕ।
ವೆರದಾ ಮಹೀಂದ್ರೇಂದ್ರನುಪಚರಿಸಿ ಬೆಸಗೊಂಡನೇಂಕತದೊಳಿನ್ನಲ್ಲಿಗೆ॥
ಬರವಾಯ್ತು ದೈತೇಂದ್ರ ಬೆಸನಿತ್ತರಾಂಗೈದು।
ತರುವೆನೆನೆ ರಕ್ಕಸಂ ಗಿರಿಯ ನೋಡುತಲೆಂದ।
ಧುರವ ಯಾಚಿಸಿ ಬಂದ ದುಂಧುಭಿಯೆನುತ್ತೆನ್ನೆ ತಿಳ ಪಾರ್ವತಿಯ ತಾತನೆ॥ (28)

ಕೈಗೊಡು ರಣಾಂಕಣದಿ ಸೆಣಸು ಮಲ್ಲರ ತೆರದಿ।
ಕೈಗೆ ಕೈ ಮೈಗೆ ಮೈ ತೆತ್ತು ರೋಷಂಬೆತ್ತು।
ಬೈಗಿನ ಬಿಸಿಲ್ಗೆಯ್ವ ಭವದೀಯ ವಿಕ್ರಮವ ತಿಳ ಮತ್ಪರಾಕ್ರಮವನು॥
ಕ್ರೈಗುರಿಯ ಮಾಡಿ ವೇತಾಳ ಭೂತಂಗಳಗೆ।
ಕೈಗೈವೆ ರೋಹಿತದ ಪಾರಣೆಯ ನೋಡೆನ್ನ।
ಕೈಗುಣವನೆಂದಸುರ ಬೊಬ್ಬಿರಿಯಲಾಗ ನಗರಾಜ ಭಯಗೊಳುತೆಂದನು॥ (29)

ಕೊಳುಗುಳದಿ ಮುರಿದು ಮುಂಗೆಟ್ಟು ಬಂದವರಿಂಗೆ ।
ನಿಳಯುವಾಗುವದೊಂದೆ ಶೌರ್ಯಮಲ್ಲದೆ ತೋಳ ।
ಬಲುಹಲಾವೆಡೆಯೊಳಾಂ ಕಾದಿದುದ ಕಂಡರಿವುದಿಲ್ಲ ಭೂಮಂಡಲದೊಳು ॥
ಕಲಿಗಳಂ ಪಿಡಿದು ನೀಂ ನೆಣಸಲತುಲಿತ ಕೀರ್ತಿ ।
ಬೆಳಗುವದು ಭೂತಳದೊಳಲ್ಲದೀ ಸ್ಥಾವರಗ ।
ಳಳಲಿಸಿದರೇ ಬಪ್ಪುದೈಯ ರಕ್ಕಸರಾಯ ಪಿಡಿಯೆನುತ ಕೈವುಗಿದನು ॥ (30)
ಹಿಮಗಿರಿಯ ನುತಿಗಳಂ ಕೇಳ ದುಂದುಭಿ ನಗುತ ।
ಲಿಮಗೆ ಮಾರ್ಮಲವರಂ ತೋರಿಸೆನೆ ರಕ್ಕಸನ ।
ಭ್ರಮೆ ನಿವಾರಣವಪ್ಪ ತಾಣವಂ ಮಾನಸದಿ ಚಿಂತಿಸುತಲೆನುತುಸುರಿದಂ ॥
ಅಮರಪತಿಯನುಗನಾಹವಭೀಮ ನಿಸ್ಸೊಡನೆ ।
ಸಮರದೊಳ್ಸೆಣಸಿ ಭುಜಕಂಡೂತಿಯುಪಟಳವ ।
ಶಮೆಗೊಳಪನಲ್ಲದುಳಿದವರಿಂದಮಿನಿಸು ಫಲವಾಗದಾವೆಡೆಯೊಳೆನುತ ॥ (31)
ಬೇಳಲಚ್ಚರಿಗೊಂಡು ಚಿತ್ತದೊಳ್ಮತ್ಸರವ ।
ತಾಳ ದುಂದುಭಿ ಜವದಲೈತಂದು ಕಪಿಕುಲವ ।
ನಾಳದನ ನಗರದೆಡೆಯೊಳ್ಮಹಾರ್ಭಟೆಗೈದು ರೋಷದಿಂ ಹೂಂಕರಿಸಲು ॥
ಕಾಳಾನಿಲಂ ಬಂದುದೆನುತ ಭಯದಿಂದ ಹರಿ ।
ಕೋಳಾಹಳ ಧ್ವನಿಯು ಪರಕಲಿಸೆ ಕಪಿರಾಯ ।
ಕೇಳ ಸಂವರ್ತರುದ್ರನ ರೋಷಕೆಮ್ಮಡಿಯ ತಾಳ್ದುವುಗಿದಂ ಕ್ಷಣದೊಳು ॥ (32)
ಯಮನ ದಾಡೆಯ ವದನನೋಡಿ ಸಾಹಸಕನಹ ।
ಭ್ರಮೆ ಯಾವಗುದಿಸಿದುದೊ ನೋಳ್ಪನಾತನ ಪರಾ ।
ಕ್ರಮವನೆನುತೈದುತಿಹ ಪತಿಯ ನಿಟ್ಟಿಸಿ ತಾರೆ ಚರಣಾಬ್ಜಗಳಗೆ ನಮಿಸಿ ॥
ಸಮದ ರಿಪು ಗರ್ವ ಪರ್ವತ ಕುಲಿಶನ ಸುರಪತಿ ।
ತಮದಂಭಜಂಭನಿಭ ವಿಗ್ರಹೋಪಾಯಗಳ ।
ಸಮತೆ ಕೈಗೈಯುವೇಳ್ಕೆನುತ ಬಿನ್ನಪಗೈಯುಲಾನೆರಗಿ ಕಾಲ್ಪಿಡಿದೆನು ॥ (33)
ಕೊಡನ ಮಗನೆಡೆಯ ನೀರಧಿಗಳ ಪ್ರಯತ್ನಮೇಂ ।
ಮೃಡನಿದಿರಲಾವ ದೇವರ್ಕಳಾರ್ಭಟೆಗಳೇಂ ।
ನಡೆದಪವ್ರೊ ಸುರಪಸುತಗಿದಿರಾಂತು ಬಾಳ್ವರಾರೀ ಸುರಾಸುರ ಭಟರೊಳು ॥
ದೃಢವ ಕಂಡರಿತು ಕೇಳ್ದೀ ಪರಿಯ ದೈನ್ಯಗತಿ ।
ವಿಡಿದು ಕಾಲ್ವಿಡಿದು ಕಾರ್ಪಣ್ಯಗೊಳಲೇಕವನ ।
ಬಡಿದು ಕೆಡಪದೆ ಮಾಣೆ ಬಡುಬಡಿನುತಂ ಕೊಡಪಿ ನಡೆದನಸುರೇಂದ್ರನೆಡೆಗೆ ॥
ಪ್ರಳಯಜಂಝಾನಿಲಂ ಸುಳವಂತೆ ದರ್ಪದಿಂ । (34)
ಪೊಳಲಿಂದ ಪೊರವಟ್ಟು ಬರ್ಪ ಸುರಪಸುತನ ।
ಖಳ ನಿರೀಕ್ಷಿಸಿ ರೌದ್ರದಿಂದ ಕಾಲ್ಗಳ ಕೆರದು ಪಲ್ಮೊರೆದು ಶೌರ್ಯವೆರದು ॥
ಥಳಥಳದಲೈತಂದು ಧಿಕ್ಕರಿಸಿದಂ ಬೇಗ ।
ನಿಳಯದೊಳ್ಪಾನವದದಿಂದ ಬೆಂಗಳಪದಾ ।
ವಳಯದೊಳು ಬಲುಹ ತೋರ್ಪರಂತಿಲ್ಲ ಸುಳವರೇನಹುದು ನಿನ್ನಿಂದ ಕಪಿಯೆ ॥ (35)

ಮರದಿಂದ ಮರಕಡರಿ ಮತ್ತೆಧರೆಯೊಳಗುರುಳ।
ಮರಳ ಶೈಲಗಳೇರ್ದು ಮಗುಳೆಲ್ಲ ಪೊರೆಬಿರ್ದು।
ಗಿರಿಗಿಳಲು ನಿಬಿಲೆನುತ ತರುಗೊನೆಗಳಂ ಮುರಿದು ಪರಿದು ಮಧುಪಾನಗೈದು।
ನರಿಗಳಂ ಧಿಕ್ಕರಿಸಿ ಹರಿಗಳಂ ನೆಕ್ಕರಿಸಿ।
ಕಿರಿದು ಪಲ್ಗಳ ಪಣ್ಬಲಂಗಳಂ ತಿರಿದುಂಬ।
ಪರಿಹಾಸಕರ ಕಪಿಯೆ ನೀನೆನಗೆ ತೋಱಿಯೇ ಪೋಗೆನುತ ಧಿಕ್ಕರಿಸಿದಂ ॥ (36)

ಸಂಗರದಿ ಜಯ ಪರಾಜಯ ವಾರ್ತೆಗಳನಾವು।
ದಂಘವಣ್ಣಿಯನ್ನುಳದು ಬೆಂಗಳಂದದಿ ಪಾಳ್ಪ।
ಸಂಗವಾಡುವೆ ಮರುಳೆ ಕಾಡರಿಯದಾದೆ ನೀನೆಂದಿಗುಂ ಸುರಪಸುತನ।
ಸಂಗರವ ನೋಡೆಂದು ಸರಿಸದೊಳ್ನಿಂದು ಸಿಡಿ।
ಲಂಗನೆ ಸಘಾಯಮೆಂಬಂತೆ ಮುಷ್ಟಿಯನಸುರ।
ನಂಗದೊಳಗರ್ಪಿಸಿದನೇನೆಂಬೆ ದಂಭೋಳಿ ನೀಲಗೆರಗುವಂತೆ ॥ (37)

ಹರಿಯ ಬಲುಹಿಂಗಳ್ಕದ ಸುರನೆರಗಿದ ಗಿರಿಯ।
ಬರಸಿಡಿಲು ಪೊಡವಂತೆ ಕರಿದು ಕೇಶಾಕೇಶಿ।
ಭರದಿ ಮುಷ್ಟಾಮುಷ್ಟಿಗಳಲಿ ಸೆಣಸಿದರೋರ್ವರೋರ್ವರಂ ಗಣನೆಗೊಳದೆ॥
ಹರಿಯ ಕೈಟಭನ ಜಂಭಾರಿ ವೃತ್ರಾಸುರನ।
ಹರಗಜಾಸುರ ಯುದ್ಧಕ್ಕೈವಡಿನೆ ಮೂಲೋಕ।
ಬೆರಗುಗೊಂಡಿರಲರ್ಧ ನಿಮಿಷ ಪೃಥ್ವಳಕೆಗಳ ಮಾಳ್ಕೆಯೊಳಗಚ್ಚರಿಯಿನೆ ॥ (38)

ಘೋರರೌದ್ರವೇಷದಿಂದ ಮುಂಬರಿದು ಕಪಿ।
ವೀರನಾತನ ಪಿಡಿದು ಕಾಲ್ವಿಡಿದು ಭೂತಳದಿ।
ಪೂರಾಯಘಾಯಮಪ್ಪಂತೆ ಮತ್ತಪ್ಪಳಸೆ ಕರಣಗಳ್ಕಳವಳದು ತ ॥
ಕ್ಕಾರಿ ರಕುತವನಸುಗಳಂ ತೊರೆಯೆ ವಾಲಿ ಮದ।
ವೇರಿ ಕಾಲಿಂದವನ ತೂಗಿ ಚಿಮ್ಮಿದರಮಿತ।
ದೂರದೊಳ್ಕೆಡದುದಸುರನ ಕಳೇವರ ಮಾದಿಚ್ಚರಿಯದೊಂಬೆಡೆಯೊಳು ॥ (39)

ಒಂದು ಯೋಜನದಳತೆಗೈದುವೆಡೆಯೊಳು ರಕುತ।
ಬಿಂದುಗಳು ಬಿರುಗಾಳಯೊಂದದತಿ ಜವದಿಂದ।
ಬಂದಾ ಮತಂಗಮುನಿಯಾಶ್ರಮದಿ ಬರ್ದವಲೆ ಮುಂಗಾರಪನಿಗಳೆನಲು ॥
ಬಂಧುರದ ರಕ್ತವೃಷ್ಟಿಯು ನೋಡಿ ಮುನಿಪ ನಿಂ।
ತೆಂದನನುಚಿತಕಾಲದೊಳು ಮೇಘಶೋಣಿತದ।
ವೃಂದಮಂ ಕರೆವುದೇಂ ಕಾರಣಮೊಯೆನುತಲುಂ ಕೋಪಭರಮಂ ತಾಳ್ದನು ॥

ಕಡುಗೋಪದಿಂದಲಾ ಮುನಿಪ ಬಿಗ್ಗನೆ ಬಂದು। (40)
ಕೆಡದಸುರನಟ್ಟೆಯಂ ಕಂಡು ಮತ್ತಾವನೀ।
ಪೊಡವಿಯೊಳು ಪರ್ವತಾಕಾರ ಮಹಿಷನಿವನ ತಂದಿಡಲು ಬಲವಂತನು।
ಮೃಡ ನಮಶ್ಶಿವಯೆನುತ ಜ್ಞಾನದೃಷ್ಟಿಯನಾಂತು।
ಸಡಗೆರದಿ ನಿಟ್ಟಿಸಲು ತೋರ್ದುದಾತಗೆ ಕೈಲಿ।
ಪಿಡಿದ ಕನ್ನಡಿಯೊಳ್ ಪ್ರಪಂಚ ಕಾಣ್ಬಂದದಿಂದೇನೆಂಬೆನದ್ಭುತವನು ॥ (41)

ಒಂದು ಯೋಜನದಗಲ ಶೋಣಿತದ ಮಳೆ ಸುರಿಯು ।
ವಂದದಿಂದಖಿಲ ತರುಜಾಲಂಗಳುಂ ನೆಲಕೆ ।
ಪೊಂದುವಂದದ ದೂರಾತ್ಮತೆಯನೆಸಗಿದ ವಾಲಿಯೆಮ್ಮ ಬನದ ಪೊರೆಯೊಳು ॥
ಯೆಂದಾದರೆಯು ಸುಳದರಸುಗಳೆಯಲೆಂದು ಕಪಿ ।
ವೃಂದ ಕಾಣ್ಬೊಲ್ ಶಪಿಸೆ ಕಂಡು ಭಯದಿಂದೋಡಿ ।
ಬಂದು ಸುರಪನ ಸುತನಿಗೀ ವಾರ್ತೆಯನ್ನು ದೂರಿದರಾಕ್ಷಣಂ ಸಮುಖದಿ ॥ (42)
ಯೆನುತ ಕಪಿಗಳ್ಪೇಳಲತಿಭಯದೊಳಮರೇಂದ್ರ ।
ತನಯ ಮುನಿಯೆಡೆಗೈದಿ ಬಹುವಿಧದಲುಪಚರಿಸೆ ।
ಅನುಮತಿಸದಾ ಮುನಿಪ ನಿತ್ತ ಶಾಪವ ನೈದಮೆನಲಂಜಿ ಕೆಲಸಾರಿದಂ ॥
ವನವ ನಿಟ್ಟಿಸದಂದಿನಿಂದ ವಾಲಿಯು ಶಾಪ ।
ದನುವ ತಿಳದತಿ ಭಯದೊಳೀ ವಾರ್ತೆಯಂ ತಿಳುಪೆ ।
ಹನುಮಂತನೆನಗಂತರಂಗದೊಳ್ಕ್ರಮದಿಂದ ನೆಲೆಯಾದುದರಸ ಖಪಿನಾ ॥ (43)
ತ್ರಿದಶಪತಿಸುತನಾವನಾದವಂ ಸುರಪಸುತ ।
ನದುಭುತ ಪರಾಕ್ರಮವನಳ್ಕಿಸುವರಿಲ್ಲ ಬಲ ।
ಮದದಿಂದಲೇನೊಂದ ತಿಳಿಯದತಿ ಗರ್ವದಿಂ ಕಿಷ್ಕಂಧಿಯೊಳಗಿರ್ಪನು ॥
ಸದಯಮುನಿಪನ ಬನದೊಳಭಯ ಮಾಗಲ್ಕೆಮಗೆ ।
ಉದರಪೋಷಣೆ ಗೈದುಮುಚಿತ ಕರ್ಮಗಳುಳಿದು ।
ಸದಗರಂತಿರಾನಿರ್ದೆನೊಂದ ನೆನೆಯದೆ ರಾಮ ಲಾಲಿಪ್ಪುದು ನೃಪಲಲಾಮ ॥ (44)
ಜಗತೀತಳದೊಳೋರ್ವರಾದಪಂ ವಾಲಿಯಂ ।
ಮಿಗೆನೋಳ್ಪರಸದಳಂ ಮೂದಲಿಸುತಾತನಂ ।
ಬಗೆಯೊಳಗೆ ಸ್ಮರಿಸುವಡಸಾಧ್ಯ ನಿರವದ್ಯನಿನ್ನಾಲಗುಂ ದುಸ್ಸಾಧ್ಯನು ॥
ಜಗದೀಶರಾಮ ಪುರವರಸನಾ ಬಲಿಯಿರ್ಪ ।
ಬಗೆಯ ವಿಸ್ತರದಿಂದ ಬಿನ್ನಪಂ ಗೈದೆ ನೀಂ ।
ಸುಗುಣಗಣಿ ಮಣಿ ವಸೆಂತವನದರ ಸಂಧಾನ ಚಿಂತೆಯಂ ನೀವರಿಪ್ಪುದು ॥ (45)

ಸಂಧಿ 4 ಕ್ಕಂ ಪದ 167.

## ಐದನೆಯ ಸಂಧಿ.

ಸೂಚನೆ ॥ ವಿಶ್ವರೂಪವ ತೋರಿ ವಿನಯದಿಂದಾಗ ಹರಿ ।
ದಶ್ವನಂದನನ ಸಂತಸ ಗೊಳಿಸಿದಂ ರಾಮ ।
ವಿಶ್ವಾತ್ಮನಹುದೆನಿಸಿ ರಾಜಿಸಿದ ಶೈಲದೊಳು ಶರಣರಂ ಹರುಷಗೊಳಿಸಿ ॥

ಶಿವೆ ಕೇಳು ವಾಸವನ ತನಯನುರು ವಿಕ್ರಮವ ।
ಪವಣಬಿನ್ನವಿಸಿ ಸುಗ್ರೀವ ಕರಗಳ ಮುಗಿಯೆ ।
ತವಕದಿಂ ನಸು ನಗುತ ರಾಮಚಂದ್ರಮ ನುಡಿದನಾ ಕಪಿಪ್ರವರನೊಡನೆ ॥
ನವನವಕಮೆನಲಣ್ಣನತಿಶಯದ ವಿಕ್ರಮಮ ।
ನವಿರಳದ ಭಯಗೊಂಡು ನೀ ಪೇಳ್ವನಾವರಿಂ ॥
ದವನಳವ ತಿಳವದಕೆದೇಂ ಗೈದರಹುದು ನಿನಗನುಮಾನಹರಮೆಂದನು ॥ (1)

ಕೊಂದವೆವು ವಾಲಿಯನೆನುತ್ತಲಾವು ಬೇಳ್ದಡೆ ।
ಬಂದುದಿಲ್ಲವು ಮನಕೆ ನಿನ್ನಾವುದಂ ಮಾಡಿ ।
ಸಂದೆಗವ ಪರಿಹರಿಪೆವೆನಲು ಭಾಸ್ಕರತನಯ ಬಿನ್ನವಿಸಿದಂ ಮುದದೊಳು ॥
ಮುಂದೆಸೆವ ಸಪ್ತತಾಳಂಗಳಂ ನಿಜಬಾಣ ।
ವೊಂದರಿಂ ಖಂಡಿಸಲು ದುಂದುಭಿಯ ತನುವ ಪದ ।
ದಿಂದ ಮಿಂಟಲು ಹರುಷಗೊಂಡು ಸುಖದಿಂದಿರ್ಪೆನೆಂದು ವಾಲಿಯು ಮಡಿವನು ॥
ಸಮರ ದುರ್ಜಯ ಮಹಾಬಲ ಪರಾಕ್ರಮಶೂರ । (2)
ನಮರೇಂದ್ರಸುತನಾರ ಲೆಕ್ಕಿಸಂ ಮತ್ತವನ ।
ಭ್ರಮಣಿಯೊಳ್ನಿಗ್ಗಿ ಕುಗ್ಗಿ ಹೆನರಸ ಮತ್ತೊರ್ವರಾದರಂ ಗಣಿಸನೆನುತ ॥
ಶ್ರಮಗೊಳುವ ಸುಗ್ರೀವನಂ ಪಿಡಿದು ತಳ್ಕೈಸಿ ।
ಮಮತೆಯಿಂ ಸಂತೈಸಿ ಕಪಿರಾಯನೆಮ್ಮ ವಿ ।
ಕ್ರಮವ ನಿಟ್ಟಿಸಿ ಹರುಷವಟ್ಟೈಹುದೆನುತ್ತಲುಂ ಮೃದುನುಡಿಯೊಳುಪಚರಿಸಿದಂ ॥ (3)
ಶರಣರ ವಿಪತ್ಕರವ ಸ್ಮರಿಸಿದ ದೇವ ನಿಜ ।
ಕರುಣದಿಂ ರವಿಸುತನ ಕ್ಲೇಶಮಂ ಪರಿಹರಿಸಿ ।
ಚರಣದುಂಗುಟದಿಂದ ಚಿಮ್ಮಿದಂ ದುಂದುಭಿಯ ತನುವ ದಶಯೋಜನಕ್ಕೆ ॥
ತ್ವರಿತದಿಂದಿಡೆ ಕಂಡು ಸುಗ್ರೀವ ಸಂಶಯದಿ ।
ಬೆರದು ವಿಜ್ಞಾಪಿಸಿದ ದೇವ ಪೂರ್ವದಿ ವಾಲಿ ।
ಭರಿತರಕ್ತಂಮಾಂಸ ನೂತನಕಳೇವರವ ಯೋಜನಕೆ ಮಿಡಿದನೊಲಿದು ॥ (4)
ಪೊಸ ಶರೀರವನಿಟ್ಟಿ ಪಸಿಯುಲಿಯದೆಂಬಂತೆ ।
ಬಿಸಿಲಿಂದಲೊಣಗಿದಟ್ಟೆಯ ಮಿಡಿಯಲೆನಗೆ ಭರ ।
ವಸೆದೋರದೆಲೆ ತಾತ ನೀ ಸಾಲ ವೃಕ್ಷಗಳ ನೊಂದಸ್ತ್ರದಿಂದ ಸೆಳೆಯೆ ॥
ನಸಿದು ಪೋದುದು ಚಿಂತೆಯೆನುತ ಬಿನ್ನಪಗೈಯೆ ।
ನಸುನಗುತ ಶರವಿಡಿದು ತಾಳಂಗಳಂ ತೋರು ।
ತ್ರಿಸೆಯೆ ಖಂಡಿಸಿ ರಸಾತಳವ ಭೇದಿಸಿ ಮಗುಳೆ ಪೊಕ್ಕುದಾ ಬತ್ತಳಿಕೆಯಂ ॥ (5)
ತಾಳಂಗಳೇಳನರೆನಿಮಿಷದೊಳ್ಕತ್ತರಿಸಿ ।
ಸೀಳ ಭೂತಳವ ಮಗುಳೈತಂದ ಬಾಣದುರು ।
ಕೋಳ್ವಾ ಹಳವನೋಡಿ ನಾಳೀಕಮಿತ್ರಸುತ ಹರ್ಷದಿಂದೆದ್ದು ಬೇಗ ॥
ತಾಳದಚ್ಚರಿಯಿಂದ ತನ್ನೊಳಗೆ ತಾನೆ ನೃಪ ।
ನಾಳುತನಮಂ ಗಣಿಸಿ ಭಯವ ಮಾನಸಕುಣಿಸಿ ।
ನೀಲಮೇಘಶ್ಯಾಮ ರಾಮನಂಘ್ರಿಗೆ ಮಣಿದನಾಗ ಸಂತೋಷವೆರಸಿ ॥ (6)
ಪೂರ್ವದೊಳಗವನಿಂದ ಬನ್ನಬಟ್ಟುದ ನೆನೆದ ।
ಖರ್ವಭೀತಿಯೊಳಾನು ಬಿನ್ನಪಂ ಗೈದೆನಿದು ।
ಸರ್ವಾಪರಾಧ ಕ್ಷಮಿಸಲ್ವೇಳ್ಕು ಭವದೀಯ ಶೌರ್ಯಮಂ ನಿಟ್ಟಿಸುವರೆ ॥
ಸರ್ವಮಂಗಳೆಯರಸ ಹರಿ ಸರಸಿಜೋದ್ಭೂತ ।
ಗೀರ್ವಾಣಪತಿಗಳಲೆ ದೇವ ಪಾಲಿಪುದೆನ್ನ ।
ದಿರ್ವಿದಗ್ಧತೆಯನೆಣಿಸದೆ ಕೃಪೆಯೊಳೆನುತೆರಗಿ ಬೇಡಿದಂ ಬಹುವಿಧದಲಿ ॥ (7)

ತ್ರಿಪುರಹರ ಹರಿ ವಿರಿಂಚಿ ಪ್ರಮುಖರಾದರಂ ।
ಕುಪಿತನಾದೆಡೆ ನಿನ್ನ ನಿಟ್ಟಿಸಲು ಶಕ್ತರೆ ।
ಕಪಿಯುದೇಂ ಗಣನೆ ಮತ್ತಾವ ಪರಿಯೊಳಗೆಣಿಕೆ ಭವದೀಯ ಚರಣದೆಡೆಯ ॥
ವಿಪರೀತ ವಾಕ್ಯಗಳ ವಿಜ್ಞಾಪಿಸಿದ ಪರಿಯ ।
ಕೃಪೆಯಿಂದ ಮರೆದು ಕೈವಿಡಿದು ಪೊರೆದಪ್ಪುದೆನ್ನು ।
ತಪರಿಮಿತಭಯ ಭರಿತಭಕ್ತಿಯಿಂ ಪ್ರಾರ್ಥಿಸಿದ ನಾನಾವಿಧಂಗಳಿಂದ ॥ (8)
ಪದಗಳಂ ಪಿಡಿದು ಬಹು ಬಗೆಯಿಂದ ಪ್ರಾರ್ಥಿಸುವ ।
ಹೃದಯಮಂ ಕಂಡು ರಘುವೀರ ಕರುಣದೊಳಿಂದ ।
ಹೃದಯದನುತಾಪಮಂ ಬಿಡು ನಡೆದ ಬಳಿಕಿನ್ನು ಕೊರತೆ ಬಂದಪ್ಪುದೆ ನುಡಿಗೆ ॥
ಬೆದರದಿರು ನಿನಗೆ ದೃಢಮುದಯಿಸುವ ರೀತಿಯೊಳು ।
ಮುದದಿ ತೋರುವೆ ದಿವ್ಯರೂಪವೆನ್ನಯ ಪೂರ್ಣ ।
ಪದವ ನಿಟ್ಟಿಪರೆ ದಿವ್ಯಾಂಬಕಂಗಳನೀವೆನೆಂದಭಯಮಂ ಕೊಡುತಲೆ ॥ (9)
ಕರುಣದಿಂದೊರೆದ ವಾತುರದಿ ದಿವ್ಯಜ್ಞಾನ ।
ದೊರೆದುದಾ ಸೂರ್ಯಸುತಗನಿತರೊಳು ಶ್ರೀರಾಮ ।
ಚರಣಾರವಿಂದಂಗಳಂ ಕಂಡ ಬಗೆಯಿಂದದೆಣಿಸಲರಿದೇನನೊಂದ ॥
ಪರಿಪರಿಯ ಮುಸಕಗಳಪರಿಮಿತ ಕರಗಳಂ ।
ಚರಣಂಗಳಮಿತ ದಿವ್ಯಾಂಬರ ವಿಭೂಷಣಂ ।
ಶರಚಾಪಖಡ್ಗಗಳ ಪಿಡಿದಖಿಳ ರೂಪಾಂತ ಮೂರ್ತಿಯಂ ನಿಟ್ಟಿಸಿದನು ॥ (10)
ಒಂದೆಸೆಯ ದೇವತಾಸಮುದಯಂ ನೋಡೆ ಮ ।
ತ್ತೊಂದೆಸೆಯ ಮುನಿಗಳ ವೃಂದ ಮೋಣ್ಣಿಟ್ಟಿಸಿವ ।
ರೊಂದೆಸೆಯ ಗಂಧರ್ವಯಕ್ಷಕಿನ್ನರಮರಗತರುಗುಲ್ಮಸಂತತಿಗಳು ॥
ಒಂದೆಸೆಯಲಸುರತತಿಯೊಂದೆಸೆಯ ಕಪಿಕರಡಿ ।
ಯೊಂದೆಸೆಯ ಮೃಗಪಕ್ಷಿಯೊಂಡೆಸೆಯ ಶೈಲನದಿ ।
ಸಿಂಧುಗಳ ರಾಸಿಯಂ ನಿಟ್ಟಿಸುತಲಚ್ಚರಿಯೊಳಾಳ್ದಂ ಸುಗ್ರೀವನು ॥ (11)
ಚತುರದಶ ಭುವನಗಳ ಚಾರು ಬ್ರಹ್ಮಾಂಡಗಳ ।
ಮಿತದಖಿಳ ಪ್ರಾಣಿಗಳ ವಿಮಲತರಕ್ಷೋಣಿಗಳ ।
ಕತಿಪಯ ಸುವೇಷಗಳ ಕಡುಕ್ರೂರ ತಮಗಳಂ ಬೆಳಗಿನೊಬ್ಬುಳಗಳನ್ನು ॥
ಅತಿಶಯದ ಘೋರ ಮತ್ತತಿವಿಪುಲ ಕ್ರೂರಗಳ ।
ನತಿಶಯದ ಶಾಂತಿಗಳನಮಿತಶಶಿರವಿಗಳಂ ।
ಪ್ರಥಿತಾಗ್ನಿಕೋಟಿಗಳ ಕಂಡನಾ ಸುಗ್ರೀವನಾ ಪುರುಷನಂಗದೊಳಗೆ ॥ (12)
ಕೆಲವೆಡೆಯ ಪಾಲನಂ ಕೆಲವೆಡೆಯ ಲಾಲನಂ ।
ಕೆಲವೆಡೆಯಲಸುರಕೊಲೆ ಕೆಲವೆಡೆಯ ನಿರಯನೆಲೆ ।
ಕೆಲವು ಕಡೆಯೋಳ್ಶೋಕ ಕೆಲವೆಡೆಯ ನಿಶ್ಶೋಕ ತೋರುತಿದೆ ಬಹಳ ಲೋಕ ॥
ಪಲವುವಿಧಜೀವರಂ ಕೊಲೆಯಿಂದ ನಾವರಂ ।
ನಲಿವಮಿತದೇವರಂ ನಟಿಸಿ ತುತಿಸಲಿವರಂ ।
ಜಲಜಾತರಾದ್ಯರಂತಾಗಿಸುವಮಾದ್ಯರಂ ಮಿಗೆ ಕಂಡ ಸುಗ್ರೀವನು ॥ (13)

ದಶಕಂಠಕೋಟಿ ಕುಂಭಶ್ರವಣಕೋಟಿಗಳ್ ।
ದಶದಿಶೆಗಳೊಳು ಸುರಪಸುತಕೋಟಿಕೋಟಿಗಳ್ ।
ರಸೆಯು ಚಣಕೋಪಮಿತವಾಗಿ ಕಂಗೊಳಸಿದವರ್ಗತ್ತೊಂದು ತಾಣದೊಳಗೆ ॥
ಅಸುರಶತಸಾಸಿರ ಶಿರಸ್ಸುಗಳನಾಂತು ನಿಜ ।
ವೆಸರಿನುಚ್ಚಾರಣೆಯುಲೆಚ್ಚಾಡಿ ಮಡಿವುದಂ ।
ಪೊಸತೆನೆ ಮಹಾಪುರುಷನಂಗದೇಶದಿ ಕಂಡನಾಗ ಸುಗ್ರೀವನೊಲಿದು ॥ (14)

ನದಿಗಳೆಲ್ಲವು ನೀರಧಿಯುನರಸಿ ಬರ್ಪಂತೆ ।
ವಿದಿತಪ್ರತಾಪದಾನವರೆಲ್ಲ ಬಂದಾಗ ।
ವದನಂಗಳಂ ಪೊಗುತ ದಂಷ್ಟ್ರದೆಡೆಯೊಳ್ಸಿಲ್ಕಿಪುಡಿಯಾಗಿ ಪೋಗುತಿರಲು ॥
ಕದನದೊಳ್ಕಲರು ಜಯಸಿರಿಯನಾಂತು ಸಂತೋಷ ।
ದುದಯುವಂ ಕಾಣುತದುಭುತಗಳೆಂಬೆಲ್ಲ ಕಂ ।
ಸದನವಾದಂಗವಂ ನೋಡಿ ನಡುಗುತ ಭಯದಿ ಬೆರಗಾದ ಸುಗ್ರೀವನು ॥ (15)

ವಾಲಿಯೈತಂದೊಂದು ದಂತಾಗ್ರದೊಳು ಮಡಿದ ।
ಮೇಲೆ ರಾವಣ ಕುಂಭಕರ್ಣ ಮುಖ್ಯಾಸುರರ ।
ಜಾಲಂ ಪತಂಗಸಮುದಯ ಪಾವಕನ ಪೊಗುವ ತೆರದೊಳೈತಂದು ಕೆಡೆದು ॥
ಭೂಲಲನೆಗೊರಗಿದುದನೆಲ್ಲ ಕಪಿಕುಲವೆಲ್ಲ ।
ಲೀಲೆಯಿಂ ನಡಸುವದ ಕಂಡು ಸುಗ್ರೀವಂ ನಿ ।
ರಾಲಸ್ಯದಿಂದೆರಗಿ ನುತಿಸುವ ಸುರಾಸುರರ ಕಾಣುತಚ್ಚರಿಗೊಂಡನು ॥ (16)

ಭೀತಿಯಿಂದುದಿಸುವರು ಶಶಿರವಿಗಳುಂ ಭಯದಿ ।
ವೀತಿಹೋತ್ರಂ ಮಹಾಬಲನಿಂದ್ರ ಮೃತ್ಯುಗಳ್ ।
ಧಾತುಗೆಡುವರ್ ತ್ರಿಮೂರ್ತಿಗಳಾತ್ಮರಕ್ಷಣಂ ಗೈಯಲ್ಕುಪಾಯಮೆನಿಸಿ ॥
ಸೋತ್ರುಪೋದರ್ ಚಂದ್ರರವಿಯಗ್ನಿನಕ್ಷತ್ರ ।
ಮೇತರತಿಶಯತೇಜವೆಂಬಂತೆ ಭೂವ್ಯೋಮ ।
ತಾತಪ್ಯಮಾನಗೊಳುತಿರೆ ವಿಶ್ವಮೂರುತಿಯ ನೋಡಿ ವಿಸ್ಮಿತನಾದನು ॥ (17)

ಶತಕೋಟಿ ಬ್ರಹ್ಮರುದ್ರಾಬ್ಜಾಕ್ಷರುಗಳ ಮ ।
ತ್ತತಿಶಯ ಸಪ್ತರ್ಷಿ ನಾರದ ಸನಂದನಾ ।
ದ್ಯತಿ ತತಿಯನೊಂದೊಂದು ರೋಮಕೂಪಂಗಳಲಿ ಕಂಡು ಭಯಗೊಂಡು ಬಳಲೆ ॥
ಶತಕೋಟಿ ಸೂರ್ಯರೊಂದೇ ಬಾರಿ ಪುಟ್ಟಿದಂ ।
ತತುಲ ತೇಜೋರಾಶಿ ಬ್ರಹ್ಮಾಂಡಗಳ ಮನೋ ।
ಗತಿಯಿಂದ ಕಬಳಸುತಮಿರೆ ಕಂಡು ಬೆರಗಾದನಾ ವಿಶ್ವಮೂರುತಿಯನು ॥ (18)

ನಿಗಮಾಗಮಂಗಳೊಂದೆಡೆಯು ಪೊಗಳುತ ತೊಳಲಿ ।
ಬಗೆಗಳಂ ತಿಳಿಯದಲೆ ಕಂಗೆಟ್ಟು ನೋಡುತಿರ ।
ಲೊಗುಮಿಗೆಯು ಶ್ರುತಿಸಿರಗಳರಸಿ ಕಾಣದೆ ಬಳಲಿ ತುತಿಸಿ ಮುಂಗಾಣದಿದಕೊ ॥
ಬಗೆಬಗೆಯ ತಂತ್ರ ಸಿದ್ಧಾಂತಗಳುಂ ಕಾಣ ।
ದಗಣಿತದ ನಾಣ್ಣುಡಿಯು ನಗೆಗಾಸ್ಪದಗಳಾದ ।
ಬಗೆಗಗೋಚರ ನಿನ್ನ ಕಾಣ್ಬರಾರುಂಟು ನಾನೆಂತರಿವೆ ಮೂಢನಕಟಾ ॥ (19)

ವಿಶ್ವಲೋಕಾಧಾರ ವಿಶ್ವಭುವನಶರೀರ ।
ವಿಶ್ವನಾಟಕಸೂತ್ರಧಾರ ವಿಶ್ವಾಕಾರ ।
ವಿಶ್ವದೊಳಪೊರಗಿರ್ದು ವಿವಿಧಚೇಷ್ಟೆಗಳೆಸಗಿ ನಿರುನಿರುವಿಕಾರಿಯಾಗಿ ॥
ವಿಶ್ವಜೀವರ ಕಾಣಿಸಿ ವಿಧಿಭವಾದ್ಯರ ಸೃಜಿಸಿ ।
ಶಾಶ್ವತ ಕೃಪಾವನಧಿಯೆನಿಸಿ ತೋರುತ ಸರ್ವ ।
ವಿಶ್ವೇಶ ಜಯ ನಮೋನಮಯೆನುತಲೆರಗಿದಂ ಸುಗ್ರೀವ ಭಕ್ತಿಯಿಂದ ॥ (20)

ಬಲ್ಲೆನೆ ಮಹಾಮಹಿಮ ಭವದೀಯ ಶುಭಚರಣ ।
ವಲ್ಲವಗಳಂ ಪ್ಲವಗ ಮೂಢಮತಿ ಭೀತಿರಸ ।
ದಲ್ಲಿ ಮುಳುಗಿಹ ಜಾತಿಹೀನರೂಪಿಂ ಧೈರ್ಯಮತಿಯೆನಿತು ಜನಿಪ್ಪುದರನಾ ।
ನಿಲಲಮ್ಮದೆ ನಿಖಿಲಭೂತಗಳು ಭಯಗೊಂಡು
ತಲ್ಲಣಿಸುತಿರೆ ಮಹಾದ್ಭುತರೂಪ ನೋಡುವರ
ದೆಲ್ಲಿ ಶಕ್ಯಮದಾರ್ಗೆ ಕರುಣದಿಂ ಪೂಜಗವ ರಕ್ಷಿಸಲ್ವೇಳ್ಕು ಜೀಯಾ ॥ (21)

ಭಕುತನಂ ನೋಡು ಭವದೀಯ ಪೂರ್ವಾಕೃತಿಯು ।
ಸುಕರಮೆನೆ ದಯವಾಡು ದೇವ ವಿಶ್ವಾಕೃತಿಯು ।
ಶಕುತರಾರಿಪ್ಪರೆ ಸೇವಕನ ಬಿನ್ನಪವ ಪತಿಕರಿಸು ದಯದಿ ಬೆರಸು ।
ಸಕಲಲೋಕಾತಂಕವಂ ಪರಿಪ ನಿರ್ಜರ ।
ಪ್ರಕರಮಂ ಪಾಲಿಸುವೆನೆಂದಭಯವಿತ್ತು ಪ್ರಿಯ ।
ದಕಲಂಕತೆಯು ನೀನದು ಜೀವಕೋಟಿಯ ಪೊರೆದು ಪಾಲಿಪ್ಪವೆನುತ್ತೆರಗಿದಂ ॥ (22)

ಕರಣಗಳು ಕಳವಳಿಸಿ ಕಾಯವನುಂ ಒಸಿವೆರಸಿ ।
ಚರಣಕೆರಗಲು ನಡುಗಿ ಸರ ಕಂಠದೊಳಗಡಗಿ ।
ತರಹರಿಸದತಿಭಯದಿ ಕಂಗೆಟ್ಟೆನೈ ದಯದಿ ಕಾಯಪ್ಪ ಪೂರ್ವಾಕೃತಿಯನು ।
ಧರಿಸದಿರೆ ದೇಹಮಿನ್ನಿರದು ಸಂಕಟಪರದ ।
ಶರಣರಿಗೆ ಶರಣ ನೀನಲ್ಲದನ್ಯರದಾರು ।
ಭೋರೆಗಳೆನಿಸುವರೆನ್ನ ದೇವ ಸುರಸಂಜೀವ ನಮೋಯೆನುತ್ತೆರಗಿದಂ ॥ (23)

ಆರು ನೋಡುವರು ವಿಶ್ವಾಕಾರವಂ ದೇವ ।
ಕಾರುಣ್ಯದಿಂ ಕಾಯವೇಳ್ಕೆಂದು ಭಯದಿಂದ ।
ಸೂರಿಯನ ಸುತ ನಡುಗಿ ಶತಸಹಸ್ರೋನ್ನತಿ ನುತಿಗಳಂ ಮಾಡಿ ನಲಿದು ॥
ವೀರರಾಘವನು ವಿಶ್ವಾಕೃತಿಯನೊಳಗಿಟ್ಟು ।
ಪೂರುವದ ಮನುಜವೇಷದಿ ಕುಳಿತು ನಗುತ ಕಪಿ ।
ವೀರನೊಡನಿಂತೆಂದನತಿದಯಾರಸದಿಂದ ಹಿಗ್ಗುತಿರೆ ಪ್ಲವಗವೃಂದ ॥ (24)

ಪಳಿವಾತುಸಂದಣಿಗೆ ಪೊಳೆವಾಗಮದ ಕೆಳೆಗೆ ।
ತೊಳಲುತಿಹ ಮಂತ್ರಗಳ ತಂತ್ರಂಗಳಾರಡಿಗೆ ।
ಬೆಳಗುವೀ ಕರ್ಮಮರ್ಮಗಳ ಸ್ಫೂರ್ತಿಗೆ ಯೋಗಸಾಂಖ್ಯಾನುಮಾರ್ಗಗಳಗೆ ॥
ಅಳವಡುವನಲ್ಲ ವೇನೊಂದರಿಯದತಿಭಕ್ತಿ ।
ದಳೆವಾತನಿಗೆ ತೋರ್ಪೆ ನೆನ್ನ ನಿಜವಂ ಕೇಳು ।
ಗೆಳೆಯ ನೀಂ ಬಹುಪುಣ್ಯ ಗೈದ ಕತದಿಂದಾದುದೆಮ್ಮ ದರುಶನವು ನಿನಗೆ ॥ (25)

ಸರಸಿಜಭವಾದಿಗಳು ಸತತ ಮಾಡುವ ನೇಮ ।
ಭರದಿಂದಲೆನ್ನ ಕಂಡರಿಯರೇಕಾಯುತನ ।
ಪೆರದನನ್ಯತೆ ವೆತ್ತ ಚಿತ್ತನೀನಾಗೆ ಮುದವೆತ್ತ ದಿಬ್ಯಗಳ ತೆತ್ತು ॥
ಪರಮ ದಿವ್ಯಾಕೃತಿಯು ತೋರಿದೆನು ಬಕ್ತಿವೃಥ
ತರವಾಗಲೆಂದು ಸತತಾನಂದಗೊಳುತಿರುವ ।
ಪರಿಯನುಪದೇಶಿಸುವೆ ತಿಳಿದು ಕೃತಿಯಾಗುದೆನುತವುಸುರಿದಂ ರಘುವೀರನು ॥ (26)

ಅರುಣೋದಯದೊಳೆದ್ದು ಕರಚರಣಗಳ ತೊಳೆದು ।
ಹರುಷದಿಂದೊಂದೆಡೆಯ ಗೋಷ್ಠದೊಳು ಕುಳ್ಳಿರ್ದು ।
ಸರಸಿಜಾಸನವ ಸಡಗೂಸಿ ದಿಟ್ಟಿಗಳೆರಡ ನಾಸಾಗ್ರಕೆಳವಡಿಸುತ ॥
ಮರುತರುಚಿವ ನಿರಿಸಿ ಹೃದಯವುಮ್ಮೊಗ್ಗಿಸಿ ।
ಸರಸಿಜದ ಮಧ್ಯದೊಳು ದಿವ್ಯಸಿಂಹಾಸನವ ।
ವರರತ್ನದ ಮಂಟಪದ ಮಧ್ಯದೊಳ್ ಧ್ಯಾನಿಪುದು ಮಂದಾರಪಾದಪವನು ॥ (27)

ಗದ್ದುಗೆಯ ಮಧ್ಯೆ ಮಧ್ಯಾಸೀನ ಮೂರುತಿಯ ।
ಮುದ್ದುಮುಖ ಮುಗುಳುನಗೆ ಚಿತ್ರಭೂಷಣಾನ್ವಿತರ ।
ಬದ್ಧವಿರಜಾಂಬರಗಳೆಳವಟ್ಟ ಕರತ್ರಯದಿ ಧರಿಸಿರುವ ಶರಚಾಪದ ।
ಪೊದ್ದಿಗೆಯನಂಕದೊಳಗಿರುವ ಧರಣೀಸುತೆಯ ।
ಶುದ್ಧಾಂತರಂಗದೊಳಗೆಸೆವ ಸೌಮಿತ್ರಿಯುಂ
ಬುದ್ಧಿಗಾಜ್ಞೆಯೊಳೆಸೆವ ಶ್ರೀರಾಮಮೂರ್ತಿಯಂ ಧ್ಯಾನಿಸುದು ಮನವಿಡಿದು ॥

ಪರಮಪುರುಷನ ಚಿತ್ತಸರಸಿಜದಿ ಕುಳ್ಳಿರಿಸಿ ।
ಪರಿಪರಿಯ ಭಕ್ತಿಯಿಂದಾವಹನಾದಿಗಳ ।
ವಿರಚಿಸುತ ಪೂಜೆಗೈದೆರಗಿ ನುತಿಸುತ ಚಲಿಸದಂತೆ ಕುಳ್ಳಿರ್ದು ಬಳಿಕ ॥
ಗಿರಿಜೆಯುರಸಂ ಸದಾಸ್ಮರಿಸಿ ಕೃತಿಯಾದ ಶುಭ ।
ಕರನಾಮಸಾಸಿರಗಳನ್ನು ಜಪಿಸುತ್ತಮಗು ।
ಳೆರಗಿ ಸಂತಸದಿಂದ ನಿರತ ಸೇವಿಸಿ ನಿತ್ಯ ಸುಖಿಯಾಗೆನುತೊರೆದನು ॥ (28)

ಈ ಪರಿಯೊಳನುದಿನವು ಭಕ್ತಿಯಿಂ ಪೂಜಿಸುವ ।
ಗೋಪಿತವ ಶರಣಂಗೆ ಪಾತಕಸತ್ತಂಗಳುಂ ।
ಪೋಪವಾನಂದ ಬೆರ್ಚುತ್ತ ಬಪ್ಪುದಾನಪ್ಪನಂತ್ಯದೊಳು ಸುಖಿಯೆನಿಪ್ಪ ॥
ಯೀ ಪೊಲೆಯ ದೇಹದೊಳಗಿರ್ದರಾ ಪುರುಷ ಸ ।
ಲ್ಲೀಪ ನಿತ್ಯಾನಂದನಾಗಿರ್ಪ ದಿನದಿನವ ।
ಪಾಪಕೃತ್ಯಗಳೊಂದನೊಂದ ಜೀವನ್ಮುಕ್ತವಸ್ಥ ಚಿತ್ತನುಸತ್ತ ॥ (30)

ಎನುತ ತಿಳಿದೆನ್ನಲ್ಲಿ ಮನನಿಲಿಸಿ ನಿತ್ಯಸುಖ ।
ದನುಭವಾನಂದದಿಂದುಪದೇಶವನು ಮಾಡೆ ।
ಲಿನಸುತಂ ಭಕ್ತಿಯಿಂ ಸಾಷ್ಟಾಂಗವೆರಗಿ ನುತಿಗೈದು ಕೈಮುಗಿದು ನಿಲಲು ॥
ಹನುಮ ಜಾಂಬವ ಮುಖ್ಯರಾನಂದಮಯರೆನಿಸಿ ।
ವನಜಾಕ್ಷ ರಾಮ ಪುರವರಸ ರಾಘವನಪದ ।
ವನಜಗಳಗಭಿನಮಿಸಿ ವಾಸುದೇವಾತ್ಮಕತೆವೆತ್ತು ಸುಖಿಮಿರ್ದರರಸಾ ॥ (31)

ಸಂಧಿ 5 ಕ್ಕಂ ಪದ 198.

# ಆರನೆಯ ಸಂಧಿ.

ಸೂಚನೆ॥ ತರಣಿತನಯಂಗೊಲಿದು ಸುರರಾಜನಂದನನ ।
ಶರವೊಂದರಿಂದೆಚ್ಚು ಶಾಖಾಮೃಗದ ಬೆಚ್ಚು ।
ಪರಿವನರೆನಿಮಿಷದೊಳು ರಾಘವಂ ಭಕ್ತಜನರಾನಂದ ವರ್ಧವಂತೆ ।

ಗಿರಿಜೆಕೇಳ್ ದುಂದುಭಿಯ ಶಿರವ ಮಿಡಿದಂ ತಾಳ ।
ತರುಗಳೇಳಂ ಕಡಿದು ವಿಶ್ವರೂಪವ ತೋರ್ದ ।
ಪರಮಪುರುಷನ ಮಹಿಮೆಯಂ ಕಂಡು ಸಂತೋಷಮೆಡೆಗೊಂಡು ಕಪಿರಾಜನು ॥
ಚರಣಂಗಳಿಗೆ ನಮಿಸಿ ಕರಗಳಂ ಮುಗಿದು ಪ್ರಿಯ ।
ಕರವಾಣಿಯನ್ನುಡಿವ ದೇವಚಿಂತಾತ್ರತಿಯು ।
ಸರಿದು ಪೋದುದು ಭೀತಿ ಹಿಂಗಿದುದು ಭವಭಯಂ ಕೃಪೆಯನುಂ ಪಡೆದು ಬಳಿಕ ॥ (1)

ಸುರರಾಜನರಮನೆಯ ಕಳೆದುಕೊಂಬನು ಕಪಿಯ ।
ಪರಿಯಾದೆಂತಿಹುದೆನುತ್ತ ಕೇಳ್ದ ಸುಗ್ರೀವನಂ ।
ಕರೆದೊಂದ ರಘುವೀರ ಮುಂದಪ್ಪ ಕಜ್ಜವಂ ವಿರಚಿಸು ನಿರಾಲಸ್ಯದೆ ॥
ತ್ವರಿತದಿಂ ಪೋಗಿ ಕಪಿವರನ ಕರೆ ಯುದ್ಧಕ್ಕೆ ।
ಬರಲಾನು ಸಮಯಮಂ ನೋಡಿಕೊಂದವಂ ।
ಧರೆಗುರುಳ್ವುವೆನಿವಕೆ ಸಂದೇಹ ಬೇಡೆನುತ್ತ ಮುಗುಳ್ಭಯಮನ್ನಿತ್ತನು ॥ (2)

ಕೇಳ ಸಂತ್ರಸದಿಂದ ಕಪಿವರ್ಯ ಧೈರ್ಯವಂ ।
ತಾಳಿ ಕಿಷ್ಕಿಂಧೆಯಿಂದಗ್ಗವತಿ ಲಕ್ಷ್ಮಣಂ ।
ಮೇಳವಿಂ ಪಿಂದೆ ನಡೆತಂದು ಬಿಪ್ಪಿಸಿದನೆಡೆಯ ಕೊಂಡು ತರುಮೂಲದಿ ।
ಭಾಳನೇತ್ರನ ತ್ರಿಪುರದಿ ಮಂಡಿಸಿರೆ ಸೌಮಿತ್ರಿ ।
ತಾಳಿ ಶರಚಾಪಗಳ ಕೆಲದಿ ನಿಂದಿರೆ ನನವು ।
ನಾಳೊಳಗಂ ಗೃಧ್ರತ್ರಡಿಗಟ್ಟನೆ ಜಾಂಬವಂ ಪೊಗಳ ಘುಲ್ಕೈಸ ತಿರಲು ॥ (3)

ಆಳ್ಪಿತಂವಗ್ರಜನ ನಾಮಮಂ ಪಿಡಿದು ।
ಕೂಗೆ ಸುಗ್ರೀವ ನಾರ್ಭಟಿಯ ಕೇಳುತ ಕೋಪ ।
ಮೋಗುಬಿಸಿ ತಾ ಸುರಪನಂದನಗೆ ಲಯಕಾಲರುದ್ರ ರಿಮ್ಮಡಿಯೆನಲ್ಕೆ ॥
ಸಾಗರವು ಮೇಲ್ವರಿದು ಪೊಂರದಿರ್ದ ಮಾರುತನ ।
ವೇಗದಿಂದೇನೆಂಬೆನಾ ಗಗನಬುವಿ ನಡುಗೆ ।
ಲಾಗುವೇಗದಿ ತರಣಿಸುತನ ತುಡುಕಿದ ಘರ್ಮಸುತ ಬುಧನ ಪಿಡಿವಂದದಿ ॥ (4)

ಆದುವದ್ಭುತಯುದ್ಧವಿರ್ವರ್ಗಂಗೆ ಮಾಲ್ಗತಿ ।
ಮೇದುರತೆ ವೆರ್ಚೆ ಮುಷ್ಟಾಮುಷ್ಟಿಯಿಂದ ತರು ।
ಭೂದರಗಳಿಂದಮರೆನಿಮಿಷ ಹರಿಕೈಚರ ರಣದಿಂದಮ್ಯೆವಡಿಯೆನೆ ॥
ಕಾದುವುದ್ಧಟವೀರ್ವರೊಳು ರೂಪುಬಲಸರದ ।
ಭೇದಮೆಳ್ಳನಿತಾದಡಂ ಗ್ರಹಿಸೆ ಮತಿಗೆ ದು ।
ಬೋರ್ಧವಾದುದರಿಂದ ಬೆರಗೆನಿಸಿ ನಿಟ್ಟಿಸುತಮಿರ್ದರಾ ಸನ್ನದ್ಧಮಂ ॥ (5)

ಪಿಡಿದ ವೈರದೊಳು ಬಡಿದಾಡಲೀರ್ವರ ಶಕ್ತಿ ।
ಗೊಡನೊಡನೆ ಸಂತಸದಿ ನೋಡುತಿರಲನ್ನೆಗಂ ।
ಕಡುಗೋಪದಿಂ ವಾಲಿ ಮುಷ್ಟಿಪ್ರಹಾರದಿಂ ಮೊಳಕಾಲ್ಗಳಿಂದಡಕುತ ॥
ಬಡಿಯೆ ರಕುತವ ಕಾರುತೆಡಬಲನ ನೋಡಿ ಕಂ ।
ಗೆಡುತಾರನುಂ ಕಾಣದೋವಿ ಬನವಂ ಪೊಕ್ಕ ।
ನೊಡನೆ ಬದುಕಿದೆನೆನುತ ಭಯದಿ ಪಿಂದಿರ್ದಗಿದಂ ವಾಲಿ ಮುನಿವಚನವಿಡಿದು ॥ (6)

ಹನುಮಸೌಮಿತ್ರಿಜಾಂಬವರೊಡನೆ ರಾಘವಂ ।
ಬನಕೆ ನಡೆತರೆ ನೋಡಿ ಸುಗ್ರೀವ ದೈನ್ಯದಿಂ ।
ಕಿನಿಸಿಂದಲತಿ ಕ್ರೂರತರ ವಾಣಿಯಿಂ ಬಳಿಕ ಮೂದಲಿಸಲನುಗೈದನು ॥
ಎನಗೆ ನಂಬುಗೆಯಿತ್ತು ಬಲಶೌರ್ಯಗಳ ತೋರಿ ।
ಮನೆಯಿಂದ ಪೊರಮಡಿಸಿ ಮತ್ತೆ ಮರೆಗೊಂಡಿರ್ದ ।
ಮನುಜೇಶ ಕೊಲಲಾರೆನೆಂದರಾನೇಂ ಗೈವೆ ನಿನಗೆ ಮೊದಲೇಂ ಪೇಳ್ದೆನು ॥ (7)

ಶೂರವಿಕ್ರಮಶುಭಾಕಾರಜನ್ಯನಿಗನಾ ।
ಕಾಗಮಂವಳಿದು ಧೈರ್ಯವ ನುಡಿಗಳಂ ಧರರ ।
ನಾರಾರವಂಚಿಸಿದೆ ನವಿಮಿತ್ತದೊಳಗೆನ್ನ ತುತ್ತು ಗೈದಿತ್ತೆ ಬಳಿಕ ।
ಕ್ರೂರಕಾಲಾನಲಗೆ ನಿನಗೆ ಬಂದುದದೇನು ।
ಚಾರುತರಕೀರ್ತಿ ಮುಂದೆನುತ ಮೂದಲಿಪ ಕಪಿ ।
ವೀರನಂ ಸಂತೈಸಿ ವಿನಯದಿಂದಿಂತೆಂದ ಕರುಣಾರಸಮದೆಂತ್ರಾಟೊ ॥ (8)

ತಪ್ಪಿದುದೆಮ್ಮಿಂದಮಪ್ಪ ಲಾಲಿಸು ಕೋಪ ।
ದೊಪ್ಪವಂ ಶಮಗೊಳಿಸು ರೂಪ್ಯಯೌವನಬಲಂ ।
ಒಪ್ಪದಿಂ ಜವರವಗಳೊಂದೆನಿಸಿ ಭಿನ್ನತೆಯು ಗೋಚರಿಸದಾ ಮದಿಮಗೆ ॥
ಇಪ್ಪಡಿವಮಾಗದಿರೆ ಶರವ ನಿಲಿಸಿದೆ ಬಿಡಲು ।
ತಪ್ಪದಾರಾಪಡಂ ತಿನಲೆನಗೆ ದುಷ್ಕೀರ್ತಿ ।
ಒಪ್ಪದೆನ್ನುವ ಭಯದಿ ನಿಂದು ನಿಟ್ಟುಸುತಿರ್ದವಪಕ್ಕೃತಿಗೆ ಮೊದಲಾದುದು ॥ (9)

ಇದರಿಂದಲಜ್ಞಾನ ಬಾಲ್ಯ ಮೌಢ್ಯಂಗಳಿವು ।
ಗೊದಗಿಸದೆ ತಪ್ಪೇನು ಪರರಿಂದ ಸಂಕಟದ ।
ಸದನಬಂದಟಸಿದುದು ನಿನಗಲ್ಲದೆಮಗಾದುದೆಂದರಿತು ಕ್ಷಮಿಸು ದಯದಿ ॥
ಸುದತಿ ಲಕ್ಷ್ಮಣ ತಾನು ಮೂವರಂ ನಿನಗೆ ಸಂ ।
ಪದವ ನೆನೆವೆನುತ್ತ ತಿಳಿದು ನೀ ಮಗುಳೊಮ್ಮೆ ।
ಕದನಕಾತನ ಕರೆಯೆ ಕಾಣ್ಬುದು ಮತ್ತಿನ್ನು ಪ್ರಸಿದ್ಧಿಟದ ಮುಟ್ಟ ನಿನಗೆ ॥ (10)

ಪೊರಟುಬರೆ ಸುರಪಸುತ ಶರಕಾಹುತಿಯೆನಿಪ್ಪ ।
ಭರವಸವಿದೆಂದರಿದು ಪೋಗೆಂದು ಪೇಳೆ ಪತಿ ।
ಕರಿಸಿ ಸುಗ್ರೀವನಿಗೆ ಸೌಮಿತ್ರಿಯಂ ಕರೆದು ಪೇಳಿದಂ ರಘುವೀರನು ॥
ಸುರಪನಂದನಗಿವಗೆ ಭೇದಕಾಣ್ಬುದುಪಂತೆ ।
ಕೊರಳೊಳಿಡು ಗಜಪುಷ್ಪಮಾಲೆಯನ್ನೆನುತ ರಘು ।
ವರ ಪೇಳದಂತೆಸಗಿ ಲಕ್ಷ್ಮಣಂ ಸಂತಸಂ ಗೊಳಿಸಿದಂ ಸುಗ್ರೀವನ ॥ (11)

ಬಾನೆಡೆಯ ವಿಪರೀತನಕ್ಷತ್ರಮಾಲೆಯಿಂ ।
ಭಾನು ಕಂಗೊಳಿಪಂತೆ ಸುಗ್ರೀವ ಕಲಿಮೊಸೆಯೆ ।
ಮಾನವಾಧಿಪ ಸಮರಸನ್ನಾಹಯುಕ್ತನಿಂ ಮುಂಗಡೆಯಲೈದುತಿರಲು ॥
ವಾನರಾಧಿಪ ಹನುಮ ನಳನೀಲ ಜಾಂಬವ ।
ದ್ವಾನರರು ಪಿಂತೆ ಬರೆ ಬಳಬಳವ ನೋಡುತ್ತ ।
ಮ್ಲಾನಹರ್ಷದಿ ಸುರಪನಂದನಕ್ಕೈಮ್ದಿಪ ಬನವ ಕಂಡಂ ರಘುಜನು ॥ (12)
ಅಚ್ಚರಿಯ ಬೀರುತಿದೆಯೆನುತ ರವಿಸುತ ನೆಲದಿ ।
ಪೊಚ್ಚಪೊಸ ಜನ್ಮವಿಗರಂತೆ ವನ[ಮೆರೆಪಿದೆ] ।
ನಿಚ್ಚಮುಪಿದಾರಿಂದ ನಿರ್ಮಿತಂ ಚಿತ್ರರಿಪ್ಪುದೆನೆ ಪೇಳ್ದ ಸುಗ್ರೀವನು ।
ಮಚ್ಚರವನುಳಿದ ಮುನಿಹಂ ವಿನುತ ಸಪ್ತಜನ ।
ನಿಚ್ಚಮೊನೆಲದಿ ವಿಪರೀತ ಕರ್ಮದೆಯೊಳವೃತ್ತ ।
ದಿಚ್ಛೆಯ ನಿರಾಹಾರ ಶತವತ್ಸರಂಗಳಂ ನೇಮದಿಂದಿರ್ದನಸ್ಥಾಂತ ॥ (13)
ಆ ಮಹಾಮುನಿಗಳನುಗ್ರಹದಿ ಕಂಗೊಳಿಪ ।
ದೀ ಮಹದ್ವನ ಸುರಪವೈಭವತಿಶಯದಿನದಿಂ ।
ದಾ ಮಹತ್ವ್ಯಾಧಿಕಪಸೋವದುತ್ಸವನಾಂತು ತೋರ್ಪ್ಪುದು ತಪೋಜನಿತವು ॥
ಕಾಮಿತವನಿತ್ತಪುದು ಕಪಿಸಕ್ಕಮ್ಮಗತ್ತತಿಯ ।
ಭೂಮಿಯಂ ಪೊಗಲು ಪಿಂಬಿರಿಗದ್ಯೆ ದೈತ್ಯೆಯು ।
ಸೋಮಸೂರ್ಯಾದಿ ಸುರರಿಂವೆ ಸಿಟ್ಟೆಗಲಿವು ಕೇಳ್ ತಪೋವನವು ಜೀಯ ॥
ತೊಡರುಗಳ ರವ ತೂರ್ಯಸಾವಿತ್ರ ನಿಸ್ವನಂ ।
ಮಡದಿಯರ ಕಿಂಕಿಣೀರವಮಿಂಪು ಸೊಂಪು ಕೇ ।
ಳ್ಪಡುತಲಿದೆ ತ್ರೇತಾಗ್ನಿಗಳು ತೋರುತ್ತಿದೆಯುಸಮಸಂಪತ್ಸಮೃದ್ಧಿಯಿಂದ ॥
ಬಡುಗಣ್ಣಿರಿಂದಧಿಕನೆಂದಾಮನೈತಂದು ।
ಪೊಡೆವಡುವನವಗೆ ಶುಭ ಪರ್ಚೆ ಬಹುದವರಿಂದ ।
ಪೊಡವೀಶ ವಂದಿಸಲ್ವೇಳ್ಪುದೆನಲೆರಗಿದಂ ರಾಮ ಸೌಮಿತ್ರಿಸಹಿತ ॥ (15)
ವಂದಿಸುತ ಬನಕೆ ರಘುನಂದನಂ ಮನದೊಲವಿ ।
ನಿಂದ ಕಿಷ್ಕಿಂಧದೊತ್ತಿನ ಬನಕೆ ನಡೆತಂದು ।
ಮುಂದಹಾಸದಲಂದು ಮರನ ಮರೆಯಂ ಪಿಡಿದು ಸುಳ್ಳಿರಲ್ಕನುಜಸಹಿತ ॥
ಬಂದು ಕಪಿವೀರರೆಡಬಲದಿ ನಿಂದಿರೆ ಸೂರ್ಯ ।
ನಂದನ ಬನ್ನಪಂಗೈದನಿಂದಾದರಂ ।
ಕುಂದೆನಿಸದೆನ್ನಯ ಮನೋರಥವ ಸಲಿಸೆಂದು ಪದಕೆರಗಿ ಬೀಳ್ಕೊಂಡನು ॥ (16)
ಬೆದರದಿರು ಸುಗ್ರೀವ ಭೇದಕಾಣ್ಪುಡುವಂತೆ ।
ಹೃದಯದೊಳ್ಕಾಳಿಕಾಚಿಹ್ನೆಯುದೆ ತವದಿಂ ।
ಕದನಕ್ಕೆ ಕರೆ ವಾಲಿಯಂ ಬಂದರೊಂದು ಶರದಿಂದ ನಿನ್ನಯ ಭೀತಿಯಂ ॥
ಪುದಿದ ವೈರಗಳ ತೀರ್ಚುವೆನೆನ್ನುತಭಯಮಂ ।
ಮುದದಿಂದಲೀಯಲನುರಾಗದಿಂ ಸುಗ್ರೀವ ।
ಪದುಳದಿಂದೈತಂದು ಕಂದರಂ ಪೊಡೆವಂತೆ ಭೋರ್ಮೊರೆದ ನಗರ ಬೆದರೆ ॥ (17)

ಸಿಡಿಲರವಕಿಮ್ಮಡಿಸಿ ಸುಗ್ರೀವ ಕ್ರೋಧದಿಂ ।
ದಡಿಗಡಿಗೆ ಸಿಂಹನಾದಂಗೈಯೆ ಮೃಗಗಳೆದೆ ।
ಯೊಡೆದು ಧರಣೀತಳದಿ ಕೆಡೆದೊದರುತಿರೆ ಪ್ಲವಗತತಿ ನಡುಗಿ ತಲ್ಲಣಿಸಲು ॥ (18)
ಘುಡುಘುಡಿಸಿ ನಾದ ಕೇಳ್ಪಡಲು ಶುದ್ಧಾಂತದೊಳ್ ।
ಮಡದಿಯರ ಮಧ್ಯದೊಳಗಿರ್ದು ಕೇಳದ ವಾಲಿ ।
ಯೊಡನೊಡನೆ ಪಲ್ಮೊರೆದು ಪೊಡೆದಿಡುವೆನೆಂದೆದ್ದ ಕಾಲಾಗ್ನಿರುದ್ರನಂತೆ ॥

ಮೊದಲಿಂದ ದ್ವಿಗುಣೀಕೃತಕ್ರೋಧದಿಂ ವಾಲಿ ।
ಕದನಕ್ಕೈದುವ ಪರಿಯು ಕಂಡು ತಾರೆಯು ಬಂದು ।
ಪದಗಳಂ ಪಿಡಿದು ಸಮಯಾನುಸರಣೆಯ ನುಡಿಗಳಂದ ಬಿನ್ನಪಗೈದಳು ॥
ಕದನಕರ್ಕಶಮಲ್ಲ ನಹುದೆನುತ ತ್ರಿಜಗದೊಳ್ ।
ವಿದಿತವಾಗಿರುವುದಾದರು ರಾಜಕುಲಧರ್ಮ ।
ತುದಿಯೆನಿಪ್ಪುದನು ಶರಣೆಗೈವುದನುಚಿತಮೆನ್ನ ನುಡಿಯು ನವಧರಿಪುದಾರ್ಯ ॥ (19)

ಹಿತಜನರೊಳಾಳೋಚನಂಗೈದು ಕಾರ್ಯಸಂ ।
ಗತಿಯು ಬಲದುರ್ಬಲಗಳಂ ತಿಳದು ಸ್ವಜನ ಸಂ ।
ಮತಿಪಂತೆ ರಣದ ಸನ್ನಾಹಂಗಳಂ ಗೈದು ಬಲವನುಂ ಸಮತ್ರಗೈದು ॥
ಮತಿಯಿಂದ ಸಾಧಿಸುವುದುತ್ತಮಂ ದೌರ್ಬಲವ ।
ಜತೆಗೊಳಿಸಿ ಗೆಲುವುದದು ಮಧ್ಯಮಂ ತಾನೈದಿ ।
ಖತ್ರಿಗೊಂಬುದಧಮವನುಚಿತಮೆಂದು ನೀತಿನಯವೆತ್ತರೊಲಿದುಸಿರ್ವರನಘ ॥ (20)

ನೋಡು ರಣದೊಳು ಪರಾಭವಹೊಂದಿ ಪೋದ ಹೆಂ ।
ಬೇಡಿ ಮಗುಳೈತಂದು ವೀರವಾದಗಳ ಪೇಳೆ ।
ದಾಡುತಾರ್ಭಟಿಪುದೇಂ ಕಾರಣ ಮೆನುತ್ತರಿಯದಲೆ ಬರಿದೆ ಕೋಪದಿಂದ ॥
ನಾಡಾಡಿತನದಲ್ಲೈದಿದರೆ ಜಯಸಿರಿ ಕೈಗೆ ।
ಗೂಡಿಬಹುದೆಲ್ಲಿಯದು ಬೆಂಬಲಕ್ಕಧಿಕರಿಂಬಲ ।
ಕೂಡಿರಲ್ಕೋಡಿಗೆಡೆದೈತಂದು ಭೋರ್ಮೊರೆವ ಕಾಳಾಹಿಯನೆ ಕ್ರೋಧದೆ ॥ (2.)

ಅರಿನಿಗ್ರಹಂಗೈವುದಾತ್ಮರಕ್ಷಣೆಗೈದು ।
ಸಿರಿಯನುಂ ವಶಗೈದು ಸೀಮಂತಿನಿಯು ಬೆರೆದು ।
ಪರಮಸೌಖ್ಯವನುಂಬ ಪರಿಯನೆನದೈತಂದನಲ್ಲಿ ದೆಂದಿನ ತೆರದೊಳು ॥
ಬರುವದಲ್ಲಿವುಮಲ್ಲ ತಿಳಯದೈವಲು ಸಲ್ಲ ।
ಧುರದಿ ನಿಮ್ಮಯ ಶೌರ್ಯಗಳ ಕಾಣದವನಲ್ಲ ।
ತರಣಿಸುತ ನೆಲ್ಲಮಂ ಬಲ್ಲದಯದಿಂ ಮನಕೆ ತರವೇಳ್ಕುಮೆನ್ನ ಸೊಲ್ಲ ॥ (22)

ಪಲವುವಿಧಕಷ್ಟಗಳ ಪದನಖರಮುಷ್ಟಿಗಳ ।
ಸಿಲುಕಿನೊಳ್ ಕಂಗೆಟ್ಟು ಜೀವಪುಳಿದೈದಿದವ ।
ಬಲವಿಲ್ಲದೇನುಂ ಬರೈತರುವ ಮೊದಲು ದಿನ ಕಡದು ಗರ್ತದೊಳು ಮಗುಳೆ ।
ನಿಲದೆ ಬೀಳ್ದಪನೆಂತು ಸುಲಭಮತಿಯನ್ನಾಂತು ।
ಕೊಲಿಸಿಕೊಳಲೇನವಗೆ ಫಲವೇನಹುದು ಕೊನೆಗೆ ।
ಕಲಿತನವನಲ್ಲಿಟ್ಟು ಕ್ರೋಧಬುದ್ಧಿಯ ಬಿಟ್ಟು ಸಾಧುಮಾರ್ಗವನು ಮುಟ್ಟು ॥ (23)

ಮೂರುಲೋಕದೊಳುಳ್ಳ ಶೂರರಿಂಗತಿಶಯದ ।
ಚಾರುಜಸಮಂ ಗಳಿಸಿ ಚದುರಿಂದ ಬಾಳ್ವುದಕೆ ।
ತೋರವೂಣಿಯುವ ಸಲಹುವ್ರದುಚಿತವೆಲೆ ದೇವ ಕಾರ್ಯದುಷ್ಕಾರ್ಯಂಗಳಾ ॥
ಭಾರಣೆಯೊಲಾವುವಗಳನು ತರ್ಕದಿಂ ತಿಳಿದು ।
ದಾರುಣವನುಳಿದು ಕಾರ್ಯವನೆಸಗೆ ಫಲವಿಫಲ ।
ಸಾರುವುದು ದೇವವನುಚಿತದಲಿ ಕಾರ್ಯವಿಫಲ ಕಪಿವಂಶಧುರ್ಯ ॥ (24)
ಸಂಗಾತಪುಟ್ಟಿದವ ನಿಖಿಲಾಗಮಾಭಿಜ್ಞ ।
ಸ್ತ್ರಂಗಳಂ ಬಲ್ಲನಿಂಗಿತ್ರದ ಮತಿಯುತ ಬಲಿ ನ ।
ತಂಗಸುತ ನಿಮಗಸ್ಯನಲ್ಲ ನೇಮಿಸಿದುತೆ ಶಿರಸಾವಹಿಸಿ ನಡೆವರೆ ॥
ಅಂಗವನಿಗಿಂದಧಿಕಮೆಂದುತು ಮನದ ಕೃ ।
ತ್ಯಂಗಳೆಲ್ಲವ ಮರೆತು ಯುವರಾಜ್ಯವಲ್ಲಿ ಪಾ ।
ದಂಗಳಂ ಸೇವಿಪೊಲು ದಯಗೈನರುತ್ತವುದ ಕೀರ್ತಿ ಸಮನಿಸುವುದಾರ್ಯ ॥ (25)
ಬಪ್ಪುದುಂಟಾಗಿಗಾವರು ಕಾಲವಶದಿಂದ ।
ತಪ್ಪಿದಂ ಪಿಂಯುರನುಮತಿಸಿ ನೀಕ್ಷಿಸಿದಯುದೊ ।
ಳೊಪ್ಪುಗೊಳಳಿಹವರದಲೆಣಿಕೆ ಕೈವಶವಹುವು ಶಾಸ್ತ್ರಮುತ್ತವೆಂದು ತಿಳಿದು ॥
ಅಪ್ಪಿಕೊಂಡರೆ ಪಗೆಗಳಾದೊಡಂ ಬೆರತಕಗ ।
ಇಪ್ಪರಿಯೊಳರೆ ಮೂರುಲೋಕದೊಳ್ ಜಯಕೀರ್ತಿ ।
ಯಪ್ಪುದಿದು ಹಿತಮೆರುತವಾಳೋಚನಂಗೈದು ಪತಿಕರಿಸವೇಳ್ಕು ಜೀಯ ॥(26)
ಸಾವಧಾನದೊಳೆನ್ನ ಬಿನ್ನಪವ ನಾಲಿಪುದು ।
ದೇವ ನಾಂ ಕಂಡಕನಸಿನ ಪರಿಯ ಪೇಳ್ದಪೆನು ।
ದೇವತತಿಗಭಯವಂ ಕೊಟ್ಟು ಬಂದಾನಂದವಮೂರ್ತಿ ನುಂ ಮೂರ್ತಿವೆರೆದು ॥
ಈ ವಸುಧೆಯೊಳಗುದಿಸಿ ವಂಶಕಾರುಣ್ಯದಿಂ ।
ಠೀವಿಯಿಂದೈತಂದು ಲಿವ್ಯಮಾಕವ ಪೊರೆಯು ।
ಲಾ ವನದೊಳರೆ ಕಂಡು ಪವನಸುತ ಭಕ್ತಿಯಿಂದೆರಗಿದಂ ಪ್ರೀತಿಗೊಂಡು ॥ (27)
ಹಿತದಲುಪಚರಿಸಿ ಸಂಗತಿಗೈಯೆ ಸುಗ್ರೀವ ।
ಕ್ಷಿತಿಪತಿಗೆ ತನ್ನ ವೃತ್ತಾಂತಮಂ ಬಿನ್ನವಿಸೆ ।
ಶತಮುಖನಸುತನ ಸಂಹರಿಸಿ ರಾಜ್ಯವ ನೀವೆನೆನುತಭಯಮಂ ಕೊಡುತಲೆ ॥
ಖತಿಯಿಂದ ಕವನದೊಳ್ ಕೋಲೊಂದ ಬಿಡಲು ನೀಂ ।
ವ್ಯಥೆಗೊಳುತ ಪೊರಳುವವ ಕಂಡೀನು ತಳ್ಳಿಸುತ ।
ಕ್ಷಿತಿಯೊಳಗೆ ಬಿದ್ದಿರ್ದ ಘೋರವಮಂ ಕಂಡಿರ್ದೆನುರಸ ಸಂಮೋದದೊಳಗೆ ॥ (28)
ಹತಮಲ್ಲದುದ ಬೆರರೊಳುಸುರ ಬಾರದೆನುತ್ತ ।
ಮತಿಗೋಪ್ಯಗೈದಿರ್ದರೊಂದು ದಿನ ಸುಕುಮಾರ ।
ಸುತರಂಗದನು ಬೇಂಟೆಗೈದಿರ್ದರಾ ವನದೊಳಾದ ಕಥೆಗಳನೆಲ್ಲಮಂ ॥
ಅತಿಗೋಪ್ಯದಿಂದೆನ್ನೊಳುಸುರಿರ್ದ ರಾಮ ಭೂ ।
ಪತಿ ನಿನ್ನ ಕೊಲಲೆಂದು ಬಂದಿರ್ದ ಕಾರ್ಯಸಂ ।
ಗತಿಯ ತಿಳಿದಾತ್ಮಕುಲಬಾಂಧವರ ರಕ್ಷಣಂಗೈದು ಬಾಳ್ದಪುದು ಲೇಸು ॥ (29)

ಪಲವು ಮಾತಿನ್ನೇನು ಪಂಥವುಂ ಬಿಡು ಮೊದಲ।
ಗೆಲವಪ್ಪುದೆಂಬುದ ಬಿಡು ಕರುಣಾವೃತ್ತಿಸಂ।
ಕಲಿತಮನದಿಂದ ಸುಗ್ರೀವನಂ ಕರೆತಂದು ಯುವರಾಜ್ಯಪಟ್ಟಮಿತ್ತು॥
ಚೆಲುವ ಕಪಿರಾಜ್ಯಮಂ ಸೌಖ್ಯದಿಂದನುಭವಿಸಿ।
ಸುಲಭಮಲ್ಲದ ಕೀರ್ತಿಫಳಿಸಿ ಬಾಳೆನುತ।
ಲಲನೆ ಬಹುವಿಧದಿಂದ ಮರುಗುತಳುತಳುತಂಘ್ರಿವಿಡಿದು ವಿಜ್ಞಾಪಿಸಿದಳು॥ (30)

ಪರಿಪರಿಯ ನಯನೀತಿಗಳ ತೋರಿ ತಾರೆ ಬಲು।
ಪರಿಯಿಂದ ಬೇಳ್ದುದಂ ಕೇಳ ಮತ್ತಾಗ್ರಹದಿ।
ಸುರಪಸುತನಿಂತೆಂದನೆಲೆ ಭೀರು ಬೇರವದ ಮತ್ತವನ ಕೂಗಿನಿಂದ॥
ಹರಿಯು ಪಿಂದಿರುಗಿದರೆ ತರಣಿ ಕಳ್ತಲೆಗಳ್ಕೆ।
ತೆರಳದಡೆ ಲೋಕಾಸ್ತಮಾಗದುಳಪ್ರುದೆ ಕಪಿಯು।
ತರಳೆ ಬಂದಂಜಿಸಿದರನುನಯದೊಳಾಸ್ಯೆವಿ ಮುಗುಳವನ ಕರತರುವದೆ॥ (31)

ಮಾನದಿಂ ಬಾಳ್ವ ಶೂರರಿಗೆ ಪರರಿಂದಪ್ಪ।
ದೇಸಾದರುಂ ಸಹಿಸಲಹುದೆ ಮೊರೆಯುತ ಕರೆವ।
ವಾನರನ ಧನಿಗೇಳ ನಿಲುವದಕ್ಕಿಂ ಮರಣ ಕರ ಲೇಸು ಭೂತಳದೊಳು॥
ಮಾನಿನೀ ಚಪಲತೆಯು ಭೀತಿಯಿಂ ಚಿತ್ತ ದನು।
ಮಾನ ಬೆಚ್ಚುತ ನುಡಿವೆಯಾದರಾಲಿಸು ಸೂರ।
ಸೂನು ಸಹಜಾತನೆಮಗವ ಕವನೆಕುಂ ಕರೆಯಲಾವು ಸುಮ್ಮನಿಹುದುಚಿತವೇ।
ಚತುರದಶ ಭುವನದೊಳಗುಳ್ಳ ಶೂರರ್ಬಲ್ಲ।
ರತಿಶಯದ ವೀರನೆಂದೆನ್ನ ಮಾನಿನಿ ಮುಂದ।
ಮತಿಬಲನೆನುತ್ತವನ ನೀಂ ಬಲ್ಲೆ ತ್ರೈಜಗಂ ತಿಳದಿರ್ಪುದಾದರೊಂದು॥
ಶ್ರುತಿಚಾರಮಣ ಲೋಕನಾಥ ಬಂದಿಹನವಗೆ।
ಹಿತ್ರವ ಬಯಸುವರೆಂದು ಬೇಳ್ದಿ ನೀನದಕೆನ್ನ।
ಮತಿಯೊಳರ್ಪುದ ಕೇಳ ನಿಶ್ಚಯಂಗೈದು ಸುಖದಿಂದಮಿರ[ಮಿಸು]ಕಾಮಿನಿ॥ (33)

ಸರಸಿಜಾಸನಗೊಲಿದು ಪರಬೊಮ್ಮ ಧರಣಿಯೊಳು।
ನರರೂಪಿನಿಂದವ್ರೈತಂದಿರ್ಪ ದಶಗಳನ।
ತರಿದು ಲೋಕವ ಪೊರೆಯಲೆಂದು ಗಹನಕೆ ಬಂದನೆನುತಾನು ಕೇಳರ್ದೆನು॥
ಚರಣಕಾನತನಾಗಿ ಹರುಷದಿಂ ಕರೆತಂದು।
ಸಿರಿಸಂಪದಂ ಶರೀರಂಗಳನ್ನರ್ಪಿಸುತೆ।
ಶರಣನೆಂದೆನಿಸಿ ಕೃತಕೃತ್ಯನಾಗುವೆನಬಲೆ ಕೃತಪುಣ್ಯಪರಿಪಾಕದೆ॥ (34)

ಸರ್ವಭೂತಾಲಯ ಸಮಸ್ತ ಬುದ್ಧಿಯ ಸಾಕ್ಷಿ।
ಸರ್ವರಂತರ್ಯಾಮಿಗಾದ ಸಜ್ಜನ ಪ್ರೇಮಿ।
ಸರ್ವಾತ್ಮಗವರೋರ್ವ ಹಿತರಹಿತರೆಂಬ ಭೇದಂಗಳುಂಟೇ ಜಗದೊಳು।
ದುರ್ವಿದಗ್ಧತೆಯಿಲ್ಲದನುದಿನಂ ಭಜಿಸುವರ।
ಸರ್ವದಾಂ ಭಜಿಸುತಿಹ ಕರುಣಾಳುಗಳ ದೇವ।
ನಿರ್ವಾಣದಾಯಕನೆನುತ್ತಮರಿತಿಹೆನಬಲೆ ರಾಮ ಪರಬೊಮ್ಮನೆನುತ॥ (35)

ಭಜಿಪೆ ಭಯಭಕ್ತಿಯಿಂ ಬಾವಿಸಿದರಿಂಗೊಲಿವ ।
ಭಜಕಸುರಧೇನು ರಾಘವ ಪರಾತ್ಪರ ವೈರಿ ।
ಗಜರುತಿಹ ಸುಗ್ರೀವನಧಟು ಕಟ್ಟಾಳುತನದಿರವ ಲೋಕಂ ಬಲ್ಲದು ॥
ಸುಜನವಂದಿತ ರಾಮನಂ ಕಾಣಲವ ಬಂದು ।
ಸೃಜಿಸಿದೊಡೆ ಕರುಣವಿಂ ಕಾಯ್ವ ಗರ್ವಿಸೆ ಪೊಡೆದು ।
ವಿಜಯಸಿರಿಯಾಂತೈದೆ ಬರ್ಪನಿದಕನುಮಾನ ಬೇಡೆನುತ ಸಂತೈಸಿದಂ ॥ (36)

ಇಂತೊರೆದ ಪತಿಯ ಬಲವಂತವಂ ನೋಡುತಾ ।
ಕಾಂತೆ ಜಯವಂತನಾಗೆನುತ ಸೇಸೆಯನಿಟ್ಟು ।
ಚಿಂತಿಸುತ ಶುದ್ಧಾಂತಕೈದಲಿತ್ತಲುಂ ವಾಲಿಕ್ರೋಧತಾಮ್ರಾಕ್ಷನಾಗಿ ॥
ಮುಂತಕೈದಿದನು ಪ್ರತ್ಯಾಸನ್ನದಲಿ ಸುಳಯ ।
ವಂತಕನ ಭೈರವನ ಭೀತಿಹೋತ್ರನ ಪರಿಯ ।
ನಾಂತಾರ್ಭಟಿಯಲತುಲ ವೇಗದಿಂದೈಂದು ರವಿತನಯನಿರ್ಪ ಧರೆಗೆ ॥ (37)

ಕಂಡನುದ್ದಂಡ ಬಾಸ್ಕರನಂತೆ ಕಂಗೊಳಪ ।
ಗಂಡುಗಲಿ ಸುಗ್ರೀವನಾರ್ಭಟಿಯ ವಾಲಿಯು ।
ದ್ದಂಡ ಪೌರುಷದಿಂದ ಮೂದಲಿಕೆಯಿಂ ಗಿರಿಯ ಬರಸಿಡಿಲು ಪೊಡೆವಂದದಿ ॥
ಮಂಡೆಯಂ ಕೊಡಪಿ ಕಡುನಿಟ್ಟುರದ ಮುಷ್ಟಿಯಲಿ ।
ಖಂಡಲಾತ್ಮಜ ಪೊಡೆಯೆ ಗನರುತಾದ್ರಾಗ ಖತಿ ।
ಗೊಂಡು ಸುಗ್ರೀವ ಮತ್ತೆರಗಿದಂ ವಾಲಿಯುಂ ತತ್ತರಿಸಿ ಕೆಡೆವಂದದಿ ॥ (38)

ಮೇರುಮಂದರಗಳೇಂ ಕಾಳಾಮೃಗಂಗಳಾ ।
ಕಾರದಿಂ ಧರಿಣಿಯೊಳು ಕಾಮತ್ತ ವಿಕ್ರಮವ ।
ತೋರಲೈತಂದವೆಂಬಂತೋರ್ವರೋರ್ವರಂ ಜಯಿಸುವಾತುರಗಳಿಂದೆ ॥
ಭಾರಣೆಯ ಮರಮರಿದಿ ಪವಕರನಖಗಳಂ ಪ್ರ ।
ಹಾರದಿಂದರೆನಿಮಿಷ ಕಲ್ಪಾವಸಾನದಂ ।
ತಾರುಭಟಿ ಮಸಗೆ ಜೀವಿಗಳಳ್ಕಿ ಕಿಪ್ರದಾಗಿ ಬೆರೆದಿರ್ದುದೇನೆಂಬೆನು ॥ (39)

ಮೂದಲಿಸಿ ಗರ್ಜಿಸಲು ಭೂಧರಗಳೊಡೆದೊಡೆವು ।
ಮೇದಿನಿಗೆ ಕಡೆಯೆ ತೋಳ್ತೊಡೆಯ ಘಾಯಗಳಿಂದ ।
ಮೇದುರದ ತರುಷಂಡಮುನ್ಮೂಲವಾಗುತಿರೆ ಸಿಂಹನಾದಂಗಳಿಂದೆ ॥
ಭೂದಿವಿಗಳೆರಡು ಶಬ್ದಾದ್ವೈತವಾಗಿರಲು ।
ಪಾದಹತಿಯಿಂದ ಕೆಂದೂಳೆದ್ದು ಜಗವನಾ ।
ಚ್ಛಾದಿಸಿತು ವಾಲಿಸುಗ್ರೀವರನ್ಯೋನ್ಯಬಲಪಾಸಟಿಯನಿಡಲೆಂತುಟೊ ॥ (40)

ಪೊಡತಕ್ಕೆ ಪೊಡತ ಪಂಥಕೆ ಪಂಥ ಘಾತಗಳ ।
ಗೊಡನೆ ಘಾತಂ ಕೊಲೆಗೆ ಕೊಲೆ ಮುಷ್ಟಿಗುಂ ಮುಷ್ಟಿ ।
ಜಡಿತಕ್ಕೆ ಜಡಿತ ಮುಳಿಸಿಗೆ ಮುಳಿಸು ಮತ್ತಧಟಿಗಧಟು ಮಾನಕೆ ಮಾನದಿಂ ॥
ಸಿಡಿಲಾರ್ಭಟೆಗಳಿಂದ ತರಣಿಸುತ ಭೂಸುತರ ।
ಗಡಣಕೆಮ್ಮಡಿಯೆನಲ್ ವಾಲಿಸುಗ್ರೀವರೀ ।
ಪೊಡವಿಯೊಳು ಪೊಡೆದಾಡುತಿರ್ದರೋರ್ವರಿಗೋರ್ವರುಪಮೆಯೆಂಬಂತೆ ಕಣಾದಿ ॥ (41)

ಕೆಕ್ಕೆಯೊಳ್ ಬೆಣಗುತಿರಲನಿತರೊಳ್ ವಾಲಿ ಮೇ।
ಲಕ್ಕೆ ಚಿಮ್ಮಿದ ಪದಾಂಗುಟದಿಂದ ಮಂಬರವ।
ಪೊಕ್ಕೆಳದು ತರಣಿಸುತ ಲಾಗುವೇಗದೊಳೊಂದು ವಿಟಪಿಯನು ಪಿಡಿದು ಬಳಿಕ॥
ಗಕ್ಕನಮರೇಂದ್ರತನಯನ ಪೊಡೆಯೆ ಶೋಣಿತವ।
ಕಕ್ಕೆ ಮತ್ತುಕ್ಕಿರುವ ಕರಪದಾಹತಿಗಳಂ।
ಕುಕ್ಕಿರಿದನೇನುಸಾಹಸಿಯೊ ಸುಗ್ರೀವನಂ ಕ್ರೋಧದಿಂ ವಡಿಸುವಂತೆ॥ (42)

ಇಂತು ಕಪಿವೀರರಾಜಿಯೊಳು ಬೆಣಗುತವಿರಲು।
ಚಿಂತಿಸುತ ರಘುವೀರನಂದು ಪೊದೆಯೊತ್ತಿನೊಳು।
ನಿಂತು ನೋಡುತಲಿ ಬೆರಗಾದನೀರ್ವರ ಲಾಗುವೇ ಗಸಾಹಸನ ಕಂಡು॥
ಅಂತಕಾಂತಕರೊ ಕಲ್ಪಾಂತದನಿಲಾನಲರೊ।
ಚಿಂತಿಸಲಶಕ್ಯವೆನುತಿರೆ ನೋಡಿ ಶಿವ ವೀರ।
ಸಂತಸಂತತಿಯೊಳಂತಿವರನೆಂತು ಕಾಣ್ಬೆವೆಳ್ಕುವೆನುತಾಗ ಬೆರಗಾದನು॥ (43)

ಅನಿತರೊಳು ವಾಲಿಗತಿಕೋಪ ಬೆರ್ಚುತ ಬರಲು।
ಕಿನಿಸಿಂದ ತರಣಿಸುತನಂ ಪಿಡಿದು ಭೂತಳದಿ।
ವನಜನಾಳವ ಮದಕರೀಂದ್ರನಂದವಲಿಂ ದೊರಸುತಿರೆ ರಘುವೀರನಾ॥
ಮನಕೆ ತೋರ್ದುದು ಚಿಂತೆ ಕೋದಂಡಮಂ ಪಿಡಿದು।
ಕನಲಿ ಕಿಡಿಗರೆವ ಶರಮಂ ತೊಡಿಸಿ ತನ್ನ ಪದ।
ವನಜಕಿಂಕರನಿಗಪಕಾರಿಯಂ ಗುರಿಗೈದು ತೋರ್ದೆಚ್ಚನಾ ಕ್ಷಣದೊಳು॥ (44)

ಸಂಬದರಿಗೆಡರಡಸಲೀಕ್ಷಿಸುತ ಸ್ಮೈರಣ್ಣೆಯು।
ಕೊಂಬನೆ ರಘೂತ್ತಮಂ ವಿಷ್ಣುಚಕ್ರಪ್ರತಿಮ।
ದಂಬಿನಿಂ ದಂಭಾರಿಸುತನ ತನುಶೈಲಮಂ ಭೇದಿಸಲ್ಕನಿಮಿಷದಿ॥
ಕುಂಭಿನಿಗೆ ಕೆಡೆದನಸುರೇಂದ್ರ ವಿಜಯಪತಾಕ।
ವೆಂಬಂತಮೋಘ ಶರದುಪಹತಿಗೆ ವಾಲಿ ಹಾ।
ಶಂಬರಾಂತಕ ಹರ ನಮಶ್ಶಿವಾಯಯೆನುತ ಕುಗ್ಗಿದಂ ಧರಣಿತಳಕೆ॥ (45)

ಬೆದರಿದನೆ ಬೆಚ್ಚಿದನೆ ಹೃದಯದೊಳ್ ಕಲಿತನದ।
ಮದವನುಡುಗಿಸಿದನೇ ಮಹಾಶರದ ವೇಗಕ್ಕೆ।
ಮದಿದುರಿದನೆ ರಣಭೀಮಸುತ್ರಾಮನಂದನನಂ ವೀರಾಸನವನು ಬಲಿದು॥
ಅದಿರಿದಿಲ್ಲದೆಡಬಲನ ನೋಡಿ ಯೋಧರದೊರ್ವ।
ರಿದಿರೊಳಗೆ ಕಣ್ಗೆಸೆಯದಿರಲು ಕಂಗಳ ಮುಚ್ಚಿ।
ಮದನಾಂತಕನ ಪದಪಯೋಜಮಂ ಧ್ಯಾನಿಸಿದನೇಂ ಕಲಿಗಳಗ್ರಭವನೊ॥ (46)

ರಾಮಬಾಣಾಗ್ನಿಯಿಂ ಬೆಂದುದೊಡಲಾಗ ಸು
ತ್ರಾಮದಯದಿಂದಿತ್ತ ಮಾಲಿಕಾಮಹಿಮೆಯಿಂ।
ದಾ ಮಹಾಬಲಿ ಯಸುಗಳುಳಿದು ಶರಹತಿಯಿಂದ ಕುಗ್ಗಿತಗ್ಗುತಮನಿತರೊಳ್।
ಭ್ರಾಮಕಂಗೊಳುವ ಕರಣಗಳಂದಮೆಡಬಲನ।
ಸೀಮೆಯಿಂ ನೋಡುತಿರೆ ತೋರಿತನ್ನೆಗಂ ಮಣಿ।
ಶ್ಯಾಮರಾಮಾಕೃತಿಯು ಕರಕಲಿತ ಕೋದಂಡಧರ ಸಟೋದ್ದಂಡದಿಂದೆ (47)

ರವಿಯಂತೆ ಸೌಮಿತ್ರಿ ಬಲದಲಿರೆ ಸುಗ್ರೀವ ।
ನವಕಮೆನಲೆಡವಂಕದಲ್ಲಿ ರಾಜಿಸೆ ತಾರ ।
ಪವನಸುತನೀಲನೆಲ್ಲರುಂ ಮುಂದೆ ಕರಗಳಂ ಮುಗಿದು ನುತಿಗೈವುತಿರಲು ।
ಲವಲಿಕೆಯಿಂದೊಂದುಶರವ ಕರದೊಳ್ ತಿರುಪ್ಪ ।
ತವಿರಳಶರಾಸನವನಿತರಕರದೊಳ್ ಪಿಡಿದು ।
ಕುವಲಯದಳಶ್ಯಾಮ ರಾಮ ಗೋಚರಮಾಗೆ ಕಂಡ ಸುರರಾಜಸುತನು ॥ (48)

ಧೃತಶೀಲಮುಖಶರಾಸನದಿಂದ ವೀರ ಸ ।
ನ್ಮತಮೆನಿಪ ಮನುಜಾವತಾರದಚ್ಯುತ ಕಣ್ಗೆ ।
ಕ್ಷಿತಿಯೊಳಂ ಕಂಗೊಳಿಸೆ ಕಾಣುತಸುರೇಂದ್ರಸುತನತುಳಕೋಪಾವೇಶದಿಂ ॥
ಖತಿಗೊಂಡು ನಿಷ್ಠುರದಿ ಧರ್ಮಸಂಹಿತೆಯಿಂದ ।
ಹಿತವಾದ ನುಡಿಗಳಂ ಮೂದಲಿಸಲನುಗೈದ
ಕ್ಷಿತಿಪತಿ ಧನುರ್ವಿದ್ಯಾಪಾರ ದೆಸೆಯಿಂ ಕಲಿತುದಾವುದೆನಗುಸುರೆಂದನು । (49)

ಪೊಂಚಿ ಪೊದೆಗಳ ಮರೆಯ ಪ್ರಾಣಿಗಳ ಕರವಲಾ ।
ಕುಂಚನಂಗೈದು ಕಂಡಪನೆಂಬ ಭೀತಿಯಿಂ ।
ಚಂಚಲಿಪ ನೇತ್ರಗಳನೊಮ್ಮನದಿ ನಿಮಿರಿಸುತಂ ತಗ್ಗಿ ಕುಗ್ಗುತಲಿ ನಡೆದು ॥
ಕೆಂಚಿದೆತ್ತುತ ತನುವ ತ್ರಾಣತ್ರದಿಂ ಬಾಣವಂ ।
ವಂಚನಂಗೈದು ಮೋಸದೊಳಸುಗಳಂ ಕೊಂಬ ।
ವಂಚನಾವಿದ್ಯ ಮತ್ತಾರದೆಸೆಯಿಂ ನಿನಗಮುಪದೇಶಮಾದುದಹಹಾ ॥ (50)

ಕಾಳಗದಿ ಮಾರ್ಮಲೆತ ಕಲಿಗಳೆಡೆಯೊಳು ತನ್ನ ।
ತೋಳ ಬಲುಹಂ ತೋರಿ ಸೀಳಟ್ಟ ಕೀರ್ತಿಯಂ ।
ತಾಳುವದು ಕ್ಷತ್ರಮತ ವಿಮತ್ರಹರಣಂಗೈದು ಶರಣಾಗತರ ಪೊರೆವುದು ।
ಜಾಳುಮತಿವಿಡಿದು ಖೂಳರ ಸಂಗತಿಯ ತಳೆದು ।
ಪಾಳುನೆಲನಂ ಪಿಡಿದು ಪೌರುಷಗಳಂ ತೊರೆದು ।
ನಾಳೀಕದಿಂದೆಚ್ಚ ದೌರ್ಜನ್ಯದಿಂ ಪೆರರ ಚುಚ್ಚುವುದಿದಾವ ಪೆರ್ಚು ॥ (51)

ಪೊಡವಿಪತಿಕುಲ ಸತ್ಯಬಲದಿ ನೀಂ ಕರುಣೆಯಿಂ ।
ಪಡಿಗಡಿಗೆ ಪ್ರಜೆಗಳುಂ ಪೊಗಳುವಂದದಿ ರೂಹ ।
ತೊಡಿಗೆಯಂ ಶೃಂಗರಿಸಿ ಧರ್ಮಿಷ್ಠನೆನಿಪ ಪೆಸರಾಂತು ಭೂತಳದಿ ಚರಿಸಿ ॥
ಪಿಡಿದು ಕರಚಾಪವ ಪರಾಕ್ರಮವ ತೋರ್ಪಡಿಸೆ ।
ಕಡೆಗೆ ಶಾಖಾಮೃಗ ಪರಾಙ್ಮುಖದ ವಧೆಗೈದೆ ।
ನುಡಿ ಪುರಾತನ ನಡೆ ಕಿರಾತನೆಂಬ ಗಾಧೆಗಾದೆ ನೀಂ ಲಕ್ಷ್ಯಮಕಟಾ ॥ (52)

ಪೊರಗೆ ಸಾಧುಗಳ ಚಿಹ್ನೆಯನಾಂತು ಮಾನಸದೊ ।
ಳಿರಿಸಿ ಹಿಂಸಾತತಿಯ ನೋಳ್ಪರಿಗೆ ಸಾಧುತೆಯ ।
ಪೊರಪತಾಕೆಯ ತೋರುತೊಳಗಧರ್ಮಸ್ಥಿತಿಯ ಬೇರೆನಿಸಿ ನಿರ್ವ್ಯಾಜದಿ ।
ಮರೆಯೊಳಡಗೆಲ್ಲರುಂ ತಿನುವ ವಿಷಕೂಪದೊಳ ।
ಗಿರುವಗ್ಗಿಯಂದದಿಂ ಚರಿಪ ಘಾತಕಿಯೆನುತ ।
ಮರೆಯದಾದೆನಾ ರವಿಯ ಕುಲದ ಧಾರ್ಮಿಕನೆಂದು ತಿಳಿದು ಮರುಳಾದೆನಕಟ ॥ (53)

ಜಡೆಗಳನು ಕಟ್ಟಿ ಮರನಾರಸೀರೆಯನುಟ್ಟು ।
ಬಿಡುತ್ತಶನವುಂಬುದಂ ಮುನಿವೇಷಕೆಳವಟ್ಟು ।
ಪೊಡವಿಯೊಳು ಪುಣ್ಯನದನದಿಗಳಂ ಸಂಚರಿಸಿ ಧರ್ಮೋಪದೇಶದಿಂದ ॥
ನಡೆದು ಫಲಮೂಲಾಶನಂಗಳಂ ಸಾತ್ವಿಕದ ।
ನುಡಿಗೊಳಿಸಿ ಮರೆಗೊಂಡು ಕುಟಿಲದಿಂ ಕೋತಿಯಂ ।
ಕೆಡಪಿದ ಮಹಾಬಲ ಪರಾಕ್ರಮಿಯು ನಿನಗಾರು ಸರಿ ಕುಲೋತ್ತುಂಗನಹ ಹಾ॥ (54)

ಸಾಮದಾನಕ್ಷಮಾ ಧರ್ಮಧೃತಿ ವಿಕ್ರಮಂ ।
ಪ್ರೇಮ ಸತ್ಯಂ ದಯಾಚಾರ ಸರ್ವಪ್ರಾಣಿ ।
ಕಾಮಿತಾರ್ಥತೆ ಮುಖ್ಯ ಸದ್ಗುಣಗಳುಂ ಧೊರೆಗಳಂಗೆ ತಾರೆನಿಸಿರ್ಪುವು ॥
ಕಾಮವೃತ್ತರ ಸಿಕ್ಷೆಗೈದಪುದು ಕುಲಧರ್ಮ ।
ಪೀ ಮಹಾಟವಿಯೊಳಹ ಕಪಿಯವಂಚಿಸಿ ಬಡಿವ ।
ನೀ ಮಹತ್ವವ ಗಳಿಸಲನುಗೈದೆ ಪ್ಲವಗವಧೆ ಯಾವ ಧರ್ಮದಿ ಪೇಳ್ವುದು ॥ (55)

ಕಾಮವೃತ್ತಿಯನುಳಿದು ಕ್ರೋಧಂಗಳು ಪಳಿದು ।
ನೇಮದಿಂ ನಯವಿನಯನಿಗ್ರಹಾನುಗ್ರಹಗ ।
ಳಾ ಮಹಾರಾಜಕುಲಧರ್ಮ ಮತ್ತೆಲ್ಲಮಂ ಪರಿಹರಿಸಿ ನಾಮವೊಂದ ॥
ಪ್ರೇಮದಿಂ ಪಿಡಿದು ಯಿಂದ್ರಿಯ ಪಾರವಶ್ಯತೆಯ ।
ಕೋಮಲಿತಹೃದಯದಿಂ ನೃಪನೀತಿಯಂ ತಳೆದು ।
ನೀ ಮಹತ್ಪಾತಕದ ವಿಕ್ರಮವನಾರೊಡನದೆಂತು ಪೇಳ್ವೆ ಸೂಚಿಸು ॥ (56)

ಸೂಚಕ ಕದರ್ಯ ಮಿತ್ರಘ್ನ ಸಂತತ ವೃಥಾ ।
ವಾಚಕಂ ಗೋಘ್ನ ಬ್ರಹ್ಮಘ್ನ ನಾಸ್ತಿಕ ಕೃಪಣ ।
ನೀಚ ಚೋರತ್ವದಿಂ ಪ್ರಾಣಿಗಳ ವಧೆಗೈವ ಪರಿವೇತ್ತ ಗುರುತಲ್ಪಗಾತ॥
ಭೂಚಕ್ರದೊಳು ನಿರಯಗಾಮಿಗಳೆನುತ್ತಿವರ ।
ವಾಚಿಪುವು ಧರ್ಮಗಳು ಜಗದುತ್ಪವಿತ್ರಂ ವಿ ।
ಲೋಚನನ ಗೋತ್ರಸಂಭೂತನಾದಡೆ ನಿನಗೆ ಮತಿಜನಿಸಿತೆಂತಿದಕಟಾ ॥ (57)

ಸಗರಂ ದಿಳೀಪ ರಘು ವಂಬರೀಷಂ ಕುತ್ಸಿ ।
ಮಿಗೆ ಭಗೀರಥನಜಂ ಪಂಕ್ತಿರಥ ಮೊದಲಾದ ।
ಖಗಕುಲೋದ್ಭವ ನೃಪರು ಧರ್ಮಸ್ವರೂಪಿಗಳು ಭೂತಹಿತಪರರೆನುತ್ತ ॥
ಜಗತಿಯೊಳು ಸಾಧುಗಳು ಪಾಡಿ ಪೊಗಳುತ ಸರ್ವ ।
ರಗಣಿತಗುಣಗಳಂ ಸತ್ಕುಲದಿ ನೀಂ ಧೀರ ।
ನೊಗೆದು ಕಪಿಯಂ ಗೆಲಿದು ವಂಶಾನುಚರಿತೆಯಂ ಪಾಲನಂಗೈದೆಯಕಟ ॥ (58)

ಪುಲಿ ಗಜಂ ಹರಿಣ ಛಾಗಾದಿ ಚರ್ಮಂಗಳ ।
ನ್ನೊಲಿದು ಧರಿಸುವುದೊಂದು ವ್ರತಗಳಲಿ ಮತ್ತಮರಿ ।
ಗೊಲಿದು ಕ್ಷತ್ರಿಯರವಂ ತರಿದು ತಂದಿರ್ಪುದಿದು ಧರ್ಮದೊಳಗೊರೆದಿರ್ಪುದು ॥
ಪಲವು ಶಾಸ್ತ್ರಂಗಳಂ ಕಲಿತಿರ್ಪ ನೃಪನೀತಿ ।
ಗಳಲಾವ ತಾಣದೊಳಗುಸುರಿರ್ಪುದೈ ಕಪಿಯು ।
ಕೊಲೆಯು ತ್ವದ್ಧಾರಣೆಯು ಪೇಳೆನಗೆ ಸಂಶಯಂ ಪೋಪಂತೆ ಮುದವನಾಂತು ॥ (59)

ಶಶಕ ಶಲ್ಯಕ ಕೂರ್ಮ ಗೋಧ ಶ್ವಾವಿಟ್ಟೆಂಬ ।
ಪೆಸರಿಂತಯ್ದುಮೃಗಗಳ ಪೂರ್ವರರಸುಗಳು ।
ರಸೆಯಲುಣ್ಣಲ್ಪೇಳ್ದುಮುಳಿದ ಫಲಭಕ್ಷಣೆಯು ಪಾತಿತ್ಯಕರಮೆನಿಪುದು ॥
ಪೊಸಶಾಸ್ತ್ರವೀವುದಿದ ನಾವು ಪಂಕ್ತಿಯ ಕೊನೆಯೊ ।
ಳೆಸೆದಿಹುದು ಕಪಿಮಾಂಸಭಕ್ಷಣಾವಿಧಿಯೆನುತ ।
ಮುಸುಂಡಿದೊಡೆ ಧರ್ಮವಚನವ ಕೇಳಿ ಸುಖಿಯಪ್ಪೆ ನೃಪರ ಮಸ್ತಕದ ಮಣಿಯೆ ॥

ಭೂತಳದೊಳುಳ್ಳಖಿಳಧರ್ಮಶಾಸ್ತ್ರವ ಗಳಪಿ ।
ತಾತ ದಶರಥನಾ ಮಹೀಪತಿಯ ಗೋತ್ರದೊಳು ।
ನೀತಿತಪ್ಪಿದರುದಿಸರ್ಕೈಸೆ ನೀನೆಂತಲ್ಲಿ ಜನಿಸಿದೆ ಶುಭಾಂಶೆಯೊಳಗೆ ।
ಪಾತಕಿ ಜಗತ್ತ್ರಿಳಿವುದೆಂತು ನೀನರಸುತನ ।
ಜಾತಿಯನ್ನನುಕರಿಸಿ ಸಾಧು ಸಜ್ಜನರ ಕುಲ ।
ಭೂತಿಯಂತಿಹುದೆಂತು ಪೇಳದಿನೊಳು ನಿಂತು ಭಯವಿಲ್ಲ ವೈಸೆಯಿನಿತು ॥ (61)

ಕೆಡೆದು ಭೂತಳಕೆ ಪಣನಂತೆ ಧರ್ಮಶ್ರವಣ ।
ಪಿಡಿವನೆಂದರಿಯದಿರು ರಣಭೂಮಿಯಲಿ ಕಂಡ ।
ರೊಡನೆ ಕೈಗಾಣ ತಿಳಿಪ್ರವರ್ತಿಪರ್ಗೆ ಚರಾಚರದಂತುಜಾಲಂಗಳು ॥
ಸೂಡವಿಯೊಳಗೋರ್ವನಿದಿರಾಂತು ಜೀವದೊಳುಳವು ।
ಕಡೆನಾದಪನೆ ಗಿಡಮರೆಪಿಡಿದು ಶರದಿಂದ ।
ಕೆಡಪಿದೆ ಮಹಾಬಲಿ ತಪೋನಿಷ್ಠನೆಂದಾನು ಮರುಳಾಗಿ ಪೋದೆನಕಟಾ ॥ (62)

ತಿಳಿಯದಾದೆಯೆನ್ನಯ ಶೌರ್ಯಧೈರ್ಯತ್ರಯ ।
ನೆಲನಣಗಿಯನ್ನಿಮಿಷದೊಳಗೆ ತಂದಿತ್ತು ದಶ ।
ಗಳನ ಪಿಡಿತಂದು ಬಾದಾಕ್ರಾಂತನಂ ಮಾಳ್ಪನೊಮ್ಮೆ ಸೂಚಿಸಿದರೆನಗೆ ॥
ಖಳನಲ್ಪಬಲ ಸೂರ್ಯತನಯ ನಿನಗೋಸುಗಂ ।
ಕಳವಿಂದಮೆನ್ನಳಿದು ದುಷ್ಕೀರ್ತಿಯಂ ತಳೆದು ।
ಫಲವವೇನುಂಬೆಯಕಟಕಟ ಖದ್ಯೋತಕುಲದುದಿತ ಖದ್ಯೋತ ನೀನು ॥ (63)

ಕೊಳುಗುಳಕೆ ಬರುವ ಸಮಯದಿ ತಾರೆಯೆನ್ನ ಪದ ।
ಗಳ ಪಿಡಿದು ಸುಗ್ರೀವನಿಗೆ ದಯದಿ ನೀನಿತ್ತ ।
ಬಲವಚನಗಳನೆಲ್ಲ ಬಿತ್ತರಿಸಿ ಪೇಳಿದಳ್ ಕೇಳ್ದಾನು ನಸುನಗುತಲಿ ॥
ನಳಿನಮುಖಿ ನೀಂ ಬಾಲೆ ತಿಳಿಯದವಲೆ ಚಾಪಲ್ಯ ।
ದಳಿದೆನ್ನ ಬೆದರಿಸುವೆ ಸರಸಿಜಾಸನನೊಲಿದು ।
ಇಳೆಯ ರಕ್ಷಿಸ ಬಂದ ಪರಬೊಮ್ಮ ಶ್ರೀರಾಮನೆಂದರಿಯದಾದೆ ನಕಟ ॥ (64)

ಗೀರ್ವಾಣವಂದಿತಪದಾಬ್ಜ ನೀ ಜಗತಿಯೊಳು ।
ಸರ್ವರಂತರ್ಯಾಮಿ ಯತಿ ದಯಾಪರನೆಂತ ।
ಗೊರ್ವರಮಿತ್ರರ್ ಹಿತವರೆಂಬ ಭೇದವುಮಿಲ್ಲಯೆನುತುತ್ತರವನೀವುತ ।
ನಿರ್ವಾಣಪತಿ ನಿನ್ನ ನಿಟ್ಟಿಸಲ್ಬಂದುವಕ ।
ಪೂರ್ವಸಾಹಸವ ಕಂಡೆನು ತಿಳಿಯದೈದಿದು ।
ಗರ್ವದಿಂ ಮಡಿದಾತನಲ್ಲಿ ನಿಜಬುದ್ಧಿಯಿಂದಳಿದೆ ಕೇಳೆನ್ನ ಸೊಲ್ಲ ॥ (65)

ಕಾಲಕವರ್ಗಂಗಳಂ ಕಳೆದು ಬದುಕುವರುಂಟೆ ।
ಶೀಲಸದ್ಗುಣ ದಯಾಪರ ನಿನಗೆ ದೌರ್ಜನ್ಯ ।
ಜಾಲವೆಂಬುದದುಂಟೆ ಕಪಿ ಚಂಚಲತೆಯಿಂದವೀ ಶರದ ಬಾಧೆವಿಡಿದು ।
ಬಾಲಿಶದ ನಿಷ್ಠುರದ ನುಡಿಗಳಿಂದಾಡಿದುದ ।
ಕೇಳಿಸದೆ ಚಿತ್ತದೊಳ್ ಮರೆವುದೆಂದೊರೆದಾಗ ।
ವಾಲಿ ನಿಜಮಾರ್ಗಮಾರ್ಗಣಪನರಸುತಮಿರ್ದ ತನ್ನೊಳಗೆ ಕಣ್ಣಾಗಿಯುತ ॥
ಭೀಮ ವಿಕ್ರಮ ಮಹಾದಾಮಹತ್ತರ ಕೀರ್ತಿ ।
ರಾಮ ಸುತ್ರಾಮ ಸುತನತಿಕ್ರೂರತರದಿಂದ ।
ಮಾ ಮಹಾನಿಷ್ಠುರದಿ ನುಡಿದ ನುಡಿಗಳನೆಲ್ಲ ಚೆನ್ನಾಗಿ ಲಾಲಿಸುತ್ತಲಿ ॥
ರಾಮಪುರದರಸ ಕಪಿಯರಸಗಮಿತಸುಧರ್ಮ ।
ಸೀಮೆಯಂ ಬಿತ್ತರಿಸಿ ಪೇಳ್ದನೆಡಬಲದೊಳಗೆ ।
ಸೌಮಿತ್ರಿ ಸುಗ್ರೀವ ಪವನಜಾದಿಗಳೊಲಿದು ಪಾಡಿ ಪೊಗಳುವ ತೆರದೊಳು ॥ (67)

ಸಂಧಿ 6 ಕ್ಕಂ ಪದ 265 ॥

---

## ಏಳನೆಯ ಸಂಧಿ

ಸೂಚನೆ : ಮಾಡಿದಪರಾಧಮಂ ಮನ್ನಿಸುವೆ ನೆಂಬುದಂ ।
ರೂಢಿಜನರರಿವಂತೆ ರಘುವೀರ ಕೃಪೆಯಿಂದ ।
ಕೋಡಗದ ದೊರೆಗೆ ಕೈಗೈದ ಪದವಿಯ ನಿತ್ತ ನಿರ್ಜರಕವಂಬ ನಲಿಯೆ ॥

ಕೇಳು ಪಾರ್ವತಿ ವಾಲಿ ಬಹುವಿಧದ ನಿಷ್ಠುರದಿ ।
ಹೇಳನಂಗೈದ ಪರಿಯಂ ಕಂಡು ರಘುಪತಿಯು ।
ಹೇಳದಂ ಧರ್ಮಾರ್ಥಕಲಿತವಚನಂಗಳಂ ಸಜ್ಜನರು ಹರುಷಿಪಂತೆ ॥
ಕೇಳು ಕಪಿರಾಜ ದುರ್ನೀತಿಯಂ ಕೋಪಮಂ ।
ತಾಳ ಶ್ರಮಗೊಂಡರವರಿಂದೇನು ಫಲವೈ ಕೃ ।
ಪಾಳುವೆನಿಸುತ ಸೂಕ್ಷ್ಮಮತಿಯಿಂದ ತಿಳಿದಾಡು ಮಗುಳುತ್ತರಕ್ರಮವನು ॥ (1)
ಚತುರಬ್ಧಿಪರಿಯಂತಮೆಸೆವ ಭೂತಳದಾಧಿ ।
ಪತಿಗಳಿಕ್ಷ್ವಾಕುವಂಶಜರಖಿಳಜಂತುಗಳ ।
ಹಿತನಿಗ್ರಹಾದಿಗಳನೆಸಗಿ ಪಾಪವನೆರಡು ಧರ್ಮರಕ್ಷಣೆ ಗೈಯುವ ।
ಪತಿಗಳಾ ಸಿಂಹಾಸನವನಾಳ್ವ ಭರತ ಭೂ ।
ಸತಿಯರಸರತಿ ದಯಾಪರ ಧರ್ಮಶೀಲ ಸ ।
ಮ್ಮತರೆಂಬುದಂ ಕಂಡು ಕೇಳದೆ ನೀಮುನ್ನಮಖಿಳ ಭೂದಿವಿಜರಿರಿದೆ ॥ (2)
ಆ ಮಹೀಪಾಲನವನೀಪಾಲನಂಗೈವ ।
ನೇಮದಿಂ ದಖಿಲಧರ್ಮವ ಪೊರೆದು ಧರೆಗೆ ಸು ।
ತ್ರಾಮನಂದದಿ ಪ್ರಜಾಹಿತವ ಬಯಸುತಮಿರ್ಪ ಪರದೇವತಾರೂಪದಿ ।
ಸೋಮನಂತಾನಂದಕರ ಶತ್ರುವಿಜಯ ರಣ ।
ಭೀಮನಾಜ್ಞೆಯೊಳಖಿಳ ಧರ್ಮಪೋಷಣೆಗೈಯ ।
ಲೀ ಮಹಿಯ ಚರಿಪರಸ್ಮತ್ಸದೃಶದರಸುಗಳನೇಕರಪ್ಪಣೆಯಿಂದಲಿ ॥ (3)

ತಿಳಿದು ಬಿತ್ತರದ ತೊಳಲ ಪಳಯದೆ ಕಪಿತ್ವಮಂ ।
ತಳೆದು ಸನ್ಮಾರ್ಗಮಂ ಕೈಕೊಳದೆ ದೌರ್ಜನ್ಯ ।
ಕಳೆಯಂ ಕಡುಂಧರೊಮ್ಮನದಿ ಕೊಪವ ಹೊಕ್ಕ ತೆರದೊಳಗಮರ್ಯಾದೆಯು ॥
ನಿಳಯನಾದೊಡೆ ಪ್ರಾಣಮುಳವ್ರದೆಂತರಸುಗಳು ।
ಸುಳದಾಡುವೆಡೆಯುಲೀಕ್ಷಿಸಿ ಸೈರಿಸುವರೆಂತು ।
ತಿಳಿ ಧರ್ಮಮತವನೆಂದೊರೆದು ರಘುನಾಯಕಂ ವಾಲಿಯೊಡನೀ ಪರಿಯುಲಿ ॥(4)

ಪಿತ್ರಾತನೋರ್ವನಗ್ರಜನೊರ್ವ ವಿದ್ಯಗಳ ।
ತೆತ್ತಾತನೋರ್ವರೀ ಮೂವರುಂ ಗುರುಗಳಿಂ ।
ಪುತ್ರಮುದ ಮಿತ್ರ ತನುಜನಂತೇ ವಾಸಿಗಳ್ ತನೂಭವರೆಂಬರು ॥
ಮತ್ತೆ ಸೊಸೆ ಸೋದರಿಯು ಮಗಳು ಮೂವರು ಸಮ ಮೆ ।
ನುತ್ತ ಬೆಳ್ಪ ಧರ್ಮವನುಸರಣೆಗೈಯದಿನಿತ ।
ಗುತ್ತಮೋತ್ತಮವೃದ್ಧಿ ಸಮನಿಸದೆ ಮರವಕ್ಕೆ ನಿನಗೊದಗುವದೆ ಕಪೀಶ । (5)

ಹಿಂದುಮುಂದರಿಯದಿಂದ್ರಿಯಪಾರವಶ್ಯಮಂ ।
ಪೊಂದಿಯನುಜಾಂಗನಾರತಿಗೆಳಸಿ ದುರ್ಬುದ್ಧಿ ।
ಯಿಂದ ಧರ್ಮತ್ಯಾಗಗೈದೆ ಪರದಾರಾಭಿರತಿಯಿಂದ ಕೆಡೆದವರಾರು ।
ಛಂದದಿಂ ನಿನೆಸಗಿದಪರಾಧವನಾರೂಪ ।
ಸುಂದರ ಫಲಪ್ರಸರವಾದನನುಭವಿಸದಾ ।
ರೆಂದರೇನಹುದು ಮಾಡಿದ ಪಾಪ ಕೊಂದಲಿನ್ನಾರಿಂದನೀನಪ್ಪುದು ॥ (6)

ಪಾಪವಿದೇ ಡೆಯ ದಂಡನಗೈಯುವದೆ ಧರ್ಮ ।
ಲೋಪದಿಂ ಬಿಟ್ಟಿಸದೆ ಜಾತಿವರ್ಣಾಶ್ರಮ ವ ।
ಗೋಪಾಯನಂಗೈಯುವತಿಮಾತ್ರತೆಯೊಳಾತ್ರರಕ್ಷಣಂಗೈಯುದಿರುವ ॥
ಭೂಪಾಲನಿಗೆ ನಿರಯಮೆಂದು ಶ್ರೀಮನ್ಮನು ನಿ ।
ರೂಪಗೈದರ್ಥವಂ ಶಿರಸಾವಹಿಸಿ ಬುವನ ।
ದೀಪರಘುವಂಶನೃಪ ಕಳುಹಿರುವ ಭುವನಮಂ ಪೊರೆಯೆ ಮತ್ಸದೃಶಜನರ ॥ (7)

ರಾಜಾಜ್ಞೆ ಬಿಡಿಪಾತ್ರ ನಿಖಿಳಪಾತ್ರಿಕೆಗಳ ಸ ।
ಮಾಜಮಂ ಸಂಹರಿಸಿ ಗೋವಿಪ್ರಮೃಗಪಕ್ಷಿ ।
ರಾಜಿಯಂ ಪೊರೆವಬೆನ್ನ ಧರ್ಮಕಾಣೆಯವನುಂ ಕಂಡರಿವಿರೆ ತೊಪ್ಪಗೊಳಿವ್ರ ॥(8)
ವ್ಯಾಜವಾಗುರಿವ ಶಾಸ್ತ್ರಪ್ರವೃತ್ತಿಯು ತಿಳಿದು ಕಪಿ ।
ರಾಜ ಚಿತ್ತಾತಂಕವಂ ಪಳಿ ಭವದ್ವ್ಯಥಾ ।
ಬೀಜ ಮಗುಳೊಂದಿರ್ಪದೊರೆವೆನಾಲಿಸು ಪ್ಲವಗ ಚಂಚಲದ ಮನವನುಳಿದು ॥

ಅಕಲಂಕಭಾಸ್ಕರಾತ್ಮಜಗಗ್ನಿಸಾಕ್ಷಿಯೊಳು ।
ಸಕಲಕಪಿಯೂಥಪರ ಮುಂಗಡೆಯುಲಭಯಮಂ ।
ಪ್ರಕಟಮೆನಲಿತ್ತೆನೆಮಗಾತ ಸೌಮಿತ್ರಿಗಿಂದಧಿಕ ಸಂದೆಗವಿಲ್ಲವು ॥
ಸಕಲಸಂಪದವಿಪದವೆಮಗವಶ್ಯಕವಾಗೆ ।
ಯುಕುತಿತಂತ್ರಂಗಳಿಂದಾದರೆಯು ನಿಗ್ರಹಿಸಿ ।
ನಿಖಿಲಸಾಮ್ರಾಜ್ಯಮಂ ರವಿಸುತಗೆ ಕೊಡಲಾದುದಿದು ಮುಖ್ಯಮತವೆಂದರಿ ॥ (9)

ರವಿಶಶಿಗಳೆಡೆಯಾಟ ನಿಲಲಿ ನೀರಧಿ ಬಂದು ।
ಕುವಲಯಾದಿ ಪಸರಿಸಲಿ ಮೇರುಮಂದರಗಳ್ಗಂ ।
ನವಕಮೆನೆ ಚಲಿಸಲನುದಿನವಿ ರಘುವಂಶಭವನೃಪತಿಗಳು ಕೊಟ್ಟನುಡಿಯ ।
ಅವಿರಳದ ಸಾಮ್ರಾಜ್ಯಪದವಿ ಕೈಸಾರದಿರೆ ।
ಭುವಿಯೊಳಾರೆನಿಸುವರು ರಾಜ್ಯಪ್ರದಂಗೈದು ।
ರವಿಸುತನ ಪೊರವೆವೆಂದುದಕೆ ನಿನ್ನಂ ತರಿದು ಬಿಸುಟೆವಾವು ಸತ್ಯಾಳಿದು ॥ (10)

ಆರಾದರೇನಯ್ಯ ಮಾಡಿದಪಕಾರದನು ।
ವಾರದಂಡತೆಗೈಯದಿರೆ ದೋಷ ಪೋದಪುದೆ ।
ವಿಾರಲಳವೇ ಧರ್ಮವಚನಗಳನಿಕ್ಷ್ವಾಕುಭವರತುಳಧರ್ಮಿಗಳಲೇ ॥
ಧಾರಿಣೀಪತಿಗಳಲಿ ಕೆಲಕೆಲರು ಮನುಜಕೃತ ।
ತೋರಪಾತಕಕೆ ಪ್ರಾಯಶ್ಚಿತ್ತಮೆಸಗೆ ಕಾ ।
ಳೋರಗವು ಕಚ್ಚಿದುದ ಕಸದಿಂದ ತೊಡೆದರದು ಪೊದಪ್ಪುದೆ ಮತಿವಿಕಳತೆ ॥ (11)

ವಿಧಿಯಿಂದ ಪಾತಕದ ದಂಡನಂಗೈದಾವು ।
ಬಾಧಜನರ ಮೆಚ್ಚಿನಿಂ ನಡೆದವೆವು ದುರ್ನೀತಿ ।
ಯುದಿಸದೆಮ್ಮರಸುಗಳ ರಾಷ್ಟ್ರದೊಳಗೆಂದಿಗುಂ ತಿಳಿಮ ಯೋಚಿಸದೆ ಬರಿದೆ ॥
ಒದರಿದರೆ ಕಪಿ ನಿನ್ನ ಮತಿಗದೇನೆಂಬೆನೆವು ।
ಗುದಿಸದ್ಯೆ ರೋಷಹರ್ಷಗಳು ನಿನ್ನಯ ನುಡಿಯ ।
ಪವನಿಂದವೆನುತೊರೆದು ಮಗುಳೊಂದು ನೀತಿಯಂ ಪೇಳ್ದ ರಘುನಾಥನೊಲಿದು ॥

ನೆಲದಾಣ್ಮರಿಗೆ ಧರ್ಮ ಮೃಗಯಾಟನಂ ಪೋಗೆ ।
ಬಲೆಜಿಗುರುಶರಮಿಂಟೆಗಳಲಿ ಮೃಗಪಕ್ಷಿಗಳ ।
ನೆಲದಿ ಕೆಡಪುವದು ಸನ್ಮುಖ ಪರಾನ್ಮುಖ ಮತ್ತ ನಿದ್ರಾಪ್ರಮತ್ತವೆಂದು ॥
ಪಲವು ವಿಧಗಳ ನೆಣಿಸಿ ಬಿಡುವರೆ ಮಹೀಪತಿಗ ।
ಳಿಲೆ ಮರುಳೆ ಶಾಖಾಮೃಗಂ ಪಾತಕಿಯು ನಿನ್ನ ।
ಕೊಲಲವಶ್ಯಕಮಾದುದಾವ ವಿಧದಿಂದಾರ್ಗೆ ಧರ್ಮವಚನಾನುಮತದೆ ॥ (13)

ಬರಿದೆ ರೋಷಕೆ ಸಿಲ್ಕಿ ನರನಾಥರಂ ಜರಿದು ।
ಪರಮಪಾತಕವ ಸಂಪಾದಿಸಲದೇಕೆ ನೀ ।
ನರಿ ಧರ್ಮಸಂಗತಿಯ ತಿಳದಾತ್ಮರಕ್ಷಣೆಯನೆಸಗು ಕಪಿತ್ವಯನು ಬಿಟ್ಟು ॥
ಹರಿಯೆ ಮನುಜಾಕಾರದಿಂದ ಭೂವಿಾತಳದೊ ।
ಳರಸೆನಿಸಿ ಪಾಪಪುಣ್ಯಗಳ ತಿಳಿದವ ಬೆರಸ ।
ದುರೆ ಧರ್ಮರೂಪದಿಂ ಚರಿಪನೆಂದರಿತುಕೋ ದೋಷ ಬಂದಪುದನರಿತು ॥ (14)

ಪರಮಪುರುಷನ ವಚನಸರಣಿಯಿಂ ಮನವನಾ ।
ವರಿಸಿರ್ದ ಕಳ್ತಲೆಯ ಜರಿದು ನಿರ್ಮಲತೆಯಿಂ ।
ಬೆರೆಯಲೀ ಧರ್ಮಗಳು ಕರತಳಾಮಳಕಮೆನೆ ಕಣ್ಗೆಸೆಯ ನೋಡಿನೋಡಿ ॥
ಅರಿಶಂಖಲಾಂಛನ ಮಹೇಶ ಸರಸಿಜವಾಸ ।
ನಿರುಗೆಯಿ ಮೂರ್ತಿ ಯೆಂದರಿತು ಸಂತಸದಿಂದ ।
ಹರಿಕುಲೋತ್ತಂಸನಿಂತೆಂದನಾನಂದದಿಂ ಚಿತ್ತನೈರ್ಮಲ್ಯದಿಂದೆ ॥ (15)

ರಮೆಯರಸನೆಂದು ರಾಜೀವಲೋಚನನೆಂದು ।
ದ್ಯುಮಣಿಶತಸಂಕಾಶ ದೀನಪೋಷಣನೆಂದು ।
ಕಮಲಭವರುದ್ರಾದಿಗಳ ಸೃಜಿಸಿ ಪಾಲಿಸುವ ಮುನಿಕುಲೋತ್ತಂಸನೆಂದು ॥
ವಿಮಲವಿಜ್ಞಾನಂದನಿಧಿಯೆಂದು ತ್ರಿಗುಣ ಸಂ ।
ಕ್ರಮವಿಲ್ಲದಪ್ರಮೇಯನಾದಿವಸ್ತುವೆನುತ್ತ ।
ತಮಸಃಪರನೆನುತ್ತ ತಿಳದಿರ್ದ ರಘುನಾಥ ನೀಂ ಜಗನ್ನಾಥನೆನುತ ॥ (16)

ನಸುನಗೆಯೊಳೊಗೆದ ಮಾಯಾವಿಲಾಸದಿ ಬೊಮ್ಮ ।
ಸಸಿಮೌಳಿ ಬಿಸಜಾಕ್ಷರುದಿಸಿ ನಾನಾಪರಿಯ ।
ಲೆಸೆವಂಡಗಳ ಸೃಜಿಸಿ ಜೀವರಾಸಿಗಳನ್ನು ಪುತ್ಥಳಿಯ ಕುಣಿಸುವಂತೆ ॥
ಹಸವಲ್ಲದಜ್ಞಾನವಸಗೈದರಾ ಬಲೆಯು ।
ಮುಸುಕಿತಾ ಮನಕೂಪದೊಳ್ ಕೆಡೆದು ಕಾಣದಿಹ ।
ಪಶುಗಳಂತರಿವರೀ ಚಿನ್ಮಾತ್ರವಿಗ್ರಹವ ಶರಣಜನ ಕಲ್ಪತರುವ ॥ (17)

ಜಗದುದ್ಧರಣೆಗೈಯಲಘಹರನೆ ಮಾನುಷರ ।
ಬಗೆಯಿಂದ ಸಂಚರಿಪಖಂಡತೇಜೋರಾಶಿ ।
ನಿಗಮಮಸ್ತಕಮಣಿಯೆನುತ್ತನು ತಿಳದಿರ್ದನಿದಕೆ ಸಂದೆಗಮಿಲ್ಲವು ॥
ಜಗತ್ರಿಯೊಳಗಾರಾದೊಡೆಯು ಚರಮಸಮಯದೊಳು ।
ಮುಗುಧತೆಯನಾಂತ ಕರಣಂಗಳಿಂ ವಿಜ್ಞಾನ ।
ಮೊಗೆಯದೆಂಬುದು ಸಿದ್ಧವಾಗಿರ್ದುದಂ ಮೋಹವಶಮಪ್ಪರಖಿಲರರಸ ॥ (18)

ಶರಹತಿಯೊಳೀಸೊಂದನರಿಯದಜ್ಞಾನದಿಂ ।
ನರನೆಂದು ತಿಳದು ವಾನರಬುದ್ಧಿವಿಡಿದಾಗ ।
ಮರುಳುನುಡಿಗಳ ನುಡಿದ ಪರಿಯನೆಣಿಸದೆ ದಯಾಪರನೆಂಬ ಬಿರುದ ಮರೆದು ॥
ಪರಿಪರಿಯ ಧರ್ಮಗಳನೊರೆದೊಡೆಯು ಕಳ್ತಲೆಯು ।
ಪರಿಹರಿಸಿ ಪರಮಪಾವನಮೂರ್ತಿಯಿಂ ತೋರಿ ।
ಪೊರೆದಂತರಾತ್ಮ ಮುನಿಮಾನಸಸರೋಜಾತವಿಕಚಕರದ್ವಾದಶಾತ್ಮ ॥ (19)

ಬಿಗಿದು ಯೋಗದೊಳು ಪ್ರತ್ಯಾಹಾರಜಾಲಮಂ ।
ಸರಭಸದಲೆರಗುವ ಸಮಾಧಿಯೊಳು ಮೌನಿಜನ ।
ರರಿಯದ ಮಹಸ್ಸೈದಿ ನೆಲದಿ ಪುರುಷಾಕಾರವೆತ್ತು ಪರಿಪೂರ್ಣದಯದಿ ॥
ತರುಚರಂಗಜ್ಞಾನ ದುರುಳಿಗೆ ಮಹಾಮೋಹ ।
ತೆರನ ಧರ್ಮಿಗೆ ಪಾಪಿನಾಪಿಗೆ ಪುರಸ್ಫೂರ್ತಿ ।
ಕರನಾದೆ ಪೂರ್ವಪುಣ್ಯಪ್ರಭಾವದಿ ವಿಧಿಭವಾದಿಗಳಗುಂಟೆ ಬಳಕ ॥ (20)

ಕಾಣದೆಸಗಿದ ಪಾಪರಾಸಿ ಕೋಪದಿ ಬಂದು ।
ಗೋಣಪಿಡಿದೊತ್ತಿ ಸಂಕಟಗೊಳಿಸಿ ನಿಲಗೊಡದೆ ।
ಪ್ರಾಣಪ್ರಯಾಣಸಮಯಕೆ ನಿನ್ನ ಗುಣನಾಮವೊಮ್ಮೆ ನಾಲಿಗೆಗೊದಗಲು ॥
ಕೇಣಮಿಲ್ಲದ ದುಷ್ಕೃತಂಗಳೆಲ್ಲಂ ಪೋಗಿ ।
ಕ್ಷೋಣಿಗತಿಶಯದ ಯೋಗೀಂದ್ರರಿಂಗಪ್ಪ ನಿ
ರ್ವಾಣಮಹುದೆನೆ ಕಂಗಳಿಂದ ದಿಟ್ಟಿಸುವೆನ್ನ ಭಾಗ್ಯದೇಳಗೆಯದೆಂತೊ ॥ (21)

ನುತಿಸಬಲ್ಲೆನೆ ಭವದ್ಗುಣವ ತಿರ್ಯಗ್ಯೋನಿ ।
ಗತ ನೀಚನಲ್ಪಮತಿಯೆನ್ನ ಗುಣದೋಷಗಳು ।
ಮತಿಯೆನುತ ಬಿನ್ನವಿಪೆನೊಂದನೆಣಿಸದೆ ಮರೆದು ಕರುಣಾಳುತನವ ಮೆರೆದು ॥
ಪತಿತಪಾವನನೆಂಬ ಬಿರುದ ನೀ ನೆನೆನೆನೆದು ।
ಕ್ಷಿತಿಯು ಜನರರಿವಂತೆ ವಿಜ್ಞಾಪಿಸಿದ ಪರಿಯು ।
ಪತಿಕರಿಸಿ ಪಾವನಾಂಘ್ರಿಯು ಬೆರಸಿ ಕೊಳ್ಳವೇಳ್ಕುಮೆನುತ ಕರಗಳ ಮುಗಿದನು ॥

ಶರದುರುಬೆಯಿಂದ ತನುತಾಪ ಬೆರ್ಚುತ ಪ್ರಾಣ ।
ತರಹರಿಸದಿದೆ ಜೀಯ ಪರಿಹರಂಗೈದು ತವ ।
ಕರದಿಂದ ಮೈದಡಹಿ ಕಾಯಬೇಕೆಂದೆರಗಿ ಕರಗಳ ಮುಗಿದು ಮಗುಳೆ ॥
ಇರುವೆ ಮೊದಲಾಗೆ ಕಡೆಯಾದ ಜೀವರಹೃದಯ ।
ದಿರವಾದ ದೇವ ಪ್ರಾಣಿಗಳ ಸಂಬಂಧ ಗ ।
ಳರಿಕೆಯುಂಟಾನೇನ ಬಿನ್ನವಿಪೆನೆಂದಮರಪತಿಯಣುಗ ಮಗುಳೆಂದನು ॥ (23)

ಮಾನಿನಿ ಮಹಾರಾಜ್ಯ ವೈಭವಗಳಂ ಗಣಿಸೆ ।
ಸೂನುವತಿಬಲ ತರಳನಂಗದನ ಕೈವಿಡಿದು ।
ಮಾನದಿಂ ಪಾಲಿಸಲುವೇಳ್ಕುನುತ ಭಿನ್ನವಿಸಲೆಂದಾಸೆಯೊಂದಿರ್ದುದು ॥
ನೀನಖಿಳಜೀವನಾಧಾರ ನೆಂದರಿತ ಬಳಿ ।
ಕೇನ ವಿಜ್ಞಾಪನಂಗೈವುದಿರ್ಪುದೆನುತ್ತ ।
ಮಾನನಿಧಿ ಮಾಕುಳುವಂ ಕೊಡಹಿ ಶರದುರುಬೆಯಿಂ ಕಂಗಳಂ ಮುಗಿದಿರ್ದನು ॥

ಶರಣಾಗತರ ದೈನ್ಯಭರವನಪಹರಗೈವ ।
ಕರುಣಮೆಂತುಟೊ ರಾಮಚಂದ್ರ ಕಪಿದೀನತೆಗೆ ।
ಮರುಗಿ ತ್ವರಿತದೊಳೈದಿ ಶರವನುಂ ಕಡೆಗೊಳಿಸಿ ಕರದಿಂದ ಮೈದಡಹುತ ॥
ತರಳನಂಗದನ ನೀಂ ಚಿಂತಿಸದೆ ಶೋಕವಂ ।
ಪರಿದಖಂಡಾನಂದಭಗಿತ ನಪ್ಪುದೆನುತ್ತ ।
ಮೊರೆದೆರರೆನಿಮಿಷದೊಳ್ ಕಪಿ ಶರೀರವನುಳಿದು ಸುರಪನೊಳ್ ಬೆರೆದನೊಲಿದು ॥ (25)

ರಾಮಚಂದ್ರನ ಕೃಪಾರಸವ ನಿಟ್ಟಿಸಿ ಸುರ ।
ಸ್ತೋಮಮಚ್ಚರಿಗೊಂಡು ನುತಿಸುತಿರೆ ಗಿರಿಜಾತೆ ।
ಸೋಮಶೇಖರನಂಘ್ರಿಗೆರಗಿ ಬಿನ್ನವಿಸಿದಳ್ ದೇವೇಶ ಚಿತ್ರಕಿನಿತು ॥
ತಾಮಸಂ ತೋರುತಿದೆ ಸರ್ವಜ್ಞ ಸರ್ವೇಶ ।
ಕಾಮಿತಪ್ರದ ಕರುಣಿ ಸಮವಿಷಮರಹಿತ ಶುಭ ।
ನಾಮ ಮರೆಗೊಂಡದೇಂ ಕಾರಣಂ ಕಪಿವರನ ಕೊಲೆಗೊಡಂಬಟ್ಟನೆನುತ ॥ (26)

ಅನುಮಾನವೊಂದೆನ್ನ ಮನವ ನಂಡಲೆವುತಿದೆ ।
ಚಿನುಮಯನ ಚರಿತೆಯಂ ಬಿತ್ತರಿಪುದೆಂದಾಗ ।
ಮನುಮೆಗೈದಡೆ ಶಿವಂ ಸಂತಸದಳಿಂತೆಂದ ಸತಿಯೊಳಾನಂದದಿಂದ ॥
ವನಜಮುಖಿ ಕೇಳ್ ಪೂರ್ವದೊಳಗೆ ದೇವಾಸುರರು ।
ವನಧಿಮಥನಂಗೈವ ಸಮರದೊಳು ಸುರಪಸುತ ।
ನಿನತನಯರೀರ್ವರ್ರೈತಂದು ಹರಿಯಂಘ್ರಿಗಳಗಭಿನಮಿಸಿ ಕೈಮುಗಿದರು ॥ (27)

ಪ್ಲವಗಾಧಿಪನ ನೋಡಿ ಹರಿ ನುಡಿದ ಪೋಗಿ ವಾ ।
ಸವನೆಡೆಯೊಳಿರ್ದ ಸುರರಿಗೆ ಸಹಾಯವನೆಸಗಿ ।
ದಿವಿಜರೊಳಗಿಹುದೆನುತ ನೇಮಿಸಲ್ ಕಪಿರಾಜ ಮಗುಳೆ ವಿಜ್ಞಾಪಿಸಿದನು ॥
ಕುವಲಯದೊಳಾಂ ಕಪಿಯು ನಿಸ್ಸಾರ ನಾಂ ಪೋಗಿ ।
ಬವರದೊಳಗೇಂಗೈವೆನೆನೆ ಹರಿಯು ಮಿತ್ರರಹಿತ ।
ಜವಸತ್ವಗಳನಿತ್ತು ಮೊಗನೋಡಿ ನಸುನಗುತವರನಂದು ಕರುಣಿಸಿದನು ॥ (28)
ಧುರದೊಳದಿರಾಗಿ ನನಗಾವನೈತಹನವನ ।
ವರವಿಕ್ರಮದೊಳರ್ಧ ನಿನಗೆ ಬಂದೊದಗಲವ ।
ಮುರಿದೋಡಲಿದಿರಿಲ್ಲದತಿಸಾಹಸಿಕನೆನಿಪುದೆಂದಭಯಮಂ ಕೊಟ್ಟರೆ ॥
ಸುರಪವೆಡೆಗೈತಂದರೀಕ್ಷಿಸುತ ಪ್ರೇಮದಿಂ ।
ಕೊರಳ ಕಾಂಚನಮಾಲಿಕೆಯ ಗಳಕೆ ತೊಡಿಸಿದನು ।
ತರಳ ಕೇಳರ್ಪನ್ನ ಕರದಿಂದ ಬಲಕಾಂತಿಶೌರ್ಯಗಳ್ ಕುಂದವೆನುತ ॥ (29)
ವಾಲಿಯುರುಹೇಮಮಾಲಿಕೆಯಿಂದ ದೇವತಾ ।
ಜಾಲಕಗ್ಗಳಹಿತವನಾಚರಿಸುತಿರೆ ಸುರಪ ।
ಶ್ರೀಲಲನೆಯಧಿನಾಥಗೆರಗಿ ಬಿನ್ನವಿಸಿದಂ ದೇವ ನಿನ್ನಯ ಕಾರ್ಯಕೆ ॥
ನೆಲದೊಳುದುಭವಿಸೆಂದು ಜಲಜಪೀಠಂ ಪೇಳೆ ।
ಲಲಿತಕಪಿದೇಹದಿಂದಿರೆ ಭವತ್ಕೃಪೆಯಿಂದ ।
ಕಲಿತಮಾದುವು ಬಲಂ ಪೌರುಷಂ ಮುಜ್ಜಗದೊಳಾರಿದಿರೊಳಂ ನಿಲುವರು ॥ (30)
ಕೊಂಡಿದಿರು ಸಾಹಸವ ಧರೆಯೊಳಾನೇಸುದಿನ ।
ದಂಡಧರನಂತಿರ್ದರೇನು ಗತಿ ಯೆನುತುಮಾ ।
ಖಂಡಲಂ ಬಿನ್ನವಿಸೆ ಹರಿ ಮೆಚ್ಚಿ ನಸುನಗುತ ಮಾರುತ್ತರಂಗೊಟ್ಟನು ॥
ಪಂಡಿತನೆ ಪೊಡವಿಯೊಳಗವತರಿಸಿ ರಣಕೆ ಮುಂ ।
ಕೊಂಡುಬರೆ ಮರೆಗೊಂಡು ಕಪಿರೂಪಮಂ ಕೆಡಿಸಿ ।
ಗಂಡುಗಲಿ ಪೂರ್ವಾಧಿಪತ್ಯಮಂ ಪಾಲಿಸುವೆ ಭೀತಿಗೊಳಬೇಡೆಂದನು ॥ (31)
ಕಮಲಾಪತಿಯ ನುಡಿಯ ಕೇಳ ಸಂತಸದಿಂದ ।
ಸುಮನಸೋತ್ತಮ ಸುಖದೊಳರ್ದನಂದಿನ ನುಡಿಯ ।
ಕ್ರಮಣೆಗೈಯಲಾರದೆನುತ ಕಪಿಯಂ ಕೊಂದುದಲ್ಲದೆ ಮಹಾಪುರುಷಗೆ ॥
ಭ್ರಮೆಯಜ್ಞತೆಗಳುಂಟೆ ಭೇದಿಸುವ ಪರಿಯುಂಟೆ ।
ವಿಮಲವಿಜ್ಞಾನಮಯಮೂರ್ತಿ ರಾಘವನೆನುತ ।
ತಮವ ನಿವಾರಿಸಿದ ಹರನಂಘ್ರಿಗಂ ಮಣಿದು ಹರುಷಿಸಿವಳದ್ರಿಜಾತೆ ॥ (32)
ಪರಿದು ಭೌತಿಕದ ಜಂಜಡವ ನಿಜರೂಪದಿಂದ ।
ವಿರಜಾಂಬರಾಭರಣಗಳನಿಟ್ಟು ಸುರರಾಜ ।
ಮಿರುಪ ಪೊಂದೇರಡರಿ ಪರಿಪರಿಯ ನುತಿಗಳಂಗೈದು ಗಗನದೊಳೈದಲು ॥
ಪರಮ ಭಕ್ತಿಯೊಳು ರವಿಸುತಪವನಸುತರೆರಗಿ ।
ಪರಮಾತ್ಮನೆಂದು ಭಾವಿಸುತ ಶ್ರೀರಾಮಪುರ ।
ದರಸನೆಡೆಯೊಳಗಿರ್ದರಾನಂದಮೂರುತಿಯ ಸಲ್ಲಾಪಮಹಿಮೆಯಿಂದ ॥ (33)

(ಸಂಧಿ 7 ಕ್ಕ ಪದ 298.)

# ಎಂಟನೆಯ ಸಂಧಿ

ಸೂಚನೆ : ಕಾರಣಿಕರರಸ ರಘುರಾಜೇಂದ್ರಚಂದ್ರಮಂ ।
ಸಾರತತ್ವಾರ್ಥ ವಚನಗಳಿಂದ ಮಾನಸ ವಿ ।
ಕಾರಮಂ ಪರಿಹರಿಸಿ ತಾರೆಯಂ ಸಂತೈಸಿ ಬೀಳ್ಕೊಟ್ಟ ಕಿಷ್ಕಿಂಧಕೆ ॥

ಪದ ॥ ಮನದನ್ನೆ ಕೇಳ್ ವಾಲಿಯನುವಕಂಡತಿ ಭಯದಿ ।
ತನತನಗೆ ಕಪಿಗಳೋಡಿದರದರೊಳಗೆ ಕೆಲರು ।
ಮನೆಗೈದಿ ತಾರೆಯೊಡನೀ ಪರಿಯ ವಿಸ್ತರಿಸಿ ಪೇಳ ಮಗುಳಂತೆಂದರು ॥
ಇನಕುಲಾಗ್ರಣಿ ಸಹಿತಮಿನತನಯ ಬರ್ಪನಿದ ।
ಕನುಮಾನಮಿಲ್ಲ ನಗರದ್ವಾರಮಂ ಬಲಿದು ।
ಮನಗೊಂಡು ಕೊಳುಗಳದೊಳೆಚ್ಚಾಡಿ ಯೂಥಪರ ಕರೆಸಿ ಪೇಳುವುದು ತಾರೆ ॥ (1)

ತಂದೆಗಿಂದಧಿಕಬಲನಂಗದ ಮಹಾರಾಜ ।
ನಿಂದು ಪಟ್ಟಾಭಿಷೇಕಂಗೈದು ಬಿದಿಯ ಕೃಪೆ ।
ಯಿಂದ ಬಂದೀ ಪ್ಲವಗರಾಜ್ಯಮೀ ನಗರಮಂ ರಕ್ಷಿಸಲ್ವೇಳ್ಕು ತಾಯೆ ।
ಕುಂದುಕೊರತೆಗಳೆಣಿಸಿ ಶೋಕಭೀತಿಗಳಿಂದ ।
ಮೊಂದೆರಡು ಘಳಿಗೆ ತಾಮಸಗೈಯೆ ಮುಂಬರಿದು ।
ಬಂದ ಬಳಿಕನುಕೂಲಮಹುದು ದುಸ್ತರಮೆಂದು ಬಿನ್ನಪಂಗೈದರೊಲಿದು ॥ (2)

ಪತಿಯಳಿದ ವಾರ್ತೆಯಂ ಕೇಳ ತಾರಾದೇವಿ ।
ಯತಿಶಯದ ದುಃಖದಿಂದೆದೆ ಬಾಯ ಬಡಿದು ಬಲು ।
ಖತಿಯಿಂದಮಿಂತೆಂದಳೆಲವೊ ಧೊರೆತನನಗರಭೋಗ ಸುತಭೃತ್ಯರಿಂದೆ ॥
ಯಾತನದೈಶ್ವರ್ಯದಿಂದೆಮಗೇನು ಧವನಾವ ।
ಕ್ಷಿತಿಯೊಳಗೆ ಕೆಡೆದಿರ್ಪನಲ್ಲಿಗಾನೈದಿ ಸಂ ।
ಗತಿಯಿಂದ ಸಗ್ಗವತುಲಿತಭೋಗಮಂ ಕೊಂಬೆನೆನುತ ಪೊರಮಟ್ಟಳಾಗಾ ॥ (3)

ಮುಂಗಾರ ಮಿಂಚು ನೆಲನಂ ನೋಡುವಾಸೆಯಿಂ ।
ದಂಗನಾಕೃತಿಯಾಂತು ನಡೆಗೊಂಡುದೆಂಬಂತೆ ।
ಸಂಗದೊರ್ವರ ಬಯಸದತಿವೇಗದಿಂ ಬಂದು ಕಪಿವೀರನಿರವ ನೋಡಿ ॥
ಹಿಂಗದಾತನ ತನುವ ಸೆಳೆದಪ್ಪಿ ಮುದ್ದಿಸಿಯ ।
ಭಂಗುರಸ್ನೇಹದಿಂ ಮೊಗದೊಳಗೆ ನೊಗಮಿಟ್ಟು ।
ಕಂಗಳೊಳ್ ನಿಟ್ಟುಸುತ್ತ ಮಗುಳೆ ಗುಣಕಥನಗಳ ನೆನೆನೆನೆದು ಬಾಯಾರ್ದಳು ॥

ಪಿಂತೆ ದೇವಾಸುರರ ನೆರವಿಯೊಳು ಬಾಣಬಲಿ ।
ಮುಂತಾದ ಯೋಧರಂ ನೆಗ್ಗಿಸಿ ಮಹಾಯಶವ ।
ನಾಂತಂ ರಮಾಕಾಂತನಿಂದಮಿತವರಗಳಂ ಪಡೆದು ಭೂತಳದಿ ಶೂರ ॥
ಪಂತಿಯಂ ಗಣನೆಗೊಳ್ಳದ ಮಹಾಬಲ ನಿನಗ ।
ದೆಂತುದೋರಣಾಂತಕ ನಿನ್ನರಾಮನೆಂ ।
ಬಂತಕಂ ಮುಳಿದು ಕೆಡೆಪಿದನೆ ಹಾ ! ಸುರಪಸುತ ಹಾ ! ಯೆಂದು ಧರೆಗುರುಳ್ದ ॥ (5)

ಅರುಣನುದಯದೆ ನಾಲ್ಕುಶರಧಿಯನು ಸುತ್ತಿ ಬಹ ।
ಮರುತ ವೇಗವದೆಲ್ಲಿ ಮರೆಯಾಯ್ತು ಕೊಳುಗುಳದಿ ।
ಸ್ಮರಿಸಿದೊಡೆ ಶತ್ರುಕುಲಗಿರಿದುರ್ಗಗಳನಡರೆ ಬಾಯವಿಡುತ ನಡುಗುತಿರುವಾ ॥
ಖರಕರೋಪಮವಿಕ್ರಮಂ ಪೋಗಿ ಧೂಳಿಯೊಳ್ ।
ಪೊರಳ್ವುದಾದುದೆ ಮೇರುಗಿರಿ ಧರಾತಳಕೆ ಬಂ ।
ದುರುಳುವರೆನುತ್ತರಿಯದಾದೆ ಹಾಹಾ ! ನಾಥನೆನುತ ಚೀರಿದಳಂಗನೆ ॥ (6)

ದಶಮೌಳಿಕಾರ್ತವೀರ್ಯಸುತಮುಖ್ಯರೆಡೆಯೊಳುಂ ।
ಬೆಸಗೊಂಡ ಮಾತ್ರದಿ ಕುಗ್ಗಿ ನೆನೆದೊಳ್ಧೈರ್ಯರ್ ।
ಬೆಸುಗೆಗೆಟ್ಟಳಲುವರು ಸುರರಾಜಮುಖ್ಯರುಂ ನಿನ್ನ ವಿಕ್ರಮವ ಬಯಸಿ ॥
ಪೊಸತೆನಿಪ ಸಂತಸಂಗೊಂಬರಾ ಶೌರ್ಯಮಂ ।
ಬಿಸಿಲೊಳಗೆ ಬೆರೆದ ಚಂದ್ರಿಕೆಯಂತೆ ಬಯಲಾದು ।
ದಸಮಕಾಲದ ಮಹಿಮೆಗೇನೆಂಬೆನೆಂದಳಲಿ ಬಳಲಿದಳ್ ಶೋಕದಿಂದ ॥ (7)

ಚಿತ್ತಕಿನಿತೂಣಿಯದ ಸಂಚಲವ ಪುಟ್ಟಿಸದೆ ।
ಮತ್ತಕಾಶಿನಿಯುರಂತಿರವನವೇಕ್ಷಿಸದೆ ।
ಭೃತ್ಯಾನುಸರಣೆಯಿಂದನುಸರಣೆಗೈದಿಪ ದಾಸಿಯೊಳು ಮುಳಿದು ಮಗುಳೆ ॥
ಉತ್ತಮಮೆನುತ್ತಮವನೀಸತ್ತಿಯನಪ್ಪಿ ಬಿಡ ।
ದಿತ್ತರದಿ ಬಳಲಿಸುವದುಚಿತವೇ ಕೇಳು ಕಪಿ ।
ಸತ್ತಮನೆಯೆನುತಳಲಿತೊಳಲಿ ಬಳಲಿದಳಬುಜನೇತ್ರೆ ದುಃಖಾತುರದೊಳು ॥ (8)

ಚಿರಕಾಲ ಸಂಪ್ರೀತಿಯಿಂದಮನುಮತಿಸಿರ್ದ ।
ಚರಣಸೇವಕಳ ದೈನ್ಯವ ಮನದೊಳರಿಸಿ ಬಂ ।
ಧುರ ಪ್ರೇಮದಿಂದಪ್ಪಿ ಚುಂಬಿಸದೆ ಬಳಿಕಿಂತು ಸುರರಂಗನೆಯರ ಬಯಸಿ ॥
ತೊರೆವುದುಚಿತವೆ ನಲ್ಲ ಕೋಪಮೆಳ್ಳನಿತಿಲ್ಲ ।
ದಿರುವ ಕರುಣಾಕಲಿತ ಚಿತ್ತಮೇನೊಂದಲ್ಲ ।
ಪೊರೆಯುವೆಳ್ಕೆಂದಾಗ ಚರಣಂಗಳಂ ಪಿಡಿದು ಮರುಗಿದಳ್ ಕುವಲಯಾಕ್ಷಿ ॥ (9)

ದೇವ ಕೇಳಂಗದನ ಪ್ರೀತ್ರಿಯಿಂದಲಿ ಭವ ।
ಜ್ಜೀವಕತಿಶಯಮೆಂದೆನಿಸಿ ನಡೆ [ವೃತ್ತಿದ್ದುನಿ] ।
ದ್ರಾವಕಾಶಂ ಜನಿಸದತಿಮೃದುಲಮಾನಸಂ ಪಾದಮೂಲದಲಿ ಕೆಡೆದು ॥
ಈವಿಧದೊಳೊರಲುತಿಹುದೇತಕೀಕ್ಷಿಸದೆ ಕರೆ ।
ದೇವಿ ತೊಡೆಯೊಳಗಿಟ್ಟುಮದ್ದಿಸದೆ ಸುಮ್ಮನಿರ ।
ಲಾವ ಪರಿಯಿಂದಣುಗ ಜೀವಸಂಗೈದಪಂ ಗತಿಯಪ್ಪರಾರವನಿಗೆ ॥ (10)

ಭುವನದೊಳಗುಳ್ಳ ಮಾನಿಗಳಗ್ರಭವ ನೀನು ।
ಯುವತಿಯುಂ ಸುತನ ರವಿಸುತಗೆ ಸೇರಿಸಿ ಕೋಪ ।
ಜವಸತ್ವಗಳನುಳಿದು ಮೌನದಿಂದೈದಿದರದೇನೆಂಬರೈ ಕೂರರು ॥
ಕುವಲಯಾಧಿಪ ಶೋಕಸಾಗರದೊಳೆಲ್ಲರಂ ।
ತವಕದಿಂ ಕೆಡಪಿ ಪೋಗುವದುಚಿತಮಲ್ಲೆನುತ ।
ಮವಿರಳದ ಶೋಕದಿಂದಳುತ ಕೆಡೆದಂಗನೆಯ ಪವನಸುತ ಸಂತೈಸಿದಂ ॥ (11)

ಜಲಬುದ್ಬುದೋಪಮಿತ್ತವಾದ ಶಾರೀರಸಂ।
ಕಲಿತದಿಂದೆಸಗಿದ ಶುಭಾಶುಭಗಳಂ ಕೊಂಡು।
ತೊಲಗುವರು ಜಂತುಗಳು ಜಾನೀನೆಮಿದು ನವ್ಯಮಲ್ಲ ಮದರಿಂ ಬಲ್ಲರು॥
ಕೆಲಸಾರಿಸುತ್ತ ಬಂದ ದುಃಖಂಗಳಂ ಶುಭಗ।
ಳೊಲವ ಬಯಸುತ್ತಮಿರ್ಪರದರಿಂದ ಸುಕುಮಾರ।
ಬಲಿಯಂಗದನ ನೋಡಿ ತಾಯ ದುಃಖವಮರೆದು ಕಾಯೆನ್ನ ಪ್ರೀಯದಿಂದ॥(12)
ಮೂರುಲೋಕಂಗಳಂ ಜಯಿಸಿ ಜಸಮಂ ಗಳಸಿ।
ಧಾರಿಣಿಯೊಳುಳ್ಳ ಭೋಗಂಗಳನ್ನನುಭವಿಸಿ।
ವೀರರ್ಸೈದುವ ನೆಲೆಗೆ ನಡೆದ ಕಪಿವಲ್ಲಭನ ನೆನೆದಳಲದೇನು ತಾಯೆ॥
ಶೂರರಿಹರಮಿತಸಿರಿಸಂಪದಂ ರಾಜ್ಯಂ ಕು।
ಮಾರನಂಗದನಿರ್ಪನೀ ತರಳಗಂ ಧರಾ।
ಭಾರಮಂ ಪೊರಿಸಿ ಸುಖದಿಂದಮಿರವೇಳ್ಕಲ್ಲದಿಲ್ಲದುದನೆನೆದರೇನು॥ (13)
ಧೃತಿಯಳಿದು ನೀನಳಲುತಿರೆ ನೋಡಿ ತನಯ ಸಂ।
ಗತಿವಿಡಿದು ಬಳಲುತಿಹನುಭಯರುಂ ನೆನೆನೆನೆದು।
ಜತೆಗೊಂಡು ಸಂಕಟದೊಳಿರುವದಣ್ಣಂ ಪೋದ ಪರಿಯ ಕಂಡಳ್ಕ ಬಳ್ಕ॥
ಕ್ಷಿತಿಗೊಡೆಗಿ ಸುಗ್ರೀವನಿರ್ಪನಾತನ ಕಂಡು।
ಕತಿಪಯ ಕಪೀಂದ್ರರುಂ ಮರುಗುತಿಹರವ್ವೆ ನಿಜ।
ಮತಿಯಿಂದಮೆಲ್ಲರಂ ಪೊರೆದು ಧೀರತನವ ನೀಂ ಧರೆಯೊಳಿರಿಸುವುದು ತಾಯೆ॥
ಅಂಗದನ ಮುಂದಿಟ್ಟು ರಾಜ್ಯಪಾಲನೆಗೈಯು।
ವಂಘವಣೆಯಂ ನೆನೆದು ಪಟ್ಟವಣೆಯೊಳು ಸುತನ।
ಸಿಂಗರದಿ ಕುಳ್ಳಿರಿಸೆ ಕಂಡು ಶೋಕಾತುರಂ ಶಾಂತಿಯಾದಪುದು ತಾಯೆ॥
ಹಿಂಗಿಸಲು ದುಃಖಶೋಕವನೆಂದು ಪರಿಪರಿವಿ।
ಧಂಗಳಂ ವಾಯುಸುತನುಪಚರಿಸೆ ಕೋಪದಿಂ।
ದಂಗನೆ ಹನೂಮಂತನೊಡನೆ ರೋಷಾವೇಶದಿಂ ನುಡಿದಳುತ್ತರವನು॥ (15)
ಲೇಸನಾಡಿದೆ ಹನುಮ ಸುಗ್ರೀವನೊಡನೆ ನೀ।
ನೀಸುದಿನ ಸಂಚರಣೆಗೈದ ಬುದ್ಧಿಯನೆಲ್ಲ।
ಬೇಸರದೆ ಪೇಳ್ದು ವಾಸವಸುತನ ಪೋಗಾಡಿ ರಾಜ್ಯಭಾರವನು ವಹಿಸಿ॥
ಕೂಸನೋಡುತ ತರಣಿಸುತನ ವೈಭವದಮಿತ।
ರಾಸಿಯಂ ನಿಟ್ಟಿಸುತ ಶೋಕಮಂ ಮರೆದು ಮಗು।
ಳಾಸೆ ಬಿಟ್ಟುಪ್ಪುದೆನುತ ಬೋಧಿಪುದು ನಿನಗುಚಿತವಾಗಿಹುದೆ ಪವನತನಯಾ॥
ತರುಣನಂ ಮುಂದಿಟ್ಟು ಧೊರೆತನವನನುಭವಿಸಿ।
ತರಣಿಸುತನಂ ನೋಳ್ಪ ಸಿರಿಗಿಂತ ವಾಲಿಯಂ।
ಪರಿರಂಭಣಂಗೈದು ಪೋಗಿ ಸಗ್ಗದ ಸುಖವನೆರವಿಲ್ಲದನುಭವಿಸುವ॥
ಹರುಷಕೆತರಮದುಂಟೆ ತರಳನಂಗಜಗಾತ।
ಕಿರಿಯಯ್ಯ ಹಿತಮಿರ್ದರೆತ್ತಿಕೊಂಡೊಯ್ದು ಪ್ರಿಯ।
ವರನ ಪೊರೆದು ಸುತನಮನ್ನಿತ್ತು ಪತಿಕರಿಸಿ ನಿಟಸತಿ ಸಂತಸಹನು॥ (17)

ಬಲುಕಾಲ ತಪಮಿರ್ದು ಬಯಸಿ ಸಿರಿ ಸಂಪದವ।
ನೊಲಿಸಿಕೊಳಲೆಂದಣ್ಣನಂ ಕೊಂದ ಸುಗ್ರೀವ।
ನೆಲನಾಳಕೊಳಲಿನ್ನು ಸಕಲ ಸಾಮ್ರಾಜ್ಯದಿಂ ಬಾಳಲೆಮಗೇತಕೆನುತ॥
ಲಲನೆ ವಾಲಿಯನಪ್ಪಿ ಬಳಲುತಿರಲಂಗದಂ।
ಸುಲಭವಲ್ಲದ ಶೋಕದಿಂ ತೊಳಲುತಿರೆ ಕಂಡು।
ಜ್ವಲಿತಾಂಗನೆನಿಸಿ ಸುಗ್ರೀವನಳಲಿದನಣ್ಣನಂ ನೆನೆದು ಮರುಗಿ ಮರುಗಿ॥ (18)
ಅತ್ತಿಗೆಯ ಮಾತಿನಿಂದಂಗದನ ದೈನ್ಯದಿಂ।
ಚಿತ್ತಮಂ ಕರಗಿಸಿದನಾಗ ಸುಗ್ರೀವನಳು।
ಕಾತ್ತ ವೈತಂದಣುಗನಪ್ಪಿ ಶೋಕಂಗೈದ ಕಲ್ಮರಂ ಕರಗುವಂತೆ॥
ಮತ್ತೆ ವಾಲಿಯ ಗುಣಪರಾಕ್ರಮಂಗಳ ನೆನೆದು।
ಬಿತ್ತರದಿ ತನ್ನ ದರ್ವೃತ್ತಂಗಳಂ ಪೇಳ।
ತತ್ತರದ ಶೋಕಾಬ್ಧಿಯೊಳಗಾಳಮುಳುಗಿದಂ ಸಹಜಾತ ಪ್ರೇಮವೆಂತೊ॥ (19)
ಮೂವರೊಂದೇ ಸಮದಿ ಮೋಹದಿಂದಳುತಿರ।
ಲಾವ ಪರಿಯೊಳಗಾರು ತಿಳುಪಿದರೆ ತೀರದಿರೆ।
ದೇವರಾಘವ ಮನಸ್ತಾಪದಿಂದೈತಂದು ಸಂತೈಸವೇಳ್ಕುಮೆನುತ॥
ಅ ವನಿತೆ ಕಾಣುತಂಬುಜದಳಾಕ್ಷನ ಬರವ।
ತೀವಿದತಿ ದುಃಖದಿಂ ಮೂದಲಿಸಲನುಗೈದ।
ಕೋವಿ ಶೋಕಾತುರದ ದುರವಸ್ಥೆಗಳ ಪರಿಯ ವಿಸ್ತರಿಸಿ ವಿನಯದಿಂದ॥ (20)
ದೀನರಕ್ಷಕ ದಯಾಪರ ದುಃಖಹರ ಸುಕರ।
ಭೂನುತಚಂತ್ರನೆಂದಖಿಳ ವೇದಂಗಳನು।
ಮಾನಿಸದೆ ಪೇಳುತಿವೆಯದರಿಂದ ಸತ್ಯಸಂಕಲ್ಪ ಸಕಳಾಗಮಜ್ಞ॥
ವಾನರನ ತರಿದೆನಗೆ ವೈಕಲ್ಯಮಂ ತಂದು।
ದೇನು ಕಾರಣ ದೇವ ಸ್ತ್ರೀ ಪುರುಷರಗಲಿಸಿದ।
ಮ್ಲಾನವಲ್ಲವೆ ಧರ್ಮಕನಘ ನಿನ್ನಯಚಿತ್ತಮರಿಯದಂತೇನಿರ್ಪುದು॥ (21)
ಪತಿಯ ಬಿಟ್ಟರೆನಿಮಿಷ ಜೀವಧಾರಣಗೈವ।
ಮತಿಯಿಲ್ಲವೆನಗೆ ಮಾನವನಾಥನಾವ ಶರ।
ಹತನಾದನೀಶಾನಮದರಿಂದಮೆನ್ನೆಚ್ಚು ಕೆಡಪಿದರೆ ಸಾಲೋಕ್ಯದ॥
ಗತಿಯಪ್ಪುದೆನ್ನ ಯಾಚನೆಯ ಸಫಲಂಗೈಯ।
ಲತಿಶಯದ ಕೀರ್ತಿ ಸಮನಿಪುದರಸನುಳದಾನು।
ಕ್ಷಿತಿಯೊಳರೆ ಕರುಣಾನಿಧಿ ಕಾಯಬೇಕೆಂದೆರಗಿ ಬೇಡಿದಳನೇಕ ವಿಧದಿ॥ (22)
ಅನಿತರೊಳು ಸುಗ್ರೀವನೈತಂದು ಹರಿಯ ಪದ।
ವನಜಂಗಳಿಗೆ ಬಿನ್ನಪಂ ಗೈದ ಶ್ರೀಯುರಸ।
ಮನದ ಮಾಲಸ್ಯದಿಂ ಹಂಕಾರವಶನಾಗಿ ರೋಷದಾವೇಶ ವಿಡಿದು॥
ಸನುಮಾರ್ಗಮಂ ಬಿಟ್ಟು ಶಠಮತಿಗೊಡಂಬಟ್ಟು।
ಯೆನಗಯ್ಯನಾದಣ್ಣನಂ ಕೊಲಿಸಿ ಪಾತಕದ।
ಮನೆಯಾಗಿ ದುಷ್ಕೀರ್ತಿಯಾಂತೆ ಜೀವಿಸಿ ಮುಂತೆ ಫಲವೇನನಾಥನಂತೆ॥ (23)

ಯಾತಕೆನ್ನಯ ಜೀವಗತಿ ಸಮನಿಸುವುದಯ್ಯ ।
ಯಾತಕೆನ್ನಯ ಪ್ರಾಣವಖಿಲ ನಿರಯದ ತಾಣ ।
ಯಾತಕೆನಗಿನ್ನಿರವು ಲೇಸೆನಿಪುದೈ ಸಾವು ಸಾಧುಸಜ್ಜನರೆಡೆಯೊಳು ।
ಪಾತಕೆಯದೆಂತಿರುವೆ ಪದರಿಸಲದೇನೊರವೆ ।
ಜಾತಿಚಪಲತೆವೆರದ ಜಂಜಡದ ಮತಿಗರೆದೆ ।
ಭೂತಳದಿ ದೇಹದಿಂದಿರೆ ಸಲ್ಲ ಪೋದಲ್ಲದರುಗವೀ ಪಾಪವೆಲ್ಲ ॥ (24)
ತರಳಸುಕುಮಾರನಂಗದ ಮಹಾಶೋಕದಿಂ ।
ಧರಣಿಯೊಳ್ ಕೆಡೆದು ಪೊರಳುವ ಪರಿಯ ಕಂಬನಿಯ ।
ನಿರದೆರೆದು ಜಂಬಾಲತೆಯನೆಸಗೆ ತಾರೆ ತಪ್ಪಳದಿ ಮುಳುಗಿರುವಳೆರೆಯ ॥
ನೆರೆದ ಬಾಂಧವರೆಲ್ಲ ನಯನ ವಾರಿಗಳಿಂದ ।
ಕರಗುತೆನ್ನಂ ಜರೆದು ನುಡಿಯ ತರವಾರಿಗಳ ॥
ಲರಿದಿಡಲದೆಂತಯ್ಯ ಪೊರೆವೆನಸುಗಳ ಜೀಯ ಕೃಪೆಯಿಂದ ಪಾಲಿಸಯ್ಯ ॥ (25)
ಹಲವು ಮಾತಿನ್ನೇನು ಪಂಕನಿಷ ಕೃತಿಯಿನ್ನು ।
ಕಲಿತವಾಗದು ದೇವ ನಿಲಿಸಲೆನ್ನಯ ತನುವ ।
ಕೊಲದೆ ಬಿಡುವನೆ ಕಾಲತಿಳದು ನೋಡದೆ ಮೇಲಜಾತ್ಯಾಂಧನಂತೆಸೆಯಲು ॥
ಕೊಲೆಗೆಡುಗನೆಂದೆನ್ನ ಕೊಸರದುಳವರೆ ಮುನ್ನ ।
ಕಲಿತ ಮತಿಯಘವಾಯ್ತು ಕೀರ್ತಿಕಳ್ತಲೆಯಾಯ್ತು ।
ಸುಲಭವಲ್ಲದ ನರಕರಾಸಿ ಸಮ್ಮುಖವಾಯ್ತು ಬದುಕೆ ನಿಷ್ಫಲಮದಾಯ್ತೂ॥(26)
ಶೂರನೌದಾರಕಪಿವೀರನಗ್ರಜಗೆಡರ ।
ಹಾರೈಸಿ ಸತಿಸುತರ ದುಃಖಭಾಜನಗೈದು ।
ಧಾರುಣಿಯೊಳುಳ್ಳ ನಿಜಕುಲವಿಗರ್ಹತೆಯೊಡೆದು ವಿಪುಲಪಾತಕವ ತಳೆದು ॥
ಶಾರೀರಸುಖಕೆಳಸಿ ಜಸವ ನಾಶನಗೊಳಸಿ ।
ಕ್ರೂರವೈವಸ್ವತನ ಕೊಲೆಗಡಕವಾಗಿ ಮ ।
ತ್ತಾರಾಸೆಯಿಂದಿರುವೆನಾರಿಗೊಡೆಯಂ ಪೊರೆವೆನತುಲದುರ್ಯಶವ ಬೆರೆವೆ ॥ (27)
ಜನನಿಗರ್ಹಿತವಾದ ಸಾಮ್ರಾಜ್ಯ ಸುಖದನುವ ।
ನನುಪಲದು ಮುನ್ನಿನೋಲ್ ಕಾನನದಿ ಮನೆಗೈದು ।
ದಿನದಿನಂ ಕೃಛ್ರ ಚಾಂದ್ರಾಯಣಗಳಿಂದಲುಂ ತನುವಪೋಗಾಡಿಕೊಳುವೆ ॥
ವನಜಾಕ್ಷ ನಂಬುಗೆಯನಿತ್ತಂತೆ ಜಂಭಾರಿ ।
ತನಯನಂ ಕೊಂದೆನ್ನ ರಾಜ್ಯಮಂ ಪಾಲಿಸಿದು ॥
ದನಘಸತ್ಕೀರ್ತಿ ತ್ರಿಜಗದ್ವ್ಯಾಪಿಯಾಯ್ತಖಿಲ ಸಜ್ಜನಾನಂದವಾಯ್ತು ॥ (28)
ಬಿನ್ನಪವ ನವಧರಿಸಿ ಬೇಗದಿಂ ದಯವೆರಸಿ ।
ಬನ್ನಬಡುವಂಗದಗೆ ಪಟ್ಟಮಂ ಪಾಲಿಸುಗೆ ।
ಯೆನ್ನಮನದಿಷ್ಟಾರ್ಥವಾದುದಿಂದಿಗೆ ಸಾರ್ಥಮಿದೆ ಚಿಂತಿತಾರ್ಥವೆನಗೆ ॥
ನನ್ನಿಯೆನುತಂ ತಿಳಿದು ನಯಮಾರ್ಗಮಂ ತಳೆದು ।
ಖಿನ್ನತೆಯ ಪೋಗಾಡಿ ಕೃಪೆಯಿಂದಲುಂ ನೋಡಿ ।
ತನ್ನನುದ್ಧರಿಸೆಂದು ಶರಣಾಗತರ ಬಂಧು ಶಾಶ್ವತಕೃಪೈಕ ಸಿಂಧು ॥ (29)

ಎಂದು ಬಹುವಿಧದುಃಖದಿಂದ ಸುಗ್ರೀವ ರಘು ।
ನಂದನನ ಪದಕೆರಗಿ ಬೇಡುತಿರಲಂಗದಂ
ಕಂದಿದಾನನದಿಂದ ಕರೆಕರೆಗೊಳುತ್ತಮಿರೆ ತಾರೆ ಹಾಯೆಂದಳುತಿರೆ ॥
ಇಂದಿದಕುಪಾಯಮೇನೆಂದು ನಾನಾ ಪರಿಯು ।
ಲಿಂದಿರಾವರ ತನ್ನೊಳಾಳೋಚನಂ ಗೈದು ।
ಬಂಧುರದ ಶೋಕ ಕಡೆಯಹುದು ತತ್ವದೊಳೆನುತ ತಿಳದು ತಾರೆ ಯೊಳೆಂದನು ॥
ಯಾತಕೆನಿತಾತಂಕ ತಾಯೆ ಲಾಲಿಪ್ಪುದೆಂದು ।
ಮಾತಂ ಮರೀಚಿಕಾ ಜಲದ ಜಂಗುಳಯೆಂಬ ।
ರೀತಿಯೊತನು ಜರಾಮರಣಾದೀಕಾಯತನ ಜತನಗೈವರಸಾಧ್ಯವು ॥
ಆತಪ್ತ ಲೋಹಸ್ತ ಜಲಕಣೋಪಮಮಪಾಯು ।
ನೀ ತಿಳಯುದೆಡೆರಾಗಳನೇಕವೀ ಮಧ್ಯದೊಳ ।
ದೇತರಿಂದಲಿ ಶರೀರವನುಳುಹಲಳವಹುದು ಹರಸುರಾದ್ಯರಿಗೆ ತಾಯೆ ॥ (31)

ತನುವಧ್ರುವಂ ಜೀವನನುಪಮಾನಂದಮಯ ।
ನೆನಿಸು ಶಾರೀರಂಗಳಾಗಿ ಪೋಗಲು ಸಾಕ್ಷಿ ।
ಯೆನಿಪನಲ್ಲದೆ ಸಾಯನೋಯನೆಂದಿಗು ಪೋಗಿಬರ್ಪುದಿದು ಪೊಲೆಕಾಯವು ॥
ಚಿನುಮಯಾತ್ಮಕ ಜೀವ ಹಂಕಾರದೊಡವೆರದು ।
ಜನನಮರಣಾದಿಗಳನನುಕರಿಸಿದವನಂತೆ ।
ವನಿತೆಸುತಭ್ರಾತ್ರಾದಿ ವೈಭವಗಳಲಿ ಸಿಲ್ಕಿ ರಾಟಾಳದೊಳ್ ತಿರುಗುವಂ ॥ (32)
ಪ್ರಾರಬ್ಧ ವಶದಿಂದಲೆಲ್ಲರೊಂದೆಡೆ ಬಾ ।
ಯಾರುತರವಟ್ಟಿಗೆಯ ನಾರಿ ತೃಷೆಯಂ ಕಳದು ।
ಬೇರೆಬೇರವರವರ ಗತಿಗಳರಸುತ ಪೋಪರೊಂದೆಡೆಯಿರರೆಂದಿಗು ॥
ಅಂಗಾರಿಲ್ಲವಭಿಲಾಷೆಯಿಂ ಮರುಳಾಗಿ ।
ಹಾರೈಸಿ ಬಯಲಭ್ರಮೆಯಿಂ ಬಳಲ್ವುದಲ್ಲದೀ ।
ಧಾರುಣಿಯೊಳೇಕಾಯ ನಿಲದೆಂದಿಗಾದರುಂ ಸಾಯನಕ್ಷಯ ಜೀವನು ॥ (33)

ನರನಾರಿಕ್ಲೀಬರೆಂತೆಂಬ ಭೇದಗಳಲ್ಲ ।
ಕರಿದುಬಿಳದುಂ ಕೆಂಪುವರ್ಣದೆಣಿಕೆಗಳಲ್ಲ ।
ತರಳ ಜವ್ವನಿಗ ವಾರ್ಧಿಕ್ಯಮೆಂಬಾವಸ್ಥೆಯಿನಿತಿಲ್ಲ ಜನನ ಸಲ್ಲ ॥
ಪರಿಪೂರ್ಣ ನಿರ್ಲೇಪ ನಾಶಮಿಲ್ಲದ ನಿತ್ಯ ।
ಪುರುಷನಂ ಕುರಿತಳುವುದನುಚಿತ ಕಳೇವರಂ ।
ನರಚರ್ಮಮೇಧೋಸ್ಥಿಪಂಜರಂ ನಶ್ವರಮೆನುತ್ತೆಲ್ಲರರಿಪರಬಲೆ ॥ (34)
ಪತಿಯಹಂಬಲಿಸುತಳುತಿರುವೆ ಭಾವಿಸೆ ನಿನಗೆ ।
ಪತಿ ಜೀವನೋ ತನುವೊ ಪೇಳ್ ಜೀವನಿತ್ಯತನು ।
ಕ್ಷಿತಿಯೊಳುಂ ಮುಂದಿದಕೊ ನೋಡದಳಲುತ ಬರಿದೆ ಬಯಲ ಭ್ರಮೆಯಿಂದಳುತ್ತಿಹೆ ॥
ಗತಿಯನರಸದೆ ಮನೋವ್ಯಥೆಯಿಂದ ಸಂಕಟದಿ ।
ಖತಿಗೊಳ್ಳಲೇಂಫಲಮೆನುತ್ತ ರಘುನಾಥಸಂ ।
ಪ್ರತಿನಿರೂಪಿಸೆ ತಿಳದು ಮನದ ದುಃಖವನುಳದು ಮಗುಳೆ ಬೆಸಗೊಂಡಳೊಲಿದು ॥ (35)

ದೇವಲಾಲಿಪುದೆನ್ನ ಬಿನ್ನಪವ ನಿರ್ಲೇಪ ।
ಜೀವನಾದಂ ಶರೀರಂ ರಾಷ್ಟ್ರಮದೃಢಮು ।
ಈ ವಸುಧೆಯೊಳು ಜಂತುಕೃತ ಪಾಪಪುಣ್ಯಗಳದಾರುಂಡು ಹುಟ್ಟುತಳದು ॥
ತಾವಿಲ್ಲದಲೆತಿರುಗಿ ದೈನ್ಯಹರುಷಗಳಿಂದ ।
ಈವಿಧಮದಾರ್ಗೆ ತಿಳುಪೆಂದು ಬಿನ್ನವಿಸೆ ರಾ ।
ಜೀವಲೋಚನ ದಯದಿ ತತ್ವಮಂ ಬಿತ್ತರಿಸಿ ನಿಜದೊಲವ ನೊರೆದನೊಲಿದು ॥(36)
ಅಸಮಾನವಿಭವ ನಿರ್ಲೇಪ ನಿತ್ಯಾನಂದ ।
ಶಶಿರವಿಗಳಿಂದಧಿಕಮಾದಖಂಡಮಹಸ್ಸು ।
ಪೊಸತೆನಲದೊಂದಿಹುದು ಪರಬೊಮ್ಮವದರ ಸತ್ತಾಮಾತ್ರದನುಸರಣೆಯಂ ॥
ಪ್ರಸಿದ್ಧಿಟದ ಮಧ್ಯದೊಳಗೊಸೆದು ಹುಟ್ಟಿದನಾದಿ ।
ರಸೆಯಾದಿಕಾರಣಮನಾದಿಮಧ್ಯಾಂತ್ರಗಳ ।
ಪೊಸಗದಿಹ ಮಾಯೆಯೊಂದುಂಟದರ ಸಾಹಸವಿಲಾಸಗಳ ಪೇಳಲಳವೆ ॥ (37)
ನಿಸ್ಸಂಗನೆನಿಪ ಪುರುಷನ ಪೊರೆಯುಲಾಮಾಯೆ ।
ತಸ್ಸಮಯ ಬಲದಿಂದ ವೈಚಿತ್ರ್ಯಕರದಿಂ ನ ।
ಭಸ್ಸವದನದಲಿಟ್ಟು ತೋರ್ಪೇಂದ್ರಜಾಲಕನ ಜಾತಿಯಂದದಿ ನಟಿಸುತ ॥
ದುಸ್ಸಹದ ಗರ್ಭಮಂ ತಳೆದು ಪಡೆದಪ್ಪುದಾನು ।
ನಸ್ಸಮೊದಲದರಿಂದ ನಿಖಿಳ ತತ್ವಂಗಳನ ।
ಜಸ್ಸಮಂಗೊಳುತ ಸೃಜಿಸುವದು ನಿರ್ವ್ಯಾಜದಿಂ ಕಾಣ್ಬ ಕನಸಿಂಗೆಣೆಯೆನೆ ॥(38)
ಶುದ್ಧಸ್ಫಟಿಕದೆಡೆಯಲಿರ್ದ ಜಪಾಕುಸುಮ ।
ನಿರ್ಧರದ ನಿಜಗುಣವ ನಿರ್ಮಲದಿಮಡಗಿತ ।
ನ್ನುದ್ಧತಿಯು ಮೆರೆವಂತವಿದ್ಯೆ ಪುರುಷನ ಸುತ್ತಿ ಹಂಕಾರಕಲಿತನೆನಿಸಿ ॥
ಬದ್ಧಸಂಗೈದು ಬಲು ಜನ್ಮಕರ್ಮಗಳುಂಬ ।
ಪದ್ಧತಿಯ ಕೆಡಹಿ ಪ್ರಾಚೀನ ಬಲದಿಂ ಪ್ರಸಿಯ ।
ಬದ್ಧಮೆಂದೆನಿಸುವದನೇಂ ಪೇಳ್ವೆನಾಮಹಿಮೆಯೆಂತುಟೋ ಪೇಳ್ವರಳವೆ ॥ (39)
ಕಾಲಕರ್ಮಾಧೀನದಿಂ ಜೀವನೆಂದೆನಿಸಿ ।
ಮೇಲುಕೀಳಾಗಿ ಪುಸಿಸಗ್ಗನರಕಂಗಳ ವಿ ।
ಶಾಲ ಫಲಗಳನುಂಡು ಕಂಡೆಂದಿಗುಂ ದಣಿಯು ಮಗುಳೆಮಗುಳದ ಬಯಸುವಂ ॥
ಶೀಲಮಲ್ಲದುದೆ ನಿಜಮಾಯ್ತು ಭೂತಳದಿ ದು ।
ಶ್ಶೀಲಸಂಸರ್ಗವಿಷಯಗಳನೇಳಗೆಗೊಳಸೆ ।
ಮೇಲೆ ಸ್ವಪ್ನಂ ಪೆರ್ಚೆ ಧಿಟಮಾದ ಮಾಳ್ಕೆಯಿಂ ದುಸ್ಸಂಗ ಕೇಡದಲ್ತೆ ॥ (40)
ಪರವಶತೆವೆತ್ತು ಹಂಕಾರ ಬಲದಿಂ ನಿಜವ ।
ಮರೆದರದು ಕಿಂಕರತೆಯಂತಂತೆ ನಿರ್ಲೇಪ ।
ಪರಬೊಮ್ಮಸ್ವಾಜ್ಞಾನಬಲದಿಂದ ತಾಂ ಸಿಲುಕಿ ಬರಿದೆ ತೊಳಲುವದೆಂಬುದಂ ॥
ಗುರುಮುಖದಲರಿತು ದೃಗ್ದೃಶ್ಯದಿಂದೇರ್ಪಡಿಸ ।
ಲರುಮೆನಿಸಿ ಸುಖದುಃಖವಿಲ್ಲದಾನಂದಕ್ಕೆ ।
ಸುರುಚಿರಾಲಯಮಪ್ಪೆಯೆನಲು ತಾರಾದೇವಿ ಮಗುಳೆ ಬಿನ್ನಪಗೈದಳು ॥ (41)

ಸ್ವಾಮಿನೇಮಿಸಿದರ್ಥ ಮನಕೆ ಬಂದುದುಸುಖದ।
ಸೀಮೆ ಕೈವಶವಾಗಿ ಶೋಕಮೋಹಂ ಪೋಗಿ ।
ಬ್ರಾಮಕತ್ವವನೀಗಿ ನಿಜದರುಹೆ ತಾನಾಗಿ ಬಾಳ್ವಪರಿಯಂ ಪ್ರಿಯದೊಳು ॥
ಸಾಮದಿಂ ದಯಗೈವುದೆನುತ ಬಿನ್ನಪಗೈಯ।
ಲಾಮಹಾಪುರುಷ ವಿಸ್ತರದಿ ದೃಗ್ದೃಶ್ಯಗಳ।
ದಾಮವಮಂ ಕಂಗೊಳಿಸುವಂತೆ ಕರತಕಲಿತಕನ್ನಡಿಯ ಗೈದಿತ್ತನು ॥ (42)

ಇದಿರೊಳಗೆ ತೋರುವ ಘಟಂ ದೃಶಮದ ಕಾಣ್ಬ ।
ಚದುರನೇತ್ರಂಗಳಂ ದೃಕ್ಕುದೃಶ್ಯಂ ನಯನ।
ಮದ ಕಾಣ್ಬ ಮನ ದೃಕ್ಕು ಮನದೃಶ್ಯನಿಟ್ಟಿಸುವ ಬುದ್ಧಿ ದೃಕ್ಕೆನಿಪುದಬಲೆ ॥
ಪದುಳಾ ಬುದ್ಧಿ ದೃಶ್ಯಂ ನಿರೀಕ್ಷಿಪ ವಸ್ತು ।
ವದು ಮೂಲದೃಕ್ಕೆಂದು ತಿಳಿದರಾನಂದ ಸಂ।
ಪದವೆ ನಿನ್ನಾಧೀನ ನಿನಗನ್ಯಮೇನಿಲ್ಲದಂತೆಸವುದಬ್ಜಾಂಬಕೆ। (43)

ಪೇಳದರ್ಥವ ಚಿತ್ತದೊಳ್ ಗೋಪನಂ ಗೈದು ।
ಸೂಳರಿದು ಚಿಂತಿಸಲು ಸುಖದುಃಖನಿಚಯಗಳ್।
ಪಾಳಾಗಿ ಪೋದಪವು ಮೋಹಾದಿಗಳು ನಿನ್ನ ಸೋಂಕಲಮ್ಮವು ಬಾಲಕೆ ॥
ಪೇಳಲಸದಳ ಮರ್ಮವರಿದು ಸಂಕೋಚದಿಂ।
ಕೇಳದಾಕ್ಷಣದಿ ಸಂಸೃತಿ ಪೋಗದಿರದೆಂದು।
ತಾಳಮಾನಸದಿ ನಿತ್ಯಾನಂದಮಯಳೆನಿಸಿ ಸುಖದಲಿಹುದಂಬುಜಾಕ್ಷಿ ॥ (44)

ವಿಧಿಭವಾದಿಗಳಂದ ಕಾಣದೆನ್ನಯಮೂರ್ತಿ ।
ಸುದತಿ ನೀಂ ಗೈದ ಪುಣ್ಯಾಧಿಕ್ಯಫಲದಿಂದ।
ಮೊದಗಿತೆನುತರಿತು ಭಾವಿಸುತಮಿರಲಾನಂದ ಕೈಗೂಡಿ ಬರುವುದೆನುತ ॥
ಸದಯನೊರೆಯಲ್ ತಾನು ಶಾಂತಮಾನಸದಿ ಹೃ।
ತ್ಸದನದೊಳು ರಾಘವನ ದಿವ್ಯಮೂರ್ತಿಯನಿಟ್ಟು।
ಚದುರದಾನಂದ ಚೈತನ್ಯ ಬ್ರಹ್ಮಾನಂದಮಾಂತಿರ್ದಳಚ್ಚರಿಯೊಳು ॥ (45)

ಭಾಮಿನಿಯು ಸಂತಸವನಾಂತುದಂ ಕಂಡಾಗ।
ಸೌಮಿತ್ರಿ ಸುಗ್ರೀವನೊಡನೆಂದ ನಿನಗಿದೇಂ।
ತಾಮಸಂ ಮುಸುಗಿದುದು ಕಾಲವಶಮಂ ಮೀರಿ ಬಾಳ್ದರುಂಟೇ ಜಗದೊಳು ॥
ಈ ಮಹಶ್ಲೋಕಮಂ ಬಿಟ್ಟಂಗದಾದಿಗಳ।
ಸಾಮದಿಂದೊಡಬಡಿಸಿ ಕಪಿಸಂಪ್ರದಾಯಕವ।
ನೇಮದಿಂದೆಸಗವೇಳ್ಕೆಂದು ಬಹುವಿಧದಿಂದ ಕುಸ್ತರಿಸಿದಂ ಮುದದೊಳು ॥ (46)

ರಾಮಾನುಜಂ ಪೇಳ್ದರಾಗ ಸುಗ್ರೀವ ನಿಜ।
ತಾಮಸೀಮತಿಯ ನೆಗ್ಗೊತ್ತಿ ತರುಣಾಂಗದನ।
ಪ್ರೇಮದಿಂದಮರ್ದಪ್ಪಿ ಸಂತೈಸಿ ಸತಿಯರಂ ಕುಸ್ತರಿಸಿ ಮನೆಗೆ ಕಳುಪಿ ॥
ಸಾಮಂತಜನರಿಗಪ್ಪಣೆಕೊಟ್ಟು ಬೇಕಾದ।
ಸಾಮಗ್ರಿಗಳನೆಲ್ಲ ಬೇಗದಿಂ ತರಿಸೆನುತ।
ನೇಮಿಸಿದರಾಕ್ಷಣದೊಳಖಿಳವಸ್ತುಗಳುಮಂ ಸನಿಹದೊಳ್ ತಂದಿಟ್ಟರು ॥ (47)

ತರಣಿಸುತನಣ್ಣನಂ ಸಂತೋಷದಿಂದೆತ್ತಿ।
ಪರಿಮಳಾಂಬುವಿನಿಂದ ಮಜ್ಜನಂ ಗೈಸಿ ಮೇಲಾ।
ತರದ ಪೊದಕೆಗಳುಡಿಸಿ ಭೂಷಣಂಗಳ ತೊಡಿಸಿ ಸಿಬಿಕಾದಿರೋಹಮೆಸಗಿ॥
ಪರಿಪರಿಯು ವಾದ್ಯರವ ಕೋಳಾಹಳಂ ಹರಿ।
ದ್ಭರಿತವಾಗಲು ವಾನರೀಸೇನೆಯೊಡಗೂಡಿ।
ಕರದ್ಯೊದರಖಿಲ ಬಂಧುಗಳು ಸಾವುಂತರಿಂದೊಡಗೂಡಿದುವಮ್ಮಾನದಿ॥ (48)
ಸಿರಿಖಂಡಖಂಡದಿಂ ಸಿಂಗರಿಸಿದರು ಚಿತಿಯೊ।
ಳರಿಸಿ ಪಿತೃಮೇಧ ಪ್ರಕಾರದಿಂ ಸಂಸ್ಕರಿಸಿ।
ಕರದಿಂದುರಸ್ತಾಡನೋನ್ಮುಖದಿ ಕ್ರತುಲಿದಾರ್ಪಿತಗೈದು ಬಳಿಕ ಭರದಿ॥
ತರಳನಂ ಕರವಿಡಿದು ತಟನಿಯೊತ್ತಿಗೆ ನಡೆದು।
ಚರಣಗಳ ನೆನದಾ ಜಳಾಂಜಳಿಗಳಿತ್ತನಾ ಸುಗ್ರೀವ ಶ್ರದ್ಧೆವಿಡಿದು॥ (49)
ತದನಾಂತರದಿ ಬಂದು ತಾರೆಯುಂ ಸಂತೈಸಿ।
ಸದನಕ್ಕೆ ಬೀಳ್ಕೊಟ್ಟು ತನಯನಂ ಪಿಂದಿಟ್ಟು।
ಹೃದಯದನುತಾಪದಿಂ ಸುಗ್ರೀವನೈತಂದ ಸುತ್ತಬರೆ ಪ್ಲವಗವೃಂದ।
ಇದಿರಲೆರಗುವರರಿಯ ನೆಡೆಯುಲ್ಲೈದುವ ಪರಿಯು।
ಕದಬದಗಳೊಂದರಿಯದುದ್ದಂಡ ಚಿಂತೆಯಿಂ।
ಮದವಿಳಿದ ಮತ್ತೇಭದಂತೆ ಮಸ್ತಕಬಾಗಿಬಂದು ಬನದೊತ್ತಿಗಾಗಿ॥ (50
ಪವನಸುತತಾರಜಾಂಬವರೆಲ್ಲ ಸಂತೈಪ।
ವಿವಿಧ ವಾಕ್ಯಗಳೊಂದನಾಲಿಸದೆ ನಡೆಗೊಂಡು।
ತವಕದಿಂ ಸುಗ್ರೀವ ಶ್ರೀರಾಮುಪುರದರಸನಸೌಮಿತ್ರಿಯಿಪ್ಪೆಡೆಯನು॥
ಪವಣಿಂದಮರಸಿ ತನುತಾಪಮಂ ಪರಿಹರಿಸಿ।
ಭವಬಂಧಮಂ ಪರಿದು ಬಾಧಿಸುವ ಚಂಚಲವ।
ಸವರಿ ಕೃತಕೃತ್ಯನಹ ಮುಕುದಾಸೆಯಿಂ ಬೇಗಲೈತಂದ ಹರುಷದಿಂದ॥ (51)

(ಸಂಧಿ 8 ಕ್ಕಂ. ಪದ 349.)

---

## ಒಂಭತ್ತನೆಯ ಸಂಧಿ.

ಸೂಚನೆ॥ ಶರಣಾಗತತ್ರಾಣಬಿರಿದಾಂತ ರಾಘವಂ।
ತರಣಿ ತನಯಂಗೆ ಪಟ್ಟಾಭಿಷೇಕಂಗೈದು।
ತರುಣ ಲಕ್ಷ್ಮಣಗೆ ತತ್ವಾರ್ಥಬೋಧೆಗಳೊರವುತೆಸೆದನಾ ಗಿರಿತಟದೊಳು॥

ಪದ॥ ಹೈಮಗಿರಿಯಣುಗಿ ಕೇಳ್ ಸುಗ್ರೀವ ಶೋಕದಿಂ।
ತಾಮುಸವನಾಂತಿರ್ಪ ಪರಿಯನಿಟ್ಟಿಸುತ ಸೂ।
ತ್ರಾಮುತನಯನ ಬಗೆಯನರಿದು ಪವನಾತ್ಮಭವ ಮನದೊಳಾಲೋಚಿಸುತಲಿ॥
ತಾಮರಸನಯನನೆಡೆಗೈತಂದು ರಾಜಕುಲ।
ಸೋಮವಿಜ್ಞಾಪನೆಯನವಧರಿಸಿ ಮಿತ್ರನಲ।
ಪ್ರೇಮಗೊಳಸಲ್ವೇಳ್ಕುಮೆನೆ ಹರುಷದಿಂ ರಾಮನಸುನಗುತಲಿಂತೆಂದನು॥ (1)

ಕಂದ ತಂದೆಯು ನೆನೆದು ಕಂದಿಕುಂದುತ ದುಃಖ।
ದಿಂದ ಮಂದೀಭವಿಸಿ ಸುಕುಮಾರತನುತಾಪ।
ಮೊಂದಿರುವದಿಕ್ಷ್ವಸುತ ಸುಮ್ಮನಿರಲನುಚಿತಂ ಸೂರ್ಯಸುತ ಪ್ರೇಮದಿಂದ ॥
ಬಂದಪ್ಪಿ ಮೈದಡಹಿ ಬಾಷ್ಪಂಗಳಂ ತೊಡೆದು।
ಛಂದದಿಂ ಕುಸ್ತರಿಸಿ ಹರುಷಗೊಳಗುತಮಿವರ।
ಮುಂದಿಟ್ಟು ರಾಜ್ಯಮಂ ಪರಿಪಾಲನಂಗೈದು ಸುಖವಪಡೆ ಕಪಿಕುಲೇಶ ॥ (2)

ಅಂಗದಕುಮಾರ ಮಾತಂಗಸಮಬಲ ದೇವ।
ಪುಂಗವನ ತನಯಗಿಂದಧಿಕಸಾಹಸ ಬಾಲ।
ಮುಂಗಡೆಯು ಲೀಲೆಯಂ ನೋಳ್ಪ ಪುಣ್ಯಂ ತೊಲಗಿ ಪೋಗುವವಸರದಿ ವಾಲಿ ॥
ಕಂಗಳೊಳು ಜಲಗರೆವುತೆನ್ನನಂದನನು ಭವ।
ದಂಗಭವನೆಂದರಿತು ಸಲಹಬೇಕೆನುತಂ ಪ್ಲ।
ವಂಗಪತಿಯಾಚನಂ ಗೈದರಾನೊಡಂಬಟ್ಟು ಪಾಲನಂ ಗೈವೆನೆನುತಾ ॥ (3)

ಬಿಸಿಲಿನಿಂ ಮಾಲತೀಕುಸುಮ ಕಂದಿದ ತೆರದಿ।
ಪಸುಗೂಸು ಚಿಂತೆಯಿಂ ಬಾಡಿದಾನನದಿಂದ।
ಮೆಸವನಂ ಕಂಡೆಲ್ಲ ಮನಕಾದ ದುಸ್ಥಿತಿಯು ಪೇಳಲಳವೆಂತಪ್ಪುದು ॥
ವಸುಮತೀಯರಸನಸುವಳಿದುದಂ ದಶಕಂಠ।
ರಸೆಯಸುತೆಯೊಯ್ದುದಂ ರಾಜ್ಯಹತ್ತಿಯಾದುದೀ।
ಪಸುಳೆಯಂ ನೋಳ್ಪ ಕ್ಲೇಶದೊಳೊಂದು ಭಾಗಮಂ ಪೋಲದಾಯ್ತೆನ್ನ ಮನಕೆ ॥

ಎನಿತು ಸಂಕಟಗಳೆನಗಾದರಪರಾಧಗಳ।
ನೆನಿತನೆಸಗಿದರಾನು ಸೈರಿಸುವೆನೆನ್ನ ಸರಿ।
ಗಿನಿತು ದುಃಖಂ ತೋರಲಾರಿಂದಮಪಕಾರ ಜನಿಸಲಾಂ ಸಮ್ಮತಿಸೆನು ॥
ಧನಕನಕದಾಯಾದ್ಯಜೀವನಂ ಶರಣಜನ।
ರೆನಗೆನುತ ಕಾದಿರ್ಪೆನೆಂದರಿತು ಬಂಧುಜನ।
ರನುಮತಿಸಲಾ ವಾಲಿತನಯನಂ ಸಂತೈಸುತೆಮ್ಮ ಹರ್ಷಂಗೊಳಪುದು ॥ (5)

ನುಡಿದೆರಡನಾಡೆನೆನ್ನವರೆಡರುಗಳ ನೋಡೆ।
ಪಿಡಿದಮತವನ್ನು ಬಿಡೆ ಪಿಂತೆಸವರ್ಗೆ ಕೂಡೆ।
ನಡೆನುಡಿಯನೋಡೆ ಕೈವಿಡಿದ ಬಳಕಾರಾದರೆನ್ನ ಜೀವನಮೊಂದಿಹೆ ॥
ಪೊಡವಿಯೊಳಗೆನ್ನ ಭಕ್ತರಿಗೆಸಗಿದುಪಕಾರ।
ಮೊಡನೆನಗೆ ಮತ್ತವರಿಗಾದ ಸಂತಾಪಗಳು।
ತುದುರುವವು ಪಿಡಿದೆನ್ನ ಶರಣಜೀವನಮೆನಗೆ ಜೀವನಂಕಪಿಲಲಾಮ ॥ (6)

ಅಂಗದನ ಕರವಿಡಿವುತನುಮಾನವನ್ನುಳಿದು।
ಮಂಗಳಸ್ನಾನಮಂ ಗೈದು ಭೂಷಾಂಬರವ।
ಸಿಂಗರಿಸಿ ಮಣಿಮಕುಟಕುಂಡಲಾಂಗದಮುಖ್ಯಭೂಷಣಮಲಂಕರಿಸುತ ॥
ಭೃಂಗಾರುಮಯಪೀಠಮಧ್ಯದೊಳು ಕುಳ್ಳಿರ್ದ।
ರಂಗನೆಯರೆಡಬಲದಿ ಚಾಮರವ ಪಿಡಿದೆಸೆಯ।
ತಿಂಗಳುದಯದೊಳೆಸೆವ ಬೆಳ್ಗೊಡೆಯು ನೆಳಲೊಳಗೆ ಕಪಿರಾಜಪದದೊಳರಲು ॥ (7)

ನೋಡಿ ಸಂತಸಗೊಂಬೆ ಮನವೇಣಿಕೆನಿಂದೆ ಕೈ।
ಗೂಡಿ ಪಿರಿದಾನಂದಗೊಳುವೆ ಬೇಳ್ದುದನು ಪ್ರಿಯು।
ಗೂಡಿವಳ್ಪುದೆನುತ್ತ ಕರಣಾಳುಗಳ ದೇವ ಬೆಸಸೆ ಕಪಿವರರೆಲ್ಲರು॥
ಮಾಡುವಾನಂದದೊಳಗಾಡಿ ಹರ್ಷದಳಿ ನಲಿ।
ದಾಡಿ ಪರಿಪರಿಯಿಂದ ಪಾಡಿ ಪೊಗಳುತ್ತಲಿ ಕುಣಿ।
ದಾಡಿ ಬ್ರಹ್ಮಾನಂದದಿಂ ಭುಲ್ಲವಿಸಿದೇನದನೆಂಬೆ ನಚ್ಚರಿಯನು॥ (8)
ಚಿತ್ತದನುರಾಗದಿಂದೀ ಪರಿಯು ಬೇಳ್ದ ರ।
ಘೋತ್ತಮನ ಪದಕೆರಗಿ ವಿಜ್ಞಾಪನಂಗೈದ।
ಮತ್ತೆ ಬ್ರಹ್ಮಾಂಡಂಗಳಖಿಳ ಭೂತಾವಾಸ ಭಕ್ತರಿಂಗೀವೆ ಲೇಸ।
ಚಿತ್ತಜೋಪಮ ಭವಚ್ಚರಣದಾಧೀನವಿೂ।
ಪತ್ತನಂ ಸತಿಕೋಶರಾಷ್ಟ್ರದುರ್ಗಾದಿ ಸಂ।
ಪತ್ತುಮದ್ದೇಹಂಗಳೆಲ್ಲಮಿದನರಿವುದೈ ದಿವ್ಯಮಾನಸದೊಳನಘ॥ (9)
ಮಾನಧನ ಜೀವನದೊಳೆಲ್ಲರುಂ ಪಾದದಾ।
ಧೀನಮಾಗಿರ್ದ ಬಳಕನುವೋದದಿಂದೈದಿ।
ದಾನಂದದಿಂದ ಪಟ್ಟಾಭಿಷೇಕವನಾಳ್ದು ಸಿಂಹಾಸನದೊಳೊಪ್ಪಿರೆ॥
ಆನಂಗದಂತಾರೆರುಮೆಯರೊಡಗೂಡಿ ಸು।
ಮ್ಮಾನದಿಂ ಚರಣದೊಳಗಿದಿ ಕೃತಿಯಬ್ಪೆವೈ।
ಭಾನುಕುಲತಿಲಕ ಸೇವಕನ ಬಿನ್ನಪವನವಧರಿಸಿ ಪಾಲಿಪುದೆಂದನು॥ (10)
ನೀನೆಗತಿಯೆಂದೆರಗಿ ಮರೆಯೊಕ್ಕ ಮನುಜರಿ।
ಸ್ನೇನೆನ ಬೇಡಿದುದನಿತ್ತು ಮನ್ನಿಪ ಬಂದ।
ನಾನಾವಿಧದಿ ಶ್ರುತಿಗಳೊರಲುತಿವೆ ದೇವ ತಿಳದಾನುಡಿಯು ಸತ್ಯಮೆನಿಸಿ॥
ಪಾನರನ ನುಡಿಯು ಪತಿಕರಿಸಿ ಬಿಜಯಂಗೈವು।
ದೀನಗರ ವೈಭವವ ನಿಟ್ಟಿಸುತಮೆನ್ನ ಸ।
ನ್ಮಾನಗೊಳುಸುವದೆಂದು ಪದಗಳಂ ಪಿಡಿದಂದು ರವಿತನಯ ಬಿನ್ನವಿಸಿದಂ॥ (11)
ಭಾನುನಂದನನ ಬಿನ್ನಹವನಾಲಿಸಿ ರಾಮ।
ನಾನಂದದಿಂದಮಿಂತೆಂದ ನೇಹಿತರೊಡೆಯ।
ನೀನೊರೆದುದುಚಿತ ಸಂದೆಗಮಿಲ್ಲ ನಿನ್ನೊಳನಿಸೆರವಿಲ್ಲ ಕೇಳು ಸೊಲ್ಲ॥
ಮಾನವ್ರೋತ್ತಮಪಿತನ ನುಡಿಯಿಂದಮೂರುಳದು।
ಕಾನನವ ಪೊಕ್ಕು ಪದಿನಾಲ್ಕು ಸಂವತ್ಸರಗ।
ಳೇನೊಂದು ವಸ್ತುವಂ ಬಯಸದೆ ಮುಮುಕ್ಷು ಜನವೃತ್ತಿಯಾಂತೈತಂದೆವು॥ (12)
ಪೊಡವೀಶನಿದಿರಿನಲಿ ಪ್ರತಿಜ್ಞೆಗೈದೈತಂದು।
ನಡುವೆ ಭೋಗಾಪೇಕ್ಷೆ ಗೈದರಾರೊಪ್ಪುವರು।
ನುಡಿಪುಸಿಯು ಪೊದ್ದಲರಿದೆಂಬುದಂ ನೀಂ ಬಲ್ಲೆ ತ್ರೈಲೋಕ್ಯರುಂ ಬಲ್ಲರು॥
ಕಡುಗಲಿಯೆ ಮೌಖ್ಯಮಂ ಬಿಟ್ಟು ಕಪಿರಾಜ್ಯಮಂ।
ಸಡಗರದೊಳಾಳುತ್ತಲಿ ಮಡದಿಮಸೆಮನವಾರ್ತೆ।
ಯೊಡನಿರಲ್ಕಾಂ ನೋಡಿ ಸಂತಸಂಗೊಳುವೆ ನುಡಿ ಸಫಲಮೆನೆ ರಾಜಿಸುವುದು॥ (13)

ತರಣಿಶಶಿತಾರೆಗಳು ಮೇರುಮಂದರಶರಧಿ।
ಮರಿಯಾದೆ ದಪ್ಪಿದರೆ ಭಾಷೆಗೋಣಿಯಮುಂಟೆ।
ಕರುಣದಿಂದೆನಗಿತ್ತನುಡಿ ಸಫಲವಾಯಿತರಸ ರಾಜ್ಯಸಿರಿ ಕೈಸಾರಿತು॥
ತರಳನಂಗದಗೆ ಪಟ್ಟವ ರಚಿಸಿ ಸಂಭ್ರಮದಿ।
ಚರಣಸನ್ನಿಧಿಯಲಾನಿರೆ ಪರಮಪದವೆನಗೆ॥
ದೊರೆದುದಂದರಿದಿರ್ದನಿದಕಪ್ಪಣೆಯನಿತ್ತು ಸಲಹೆನಲು ರಾಮ ನುಡಿದಂ॥ (14)

ಸಖನೆ ನೀಂ ಬೇಳದುದು ಸಹಜ ಸಂಶಯವಲ್ಲ।
ವಕಲಂಕನಾವೆಡೆಯೊಳಿರ್ದರೆನ್ನಲ್ಲಿರ್ದ।
ಪ್ರಕೃತಿಯಲ್ಲವೆ ಮನಸ್ಸಂಗಮು ಸುಸಂಗಮಂ ತನುಸಂಗನನಸಂಗವು॥
ನಿಖಿಲಕಾರ್ಯೋಪರಮ ನಾಲ್ಕುತಿಂಗಳು ಘನ।
ಪ್ರಕರದೆಡೆಯಹಬವಿದರೊಳು ಸುಮ್ಮನಿರ್ದೇನು।
ರಕುತಿ ಪಟ್ಟಣಕೈದಿ ಸರ್ವಜನ ಸಂತೋಷಗೊಳುವಂತೆ ಸಾತ್ವಿಕದೊಳು॥ (15)

ರಾಜಾಧಿಕಾರವಂ ವಹಿಸಿ ತರುಣಗೆ ಯೌವ।
ರಾಜಪಟ್ಟವನಿತ್ತು ಪ್ರಕೃತಿರಂಜನೆ ಗೈದು।
ಮೂಜಗಂ ಮೆಚ್ಚುವ್ರೊಲು ಪರಿಪಾಲನಂ ಗೈದು ವರುಷಾವಸಾನ ಗೈದು॥
ವಾಜಿಯಿಂ ದಶಗಳನ ವಧಿಸುವಡೆ ನಿನ್ನ ಕಪಿ।
ರಾಜಿಯನೊಡಗೊಂಡು ಬರ್ಪುದೆಮಗಿಂದಧಿಕ।
ಮಿಾ ಜನೇಶ್ವರ ಸುಮಿತ್ರಾತ್ಮಭವನೈತಪ್ಪ ಪಟ್ಟಾಭಿಷೇಕ ಗೈಯೆ॥ (16)

ಒಪ್ಪುಗೊಳವೇಳ್ಕೆಂಬ ವಾಣಿಯಿಂದೊಡಬಟ್ಟು।
ತಪ್ಪದೈತಂದೆರಗೆ ಸೌಮಿತ್ರಿಯೊಡಗೊಳ್ಳು।
ತಪ್ಪಣೆಯನಾಂತು ನಿಜನಗರಿಗೈದಿದ ಸೂರ್ಯಸುತನತಿಪ್ರೇಮದಿಂದ॥
ಅಪ್ಪಾರ ಕಪಿಸೇನೆಯಡಿಗಡಿಗೆ ಪೊಗಳುತಲಿ।
ಕುಪ್ಪಳಿಸುತೆಣ್ದೆಸೆಯ ಕೂಗಿನಿಂ ಹೊಳೆಚುತ್ತ।
ಬಪ್ಪನ್ನ ಸುಗ್ರಿವನೊಳಪೊಕ್ಕ ನಿಜಪುರದ್ವಾರವಂ ವೇಗದಿಂದ॥ (17)

ದ್ವಾರದೇಶದಲಿ ಕಪಿವೀರರಡಿಗೆರಗತಾ।
ದಾರತರದಿಂದ ಮುಪಚರಿಸುತರ ಮನೆಯೆಡೆಗೆ।
ಸೂರಸುತನೈತರಲ್ಕಖಿಲ ಪ್ರಕೃತಿಗಳೆಲ್ಲ ಸಂತೋಷದಿಂದೆರಗಲು॥
ಕಾರುಣ್ಯದಿಂದವರ ತಾರತಮ್ಯಗಳರಿತ।
ಪೌರವಚನಗಳಿಂದ ಸಂತೈಸಿ ನಿಜಗೃಹ।
ದ್ವಾರದಿಂದೊಳಪೊಕ್ಕು ಶುದ್ಧಾಂತಮನ್ನೋಟ ಶುಭಮುಹೂರ್ತದಲಿ ಬರಲು॥ (18)

ಪವನಸುತಗಜಗವಯಗಂಧಮಾಧನಮೈಂದ।
ದ್ವಿವಿಧಂಗವಾಕ್ಷನಳಜಾಂಬವಾದಿಗಳೆಲ್ಲ।
ರವಿರಳದ ಹರ್ಷದಿಂದಭಿಷೇಕವಂ ಗೈಯಲತಿವೇಗದಾಲೋಚಿಸಿ॥
ವಿವಿದೌಷದಂಗಳಂ ಮತ್ತೆ ಪ್ರತ್ಯಂಕೂರ।
ನವರತ್ನ ಸ್ವೇತಾತಪತ್ರ ಸ್ವೇತವ್ಯಜನ।
ನವಗಂಧಮಾಲ್ಯಪದಿದು ಜವ್ವನೆಯರುಂ ಪಾಡುತಂ ಸ್ವರ್ಣಮಯದ॥ (19)

ಕನಕ ಮಂತ್ರಾಕ್ಷತೆಯು ಮುಂತಾದ ಸಾಮಗ್ರಿ।
ಯನು ತಂದು ಚತುರಾಬ್ಧಿಯುದಕಕಂಗಾದಿ ಜಲ।
ವನಜದರ್ಭಾದಿಗಳ ವೈಯಾಘ್ರಚರ್ಮ ಶೃಂಗವಶೃಂಗ ಮೇಲಾದವಂ॥
ಅನುಗೈದು ಕನಕಪೀಠದಿ ಲೋಕಬಾಂಧವನ।
ತನಯನಂ ಕುಳ್ಳಿರಿಸಿ ಶಾಸ್ತ್ರಾನುಮತ ವಿಡಿದು।
ಘನವಾಹನನಂಗೆ ವಸುಗಳು ಮಂತ್ರದಭಿಷೇಕಗೈವವೋಲೆಸಗಿದರು ಮುದದಿ॥ (20)

ವಿರಚಿಸಲು ಪಟ್ಟಾಭಿಷೇಕವಂ ಸುಗ್ರೀವ।
ಹರುಷದಿಂದಂಗದಗೆ ಯುವರಾಜಪಟ್ಟವಂ।
ಕರದಿತ್ತರಾಕ್ಷಣಂ ನೆರದಖಿಲ ಜನರೆಲ್ಲ ಪೊಗಳ್ದರ್ಸುಗ್ರೀವನ॥
ತರುಣಿಯರು ಬೀಸುತಿಹ ಚಾಮರದ್ವಯದಿಂದ।
ನೆರಪಿರುವ ಬೆಳ್ಗೊಡೆಯು ನೆರೆದ ಕಪಿ ಸಂತತಿಯು।
ಸುರುಚಿರದ ಸ್ತುತಿಗಳಂ ಸುಗ್ರೀವಸುರಪನಂತೆಸದ ಪಟ್ಟವಣಿಯೊಳಗೆ॥ (21)

ಆದುದುತ್ಸವವಮಿತವಮರೇಂದ್ರನಂದದಿಂ।
ಮೇದಿನೀಪತಿಯೆನಿಸಿ ಸುಗ್ರೀವ ಭಕ್ತಿಯಿಂ।
ಪಾದಂಗಳಂ ಪಿಡಿದು ಲಕ್ಷ್ಮಣನ ಪೂಜಿಸಿದ ಪರದೇವತೆಯೆನುತ್ತಲಿ॥
ಮೋದಗೊಂಡಾತನುಪಚರಣೆಯಿಂ ಸೌಮಿತ್ರಿ।
ಯಾ ದಯಾಂಬುಧಿರಾಮನೆಡೆಗೈದೆ ಮನವೆರಸಿ।
ಸಾದರದಿ ಬೀಳ್ಕೊಂಡು ಸತ್ವರದೊಳೈತಂದು ಕಂಡನಗ್ರಜಪದವನು॥ (22)

ಚರಣಂಗಳಗೆ ನಮಿಸಿ ನಗರಿಗೈದಿದಪರಿಯು।
ಹರುಷದಿಂ ಬಿತ್ತರಿಸಿ ಕೇಳ ಸಂಭ್ರಮದಿಂದ।
ಪರಮಪೂರುಷನೆಂದ ಸೌಮಿತ್ರಿ ಕೇಳೆಮಗೆ ಸಾಮ್ರಾಜ್ಯಸಂಪತ್ತಿಯೂ॥
ದೊರತುದಕೆ ಪತ್ರುಮುಡಿಯಾನಂದವಾಯ್ತು ಸುಖ।
ನಿರುಗೆ ಸುಖಕರವಾದುದೆಮಗೆ ಶ್ರೇಯಸ್ಕರಂ।
ಬಳಿದುದಿನ್ನೇನೆಂಬೆಯಿತ್ತ ಭಾಷೆಯು ಪೂರ್ತಿವಾನಸೋಲ್ಲಾಸಕರವಂ॥ (23)

ಭಗವತ್ಕಟಾಕ್ಷದಿಂದಾದುದೆಮಗಭ್ಯುದಯು।
ಜಗತಿಯೊಳಗೆಂದೊರೆದು ಮುಂಬರಿದು ಪುಟ್ಟಿಬಹ।
ಮುಗಿಲಬಳಗವಕಂಡು ಪ್ರಸ್ರವಣ ಪರ್ವತದೊಳೊಂದು ತಾಣದಿರವ್ಯಾದಿ॥
ಸೊಗಸಿರುವ ಗುಹೆಯೊಳಗೆ ಸುಖದಿಂದ ಮಂಡಿಸಿರೆ।
ಮಿಗಶೀತಳೋಪಚಾರಗಳಿಂದ ಸತ್ಕರಿಸಿ।
ಮುಗಿದು ಕರಗಳ ನಮಿಸಿ ಲಕ್ಷ್ಮಣಂ ಭಕ್ತಿಯಿಂ ನುತಿಸಿ ಬಿನ್ನಪಗೈದನು॥ (24)

ಪುಸಿಯು ಪೊದ್ದದ ನಿಜಂ ಪಟವನುಳದಿಹ ಚಿತ್ರ।
ವಿಸದಕಲುಷವನುಳ್ದ ಬಾನೆಡೆಯು ಸಂಭ್ರಮದೊ।
ಳೆಸೆವ ನಿಜಮಂ ಬೆರದು ಸರ್ವದೊಳಹೊರಗೆಲ್ಲ ಪರಿಪೂರ್ಣನೆನಿಸಿ ಮೆರೆದು॥
ಉಸುರಬಾರದ ಮಂತ್ರ ಊಹೆಗಬ್ಬಿದ ತಂತ್ರ।
ಮಿಸುಕಲಾರದ ಜನಂ ಬೆಸನ ಬಾರದ ಹಸಂ।
ಪೊಸತೆನಿಪ ಪರತರಾನಂದ ಪಾವನ ನಮೋಯೆಂದ ದಶರಥನ ಕಂದ॥ (25)

ಜಯ ನಮೋ ಪರಮಪುರುಷ ಸಚ್ಚಿದಾನಂದ ।
ಜಯ ನಮೋ ಪ್ರಕೃತಿರೂಪನೆ ಕಾರ್ಯಗಳ ವೃಂದ ।
ಜಯ ನಮೋ ಗುರುಶಿಷ್ಯ ಪಿತೃ ಮಾತೃ ದಿಗ್ದ್ರವ್ಯರೂಪ ನಿರ್ಲೇಪ ನಿರಘಾ ॥
ಜಯ ಕನಸುಸುಪ್ತಿಜಾಗರಗಳಾಕೃತಿಯಹಾಂತ ।
ಜಯ ಜಗತ್ಪ್ರಿಯ ಜನಾರ್ದನ ಜೀವನಾನಂತ ।
ಜಯತು ನಿರ್ವಾಣಯ ಪದಾಯದಾಮರ ಮಹೇಶಾನ ರಘುಕುಲೇಶಾನ ಜಯತು ॥ (26)
ಪುಸಿಯಹಾದ ಲೋಕವಿದು ಹಸನಾಗಿ ದಿಟದಂತೆ ।
ರಸೆಜಲಾನಲನನಿಲನಿಭದಾಕೃತಿಗಳಾಂತು ।
ಪೊಸತೆನಿಸಿತೋಱಿ ಭ್ರಮೆಗೊಳಿಸಿ ಜೀವರನೆಲ್ಲ ಸುಖದುಃಖಕೊಳಗುವಮಾಡಿ ।
ಬಸವಳಿಪುದೇನಯ್ಯ ಪೋಗಿ ಬರುತಿಹ ವಾಯು ।
ಗಸಣಿಯಂ ಪಱಿಯಲೆನಗೇನುಪಾಯಮಂ ಪೇಳ ।
ಸಸಿನಿರ್ಪರೆಸಗಪೇಳ್ಕೆಂದು ವಂದನೆಗೈದ ಲಕ್ಷ್ಮಣನೊಳಿಂತೆಂದನು ॥ (27)
ಜನಿಸಿದರೆ ಮತ್ತೊಂದಿಗಾದರಂ ಮರಣ ಸಂ ।
ಜನಿಸಲಂದವರೊಂದುಪಾಯಮಂ ಘಳಿಸ ಬೇ ।
ಳ್ಕನಿತು ಸಮನಿಸದಿರಲು ಪೋದಬಳಿಕಾದರುಂ ಮಱಳಿಬಾರದತೆಱದೊಳು ॥
ಘನತರೋಪಾಯಗಳ ಸಲಿಸಲೆಳಸುವ ಮನುಜ ।
ರನುಜ ಕೇಳ್ವುದಪೂರ್ವವಾದುದೀ ಮತಿ ನಿನಗೆ ।
ಜನಿಸಿದಾಕ್ಷಣವೆ ಕೃತಿಯಹುದೆ ಮತ್ತಾಮಱಿಯ ಸಾವಧಾನದೊಳಾಲಿಸು ॥ (28)
ತಿಳಿದು ತಿಳಿವನ್ನೊರೆವ ಪಳೆಮಂತ್ರಗಳಿಗೆಲ್ಲ ।
ಬಳಸಲಿಲ್ಲವು ಪುರಾಣೇತಿಹಾಸಂಗಳಂ ।
ತೊಳಲಲಿಲ್ಲವು ಸಾಂಖ್ಯಯೋಗ ಸಿದ್ಧಾಂತಗಳ ಪಂಕ್ತಿಗಳನರಸಿಬಱಸಿ ॥
ಅಳವುನದೊಳಡಿಗಡಿಗೆ ಕುಗ್ಗಿ ತಗ್ಗದೆ ನಿಜವ ।
ಕಳೆಯೊಳಗೆ ಕಳೆಯನಿಸಿ ಕಳೆದಖಿಳ ಕರ್ಮಗಳ ।
ಸುಲಭದಿಂ ಸುಖದ ಸುಗ್ಗಿಯ ಕಾಣ್ಬ ಮಾರ್ಗಮಂ ಸೂಚಿಸುವೆ ತತ್ಪ್ರವಣನಾಗ ॥ (29)
ಇವನಾವನೆಂಬ ಗೋಪ್ಯದೊಳಿರುತ ಭಾವಿಸುವ ।
ಮುದದೊಳಭ್ಯಾಸಿಸುವನವನಿಗಾನಂದ ಸಂ ।
ಪದವು ಹಸ್ತಾಮಳಕವಾಗಿ ಸಾಯುಜ್ಯಮಂ ಪಡೆವನಿದು ಸಿದ್ಧಮೆಂದು ॥
ಹೃದಯದೊಳ್ತಳೆಯೆನುತ ಶ್ರೀರಾಮಪುರವರನ ।
ನಧಿಕ ಕೃಪೆಯಿಂದ ಲಕ್ಷ್ಮಣಗೆ ಬೋಧಿಸಿದುದಂ ।
ಮೃದುಪದನ್ಯಾಸದಿಂ ಮುಂದೆ ಪೇಳ್ದಪೆನತಿವಿಲಾಸದಿಂ ಭಾಸದಿಂದೆ ॥ (30)

ಸಂಧಿ 9 ಕ್ಕಂ ಪದ 379 ॥

---

# ಹತ್ತನೆಯ ಸಂಧಿ.

ಸೂಚನೆ ॥ ನಿರತಿಶಯದಾನಂದಕರ ತತ್ವಗೋಪ್ಯವಂ।
ಕರುಣದಿಂದುಪದೇಶ ಗೈದಾತ್ಮಸಾಮ್ರಾಜ್ಯ।
ನಿರಿಗೆಗೈದಂ ರಾಮಚಂದ್ರ ಸ್ವಾಮಿ ತ್ರಿಯಂ ಸಕಲೋಪಕಾರವೆನಲು ॥

ಪದ॥ ತನಯ ಕೇಳ್ ಗುರುಪುತ್ರನೆನಿಪರಹಿತಾಹಿತಗ।
ಳನುವ ಚಿಂತನೆಗೈದು ಮನವ ಸಂತೈಸುತಂ।
ನಿನಗೆ ತೋರುವವಹಿತ ತೋರದಿಹ ನೀನೆ ಹಿತನೆಂಬುದಂ ಪದುಳಗೈದು ॥
ಜನನಮರಣಾದಿ ಕೋಟಲೆಗಳಂ ಪರಿಹರಿಸಿ।
ಚಿನುಮಯಾನಂದ ನೀನಾಗಿ ಸುಖದಿಂದಿರ್ಪು।
ದೆನುತ ಬೋಧಿಸಿ ಮಗುಳೆ ಚಿತ್ತವೃತ್ತಿನಿರೋಧಮಂ ಪೇಳ್ದನಾಗಳಗಜೆ ॥ (1)

ಕರ್ಮಮಾರ್ಗಂಗಳಂ ಕಳದಿಟ್ಟು ನೀಂ ಪರ।
ಬ್ರಹ್ಮನಂ ಜಾನಿಸಲು ಬ್ರಹ್ಮನಂತಹೆಯೆನುತ।
ನಿರ್ಮಲದ ಶ್ರುತಿಜಾಲ ಬ್ರಹ್ಮವಿದ್ಬ್ರಹ್ಮೈವಭವತಿಯೆಂದೊರೆಯುತಿಹುದೈ ॥
ಮರ್ಮವರಿದಾತ್ಮನೆಂದರಿದವಾತುರದಿಂದ।
ದುರ್ಮನಸ್ಸಿನ ಮೋಹಶೋಕಂಗಳಳ್ದೆನುತ।
ಧರ್ಮಯಿಂ ವೇದಸಾರುವುದಾತ್ಮವಿತ್ ಶೋಕವಂತರಿಪನೆನುತಮಣುಗ ॥ (2)

ಬಡಮನವ ನೀಂ ಮಾಡದೇಕಾಂತದೊಳು ಕುಳತು।
ಬಿಡದೆ ಸಿದ್ಧಾಸನವ ಬಲಿದು ಷಣ್ಮುಖಿಯನುಂ।
ಪಿಡಿದು ಮನಮರುತರಂ ದೃಷ್ಟಿಯೊಳಗೊಂದೆನಿಸಿ ಜಾತವೇದಸನೆಡೆಯೊಳು ॥
ತೊಡರಿರುವ ಮನಮರುನ್ನೇತ್ರಂಗಳಂ ಚದರ।
ಗೊಡದೆ ಹುರಿಗೂಡಿಸುತ ನಡುಕಗೊಳ್ಳದೆ ಚಲಿಸು।
ತೆಡಬಲಕೆ ಪೋಗಗೊಡದೆ ಶ್ರದ್ಧಾಸಮೃದ್ಧಿಯಿಂದಲ್ಲಿ ನಿಟ್ಟಿಸುವುದಣುಗ ॥ (3)

ನೋಡುತಿರೆ ಖದ್ಯೋತಮದರಿಂದೆ ಕಿರಿವೆಳಗು।
ಕೂಡೆ ಜಲಬಿಂಬೋಪಮಿತ ಭಾನುಬಿಂಬಮಾ।
ನಾಡೊಳಗೆ ಶಶಿರೇಖೆಗಳು ತೋರ್ಪವೈಸೆ ಶೃಂಗಾಟಕದ ಮಧ್ಯದೊಳಗೆ ॥
ಖೋಡಿಯಲ್ಲದ ದೀಪಕಳಿಕೆ ಕಂಗೆಸೆವುದದು।
ಕೂಡಿದಂದದಿ ನಿಲಲು ಪೈಮರದು ಕರಣದೆಡೆ।
ಯಾಡದಾತ್ಮಾನಂದ ಪೈದೋರಿ ಬರ್ಪುದಾಸ್ತಿಕ್ಯಮತಿ ಸಂಜನಿಪುದು ॥ (4)

ಶ್ರುತಿಯ ರಂಧ್ರಗಳೆರಡು ನಾಸಾವಿವರಮೆರಡು।
ಜತೆಯಾದ ನೆಲ ಚೆತುಶೃಂಗಪೀಠಮೆನುತ್ತ।
ಮತಿಶಯದ ಶೃಂಗಾಟಕದ ಪೆಸರನಿಟ್ಟಾತ್ಮವಿದರು ಕರೆವರು ಬಾಲಕ ॥
ಮತಿಯಾಳೆರಿ ಸಸಿಯುಮು ನೆಯುನಲಿದಾನಾಟಿ ಸಂ।
ತತ ಗಂಗೆ ರವಿಯು ಪಿಂಗಳೆಯು ತನ್ಮಧ್ಯ ಭಾ।
ರತಿಯಗ್ನಿಯೆಸಲಾ ಸುಷುಮ್ನೆಯಾ ತಾಣಕಂ ಪೆಸರೈ ತ್ರಿಕೂಟವೆನುತ ॥ (5)

ಶೃಂಗಾಟಕಾಗ್ರದೊಳು ಸಿಥಿಲವಾಗದೆನಿಂದು ।
ಬಂಗಾರದಂತೆಸೆವ ದೀಪಕುಡಿವಂದೈದೆ ।
ಮುಂಗಡೆಯು ಪಾಲೊರ್ದ್ವಗೋಲರ್ಕಟ ಪೀಠದೊಳಗಧಿಕಧಿಕಕಾರಾಕೃತಿಯೊಳ್ ॥
ಕಂಗೊಳಪುದಲ್ಲಿಂದ ಮುಂದೆಸೆವುದತಿಶಯದ ।
ಮುಂಗಾರಮೇಘನಿಭಕಳ್ತಲೆ ತ್ರಿಕೂಟಪಥ ।
ಕಂಗೆಸೆಯುವಂತೆ ಮುಚ್ಚಿದ ಕುಂಡಲಿಯು ಬಿಡೆಯು ಕಾಂತಿಯೊಂದರಿವುದಣುಗ ॥ (6)
ಜಾನಿಪರಿಗೆಲ್ಲ ದುಮ್ಮಾನವನುಮಾನಗಳ ।
ಪೂನಿಸುವ ಕಾರಣಮುವೆಂದರಿದು ಯೆಡೆವಿಡದ ।
ಮಾನಮತಿಯಿಂ ಪಿಡಿದು ನೋಡುತಿರಲೊಂದೊಂದು ಶಬ್ದಂಗಳುದಿಸಿಬಹವು ॥
ಯೇನೆಂಬೆ ಮೊದಲು ಚಿಣಿಚಿಣಿಯೆನುತ್ತೆರಡು ।
ಸಾನಂದ ಘಂಟೆಯುಲಿ ಮೂರನೆಯುದಬ್ಜರವ ।
ವಾ ನಾಲ್ಕನೆಯುದೈದನೆಯುದು ತಾಳಂತಂತ್ರಿಯಾರನೆಯುಸವನಮುದಣುಗ ॥ (7)

ಭೇರೀರವಂ ಸಪ್ತಮುದರಿಂ ಮೃದಂಗರವ ।
ತೋರುವದದೆಂಟನೆಯುದೊಂಭತ್ತನೆಯದೆ ಪಿಕ ।
ದಾರವಂ ಕೇಳ್ಪಡುವದನಿತ್ತರೊಳ್ ಗರ್ಜಿತಂ ಘನದಿ ಸಂಜನಿಪುದಣುಗ ॥
ಆ ರಾವದತಿಶಯವ ನೋಡುತಿರಲಾಪನಿಯು ।
ತೋರಲೆನಿಸಿತು ಮೊಳಗಿನೊಳು ಮಿಂಚು ಸಂಚರಿಸಿ ।
ತೋರಿಯಡೆಗುವಂದದಿಂ ವಿಚಿಗಿಚ್ಚ್ಯಯಾಸ್ಪದದಿ ಕಂಗೊಳಸುತಿಹುದು ತನಯ ॥ (8)
ಮಿಂಚಿನವಲಂ ಬಿಸಿರಲಡಿಗಡಿಗೆ ಕಾಂತಿ ಪ್ರ ।
ಪಂಚ ವಶಮಹುವದರ ಬೆಳಗಿನೊಳು ಪೊಕ್ಕುಬರೆ ।
ಸಂಚಲಿಸಿ ವಿಧುಶಿಲಾಕಾಂತಿಯುದರಿಂಪತ್ತ ಶುಭ್ರಾಂಶುಕಳೆ ತೋರ್ಪುದು ॥
ಹಂಚಿನೊಳು ನೀವಾರ ಸೂಕದಂತನುಪಥವು ।
ವಂಚಿಪುದು ಮಾರ್ಗವಿಡಿದೈ ಕೋಟಿಸಾಹಸ್ರ ।
ಮಿಂಚಿ ರವಿಶಶಿಕಾಂತಿ [ತೋರುತಲಾಮಹಾ] ನುಭವಮಪ್ಪುದೆಲೆ ಬಾಲಕ ॥ (9)

ಮೂರುಕೂಟವನು ಕಂಡಾಕ್ಷಣದಿ ಕಳ್ತಲೆಯು ।
ಜಾರುವುದು ಕರಣಗಳು ಕರಗಿ ಯೊಷಣಗಳುಂ ।
ಪಾರುವವು ಮಗುಳೊಂದು ತೋರ್ಕೆ ತೋರದೆ ತದೇಕಾಯುತ್ತಮಾಗಿರ್ಪುದು ॥
ಭಾರಣೆಯು ಬೆಳಗಿನೊಳು ಸಾಸಿರದಳಾಬ್ಜಮೈ ।
ದೋರುವದು ಗುರುಪದವ ಕಂಡನ್ಯಮೇನೊಂದ ।
ಹಾರೈಸದತಿ ಸುಖದಲಿರ್ಪನಿದೆ ಪರವೆನುತ ತಿಳದಿರ್ಪನೈ ಯೋಗಿಯು ॥ (10)
ಕರಚರಣಗಳ ನೋತ ಕಟಕತ್ರಿಮಿಗಳ ಘಾತ ।
ಕರಣಗಳುಪದ್ರವಗಳಾಟ ಕೋಟಲೆಯೊಂದ ।
ನರಿಯದಾನಂದಲಹರಿಯುಲಿ ಮುಳುಗಾಡುತ್ತ ತಾನೆತಾನಾದ ತೆರದಿ ॥
ಮರೆದು ಸುಖದಿಂದಿರ್ಪನಲ್ಲಿಂದ ಮುಂದರುಗೆ ।
ಸುರಪ ಮುಖ್ಯರ್ಬಂದು ಸುರಿದು ಪೂವಿನ ಮಳೆಯು ।
ಪರಿಪರಿಯು ನುತಿಗೈದು ಪ್ರಾರ್ಥಿಸಿದರಾಗೈದೆ ಮತಿಯೊಳೆಳವಟ್ಟತೆರದಿ ॥ (11)

ಮನ್ನಿಸದೆ ಮುಂದರುಗಲವರು ಕೋಪಿಸಿ ಕರೆವ।
ರನ್ನೆಗಂ ಬರೆ ಸಿಡಿಲು ಪುಲಿಕರಡಿಸಿಂಹಂಗ।
ಳುನ್ನತ ಭಯಂಕರಂ ಕಂಗೊಳಸಲದನೋಡುವವರು ಕೆಲಸಾರುತಿರಲು॥
ತನ್ನ ಬೆಳಗಿಲಿ ತಾನೆ ನಲಿವುತ ಶಿಖಾಚಕ್ರ।
ವನ್ನುಕಳೆವನ್ನ ಕಿಂಚಿತ್ತರಿವು ಮುಂದರುಗ।
ಲನ್ಯಮೇಗಿಲ್ಲದಾನಂದಸ್ವರೂಪಿಂದಮಿರುವನಾ ಯೋಗೀಂದ್ರನು॥ (12)

ನದಿಗಳೆಲ್ಲವು ನೀರಧಿಯನು ಪೊಕ್ಕಂತೆ ಬಿಸಿ।
ಲುದರದೊಳ್ ಬಿಸಿಲಡಗಿದಂತಗ್ಗಿಯಂ ಚಂದ್ರ।
ಮುದದಿ ಚುಂಬಿಸಿದಂತೆ ನಭದಿ ನಭನಾದದೊಳ್ನಾದ ಕಲಿತಂತೆ ಬರಿಯ॥
ಸದನಗತದೀಪದಂತಾನಂದ ವೈಭವದ।
ಸದಮಲಜ್ಯೋತಿಯಿರಲಿದನೆ ವೇದಂಗಳನು।
ವದಿಸುವದು ವಿಜ್ಞಾನಮೇಕಮೇವಾದ್ವಿತಿಯ ಸತ್ಯಸತ್ಸ್ವವ್ಯಮೆನುತ॥ (13)

ಅಂಬುಧಿಯ ಮಧ್ಯದೊಳು ಮುಳುಗಿರ್ಪ ಪರಿಪೂರ್ಣ।
ಕುಂಭದಂತೊಳಹೊರಗಖಂಡಮಯಸ್ಫಟಿಕಘಟ।
ಗುಂಭಿತದ ದೀಪದಂತೆಲ್ಲಮಂ ಬೆಳಗುತ್ತವಾತ್ಮನು ಭವಸೌಖ್ಯದೆ॥
ತುಂಬಿ ಪೊರಸೂಸುತಿಹ ಸುಖದಸಾಮ್ರಾಜ್ಯದೊಳ್।
ಗಂಬರದೊಳೆಸೆವ ಪ್ರತ್ಯೂಹಗಳ ಗಣಿಸನಾ।
ಲಂಬವಿರಹಿತನಾದ ನಿಜವೆ ತಾನಾಗಿರ್ಪಕತ್ರದಿಂದವಧಾಲಿಸಣುಗ॥ (14)

ಸಾರತರಮಾದಾ ಸಮಾಧಿಗತ ಪುರುಷಂಗೆ।
ಪ್ರಾರಬ್ಧವಶದಿಂದಮುದಿತಮೆಚ್ಚರುತದಾ।
ಕಾರಮಾದಖಿಲೇಂದ್ರಿಯಗಳಿಂದ ಚೇಷ್ಟೆಯನ್ನನುಕರಿಸಿ ಕಿತವನಂತೆ॥
ತೋರಪೈಶಾಚಬಾಲಕನಂತೆ ಜವದಿಂದ।
ತೋರುವಂ ದಗ್ಧಪಟದಂತವರಿಗವರಂತೆ।
ಬೇರೆಸದೊಂದರೊಳು ಬೆರಸಿರ್ಪನಗಿಸರೊಳು ಪರಿಕಿಸುವಡಾರಿಗಳವು॥ (15)

ತನಯ ಕೇಳ್ ತತ್ವಸಾಕ್ಷಾತ್ಕಾರಮಾದವಗೆ।
ಜನನವೆಂಬುದು ಪೊದಗದದರಿಂದಮಾತನಂ।
ಮನುಜನೆನಲಳವಲ್ಲಮದರಿಂದ ಕರ್ಮಗಳ ವಿಧಿಸಲೆಂತಹುದಾತ್ರಗೆ॥
ಇನನುದಯವಸ್ತಮಯವನುಸರಿಪ ವೈಕರ್ಮ।
ದಿನಪಕ್ಷಮಾಸರ್ತುಗಳ್ ಸುಧಾಲಯದೊಳಹ।
ವನಜಸಖ ಸರ್ವದಾ ಬೆಳಗುತಿರಲೀ ಕೃತ್ಯಗಳ ಬೆಸಗನಿಡುವದೆಂತು॥ (16)

ಮಗನೆ ಕೇಳಖಿಲ ಪಾತಕಪುಣ್ಯಗಳ ಮನಂ।
ನೆಗಳುವದು ಪುರುಷತದ್ವಶನಾದರಮಿತ ದುಃ।
ಖಗಳನಿತ್ತಪುದು ತಾಂ ಪರವಶತೆಯಾಗಿರ್ಪುದಾರಿಗಿನ್ನೇಂ ಗೈವುದು॥
ಜಗತಿಯೊಳಗಣ ಮಹತ್ತೆಲ್ಲ ತಾನಾಗಿರ್ಪ।
ಬಗೆಯಿಂದಮನ್ಯಮಿಲ್ಲಾವುದದರಿಂ ಯೋಗಿ।
ಯೊಗುಮಿಗೆಯ ಪುಣ್ಯಪಾಪಗಳ ಹಂಗಿನಿತಿಲ್ಲ ನಿರುಪಮಿತ ನಿರ್ಲೇಪಗೆ॥ (17)

ಕರಣೇಂದ್ರಿಯಗಳಿಂದ ಪರಿಪರಿಯ ಭೋಗಗಳ ।
ನಿರತಮನುಭವಿಸೆ ಯೋಗೀಶಗನುಲಿಪ್ತತೆಯು ।
ದೊರಕೊಳ್ಳುಗು ವರ್ತಿಯಿಂ ತೈಲಮಂ ಭುಂಜಿಸುವ ಜ್ಯೋತಿಗತಿಲೇಪಮುಂಟೆ ॥
ಪರುವತದ ಮಾರ್ದನಿಗೆ ಪಕ್ಷಪಾತದೊಳಿರ್ಪ ।
ದರುಹಿಗುಂ ಪಂಕಗತಕೇಜಸಾರಸನಾಳ ।
ಕುರುಲೇಪಮಹುದುಂಟೆ ಪರತರಾನಂದಮು ಸುಯೋಗಿಗುಂ ಲೇಪಮುಂಟೆ ॥ (18)
ಕನಕಾಚಲೋಪಮಿತ ಸ್ವರ್ಣದಾನಂ ಗೈದು ।
ವನಜಾಕ್ಷ ಶಂಕರಾಲಯಕೂಪಕಾಸಾರ ।
ವನತಟಾಕಾದಿಗಳ ರಚಿಸಿ ಷೋಡಶಮಹಾದಾನಗಳನ್ನು ಮಾಡಿ ॥
ಮನದಿ ಬೇಡಿಮುದಿತ್ತು ಮುಖಸಕಲಯಾತ್ರೆಂಗ ।
ಳನುಮಾಡಿ ಕೃಚ್ಛ್ರಾಜಿತಪಗಳೆಸಗಿದ ಫಲವು ।
ಜನಿಸುವುದು ಕ್ಷಣದೊಳಾತ್ಮಜ್ಞಾನನಿಷ್ಠರಿಗೆ ಸ್ವಸ್ವರೂಪಜ್ಞರಿಂಗೆ ॥ (19)
ನಡೆ ದೇವಯಾತ್ರೆ ನಿಂದೆಡೆ ವಾರಣಾಸಿಯುಂ ।
ನುಡಿದುದೇ ಮಂತ್ರ ಮನವಿಡಿದುದೇ ಸನ್ಮಂತ್ರ ।
ತುಡುಕಿದುದೆ ಸದ್ವೃತ್ತಿ ನಿಟ್ಟಿಸಿದುದೇ ಸುಕೃತ ಸರ್ವಮಯವಿತ್ಸಾಕ್ಷಿಗೆ ॥
ಕೊಡದ ನೀರೊಳಗೆ ಕೊಚ್ಚೆಯು ಜಲದೊಳಿರ್ದರೆರ ।
ವಿಡಿದಿರ್ದರವಿಯಂತೆ ಯೋಗಿ ಪೊಲೆನಿಲಯದೊಳು ।
ವ್ಯಡನಮಂದಿರದೊಳೊಂದೇ ಪರಿಯುಲಿಸದಿರುವ ಕೇಳ್ಮೋಲೆಣಿಸನಣುಗ ॥ (20)
ಕುಲ ಪವಿತ್ರವು ಜನನಿ ಕೃತಿ ಯೋಗಿ ಸಂಚರಿಪ ।
ನೆಲ ಪಾವನಂ ಸದಾನೆಲಸಿರ್ಪ ತಾಣಮದೆ ।
ಲಲಿತ ವೈಕುಂಠಾದಿ ಲೋಕ ನುಡಿ ವೇದಂಗಳಖಿಳ ಕರ್ಮಗಳು ನಡೆಯು ॥
ಸುಲಭಮಲ್ಲದಪಾರ ಚಿತ್ಸುಖಸಾಗರದಿ ।
ಮುಳುಗಿರ್ಪ ಮನವು ಪೊರಸೂಸದನಿಮಿಷಖರೆ ।
ಜಲಜಪೀಠಾದ್ಯರೆಣೆಯಿಲ್ಲದನುದಿನ ಸಮಾಧಿಯುತಗೇ ಪೇಳ್ವುದು ॥ (21)
ತಪಸಿಗಳಗಧಿಕ ಜ್ಞಾನಿಗಳಗುತ್ತಮಮಂತ್ರ ।
ಜಪಿತರ ಶಿರೋರನ್ನಯಾ ಯಜಾಕರ ಜಾಲ ।
ನೃಪತಿ ಕ್ರಿಯಾಪೂಜೆಮುಂತಾದವರಧಿನಾಥ ವ್ರತತತಿಗಳಂಗೆ ನೇತಾ ॥
ಸುಪವಿತ್ರನಾತ್ಮ ಸಾಕ್ಷಾತ್ಕಾರದಿಂ ದಮಿತ ।
ಗುಪಿತದೊಳು ಜಾನಿಸುತಮಾನಂತ ನೀರಧಿಗ ।
ಳಪರಿಮಿತ ಕ್ರೀಡೆಯಂ ಚಾಲನಂ ಗೈದನಾ ಯೋಗಿಗೆಣೆಯುಂಟೆ ತನಯ ॥ (22)
ಪಾವನಕೆ ಪಾವನಂ ಪರಕೆ ಪರನೆನಗಮಂ ।
ಜೀವನ ಸ್ಥಾನಮಾದುದರಿಂದ ನೀಂ ಧ್ಯಾನ ।
ಗಾವಲಂಬನಗೈದು ಸುಖದ ಸಾಮ್ರಾಜ್ಯಮಂ ಸುಲಭದಿಂ ಸಾಧಿಸೆನುತ ॥
ದೇವನನುಜಂಗೊರೆದು ಮಗುಳೆಂದ ಯೋಗಿಗಳ ।
ಪಾವನತೆಯಂ ಪೊಗಳ ಪೊಗಳ ಮತ್ತಿನಿತೆನುತ ।
ಮಾನವಿಧದಿಂ ಪೇಳ್ವರಳವಲ್ಲ ಪರಮಾತ್ಮನಪರಾವತಾರಮಣುಗಾ ॥ (23)

ಭೋಗಪ್ರೂಗಗಳುಳದು ಬ್ರಹ್ಮದೊಳಗೊಡವೆರದ।
ಯೋಗಿಗತಿಶಯುವಿಲ್ಲ ಮೂರ್ತಿಯೊಳು ಚರಿಯಂಗ।
ಳಾಗುಹೋಗುಗಳೆನಿಸಿ ನಿಂದೆ ಗೈಯಲು ಸಲ್ಲ ನಗೆನುಡಿಗಳಾಡಸಲ್ಲ ॥
ಭೋಗಿಯಾಗಿರಲತಿ ವಿರಾಗಿಯಾಗಿರಲಶುಚಿ।
ಪ್ರೂಗವಾಗಿರಲಿ ನಿಷ್ಠಾವಂತನಾಗಿರಲಿ।
ಯಾಗರುವನಿರವೇಣಿಸಿ ನಿಂದಿಸಲ್ ಕುಲನಾಶವಾದಪುದು ಶ್ರುತಿಮತವಿದು॥ (24)
ಅರಿಯದಜ್ಞಾನಿಗಳು ಯೋಗಿಗಳನರರೆಂದು।
ಬರಿದೆ ಭಾಷ್ಯಳಗೆಡದು ನರಕಭಾಜನರಪ್ಪ।
ರರಿತ ಮತಿವಂತರತಿಪ್ರೀತಿಯಿಂ ಲಾಲಿಸುತ ಸುಖದಿ ಸಗ್ಗದಲಿರ್ಪರು ॥
ಶರಿರಮಿರ್ಪನ್ನಮೆಸಗಿದ ಪಾಪಪುಣ್ಯಗಳು।
ನಿರತ ಲಾಲನೆಗೈವ ನಿಂದನಂ ಗೈದವರ।
ಪೊರೆಯುಲೊಪ್ಪಗಿಪನಾ ಯೋಗಿತಾಂ ನಿರ್ಲೇಪನಾದ ಕತದಿಂ ಧರೆಯೊಳು॥ (25)
ತನುವಿರ್ಪ ತನಕ ತಾನೆಸಗಿದ ಮಹಾಕೃತ್ಯ।
ಕನುವ ಚಿಂತಿಸಿ ಜಗದ್ಗುರುಹಿತದ ಕಾರ್ಯಂಗ।
ಳನು ಮಾಳ್ಪರೈ ಯೋಗಿಜನರದಂ ನಿಜಮೆಂದು [ತಿಳಿವದೂ] ಮತಿಗೆ ತಂದು ॥
ಮುನಿಗಳಂ ನಿಂದಿಸುವರಲ್ಲ ದ್ವಿಷತಾಂ ಪಾಪ।
ಮೆನುತ ಸುಹೃದಾಂ ಪುಣ್ಯಮೆನುತ ಪೇಳಾವ ವೇದ।
ದನುವರಿತು ಪರಮಪಾವನನೆಂಸು ಯೋಗಿಗಳನಂದು ಪಾಲಿಪುದು ತನಯ॥ (26)
ಓದಿ ಕಲಿತಖಿಳ ಶಾಸ್ತ್ರಂಗಳಂ ಕಂಡಲ್ಲಿ।
ಕಾದಬೂದಿಯು ಹೊಯ್ದು ಕೊಂಡೇನು ಫಲ ಸುಖದ।
ಹಾದಿಯಂ ಪಿಡಿದು ಸತತಾನಂದಸಾಂತತೆಯು ಸಂಪಾದ್ಯಮೇಂ ನಾಲದೆ॥
ಭೇದಪೂಜಾವಾದ ಚಿತ್ರನಿಗ್ರಹನದಾ।
ಮೋದಂಗಳಾತ್ಮಾನುಸಂಧಾನದೊಂದು ಕಳೆ।
ಯಾದರುಂಟೆಂದಪರೆ ಸ್ವಸ್ವರೂಪೋನ್ಮತ್ತನೆಂತಿರ್ಪನೇನುತನಯ ॥ (27)
ಎನಿತು ಪೇಳುವದೇನು ಯೋಗಿಗಿಂತಾಧಿಕ್ಯ।
ವಿನಿತುವಸ್ತುಗಳಲ್ಲವೆನುತರಿತು ನಿತ್ಯ ಸುಖ।
ದನುಭವಕೆ ಮನವೆಳಸುತಾಸ್ತಿಕ್ಯಮತಿಯಿಂದಮನುದಿನಂ ಬಿಡದೆ ಪಿಡಿದು॥
ಘನತರದ ಗೋಪ್ಯದಿಂದಭ್ಯಾಸವನು ಮಾಡೆ।
ನಿನಗೆ ಸುಖನೆಲೆದೋರ್ಪುದಾಗಲುವ್ರು ಪೇಳ್ದುದಂ।
ಮನಕೆ ಹರ್ಷವನಿತ್ತು ಸಂತತಾನಂದವಂ ಸವಿವಂತೆ ಮಾಳ್ಪುದಣುಗ॥ (28)
ಬೇಸರದೆ ಬೆಂಬಿಡದೆ ವಂಚಕರ ನುಡಿಗಳಂ।
ಮೋಸ ಪೋಗದೆ ಪರರ್ಗೆ ಸೂಚಿಸದೆ ಮತ್ತೊಂದೆ।
ರಾಸೆಯಿಂ ಜರೆದಿದಂ ಮರೆದು ಮರುಳಾಗಿರದೆ ಚಿಂತನಂ ಗೈವುತಿರಲು ॥
ಲೇಸನಿತ್ತಪುದಾ ವಿಶೇಷಮಂ ಬಿತ್ತರಿಸೆ।
ವಾಸುದೇವಂಗಳವೆ ವಸುಧೆಯೊಳು ಪಾವಿತ್ರ।
ರಾಸಿ ನೀನೆಂದೆನಿಪೆಯೆನುತರಿತು ಪ್ರೇಮದಿಂ ಜಾನಿಪುದು ನಿನ್ನೊಳನಘಾ ॥ (29)

ಪರಮತತ್ವರಹಸ್ಯ ಮತ್ತಾರಿಗುಂ ತಪದಿ।
ದೊರೆಯದಿದು ನೀಂ ಗೈದ ಭಕ್ತಿಯಿಂದಾಂ ಮೆಚ್ಚಿ।
ಕರತಳಾಮಳಕಮೆನೆ ಕೈಗಿತ್ತೆನೆಂದು ರಘುವರನಿರೂಪಿಸಿದರ್ಥಮಂ।
ಶರಣಾರಗ್ರೇಸರಂ ಸೌಮಿತ್ರಿ ತಿಳಿದು ತಾಂ।
ಪರತರಪರಾನಂದ ಸಿರಿರಾಮಪುರದರಸ।
ಗೆರವಿಲ್ಲಮೆನುತರಿತು ಸ್ವಾತ್ಮಾನುಬೋಧೆಯಿಂದಾಮೋದಗೊಳುತಿರ್ದನು ॥ (30)

(ಸಂಧಿ 10 ಕ್ಕಂ ಪದ 409.)

---

## ಹನ್ನೊಂದನೆಯ ಸಂಧಿ

ಸೂಚನೆ ॥ ತರಣಿಸುತ ಸಾಮ್ರಾಜ್ಯವೆರಮು ಸಂತಸದಲಿರೆ।
ಬರಲು ವರ್ಷಾಗಮಂ ರಾಘವಂ ಪ್ರಸ್ರವಣ।
ಗಿರಿಕಟಕದೊಳಿರ್ದು ಸಂತಸದಿ ಲಕ್ಷ್ಮಣನೊಡನೆ ಪೇಳ್ದ ಕಾಯಾಂತರವನು ॥

೧ ॥ ಮಧುಪಸಹಕಾರದಿಂ ಮಂದಾನಿಲಂ ಬೆರಮು।
ಮದುಮುಖರ ಮುಖರಿತದ ಕೆಂಗಣ್ಣವಕ್ಕಿಗಳ।
ಪದವಿಯನು ಸ್ತುತಿಗೈದ ಪುಷ್ಪಿಣಿಯರೊಡಗೂಡಿ ಸರ್ವಭೂತಂಗಳನ್ನು ॥
ಕುದಿಗೊಳಿಸಿ ತನ್ನುಷ್ಣತಾಪದಿಂ ದುರ್ಜನಾ।
ಭ್ಯುದಯ ಜಾತಿವಿಹೀನ ಮಧುವೆಂದು ಧಿಕ್ಕರಿಸಿ।
ಮವದಿ ಜೀವನವಿತ್ತು ಪೊರೆಯೆ ಪ್ರಾವೃಟ್ಪತಿಯು ಸದಯ ಮೈದೋರ್ದನಗಜೇ ॥ (1)
ಅಂಜನಾ ಕಟಿತಟಾದ್ಗಳಿತ ದಾನೋನ್ಮಾದ।
ಗುಂಜಿಂ ಸ್ಕಲಿಂವ ಮದಜಾಂಕರಮುದ್ಬೋದ।
ರಂಜಿತ ಸುಕೇತಕಾಗೀ ಪರೀಣಾಮಧೂಳಿಕಾಢ್ಯತೆಯನಾಂತು ಜವದಿ ॥
ಕುಂಜಪುಂಜಗಳನಪ್ಪಳಿಸಿ ಕುಪ್ಪಳಿಸಿ ಭೂ।
ರಂಜನೆಯ ಕೆಡೆಸಿರ್ಪ ಮಧುರಾಗಗಳ ಬೇಗ।
ಭಂಜಿಸಿ ಪ್ರಭಂಜನಂ ಸುಳಿದಘನ ಸಂಸಪ್ತಕವ ವೀರಭಟನೆಂಬೊಲು ॥ (2)
ಅಪರಾಂಬುರಾಶಿಯಂ ತುಳ್ಕ ಏಕಳತೆಗೊಳಿಸಿ।
ವಿಪುಳಕರದಟ್ಟಘಟ್ಟಣೆಯಿಂದ ಕರಣಾತತಿ।
ವಿಪರೀತದಿಂದ ಮುಂಬರಿಮ ಭೂಮಿಯ ವಿಟಪಿಗಳ ಕೆಳ್ಗಾ ನಭವನಡರಿ ॥
ತಪನುರುಬೆಯಂ ನಿಲಿಸಿ ತವಕದಿಂ ಮಧುರಾಜ।
ನಪರಿಮಿತ ಪೀಡನಂಗೈಯ ಘನಮದದನೇ।
ಕ ಪಗಲಂ ಬಾಗರೆದು ಸಿರಿಯ ಮುಂದೈತಪ್ಪ ಮತಿಯಂತೆ ಮರುತಸುಳಿದಂ ॥ (3)
ಗಗನಗಂಗೆಯೊಳು ಮಿಂದಪ್ಸರಾಂಗನೆಯರುಗ।
ಳೊಗುಮಿಗೆಯ ಕುರುಳ್ಗಳೀಂ ಪರಪಿದಪ್ರೊ ಬಾಸೆಡೆಯ।
ಸೊಗಯಿಪ ತಮಾಲಸುಚ್ಛಾಯಮೋ ದಿವಿಜ ಪತಿಗಡಸಿರುವ ಮುನಿಶಾಪಮೊ ॥
ಗಗನಮಾತಂಗ ಮದಲೋಭದಿಂದೈತಂದು।
ಮಿಗೆಪರದ ಷಟ್ಚರಣ ತತಿಯೋ ನಭೋಂಗನೆಯ।
ಸೊಗಸಾದನೀಲಪಟಮೊಯೆನಲ್ ಕಂಗೊಳಿಸಿತಾ ಮೇಘಜಾಲ ಕವಿದು ॥ (4)

ತರಣಿಶಶಿಗಳ ಪಿಡಿಯಲುಪ್ಪಳಿಪ ರಾಹುವಿನ।
ತರುಣವ್ರೊ ದೇವತೆಗಳಂ ಬಾಧಿಸುತೆ ಬಂದ।
ಕರಿಯಖಳನುದ್ದಂಡೆ ಬಲವೊ ಮೇಣಂಧಕಾಸುರನ ಬೆರ್ಬಲದುರುಗಲೋ ॥
ಧರಿಣಿಯಾಗಸಮೆಂಬ ಭೇದ ತೋರ್ಪಡದಂತೆ।
ಮುರಿದು ಮುಚ್ಚಿದ ಕಳ್ತಲೆಯೊಯೆನಲ್ ನೀರದಗ।
ಳೂರವಣಿಯು ಜಗದಾದ್ಯಕರ ಮಹಾಮಾಯೆಯೊಲು ತೋರ್ದುದಾ ಕಾರ್ಗಾಲದಿ ॥ (5)

ಮುಗುಳಾದವಲ್ಲಲ್ಲಿ ಜಾತಿಗಳ್ ಕೇತಕೆಗ।
ಳೊಗುಮಿಗೆಯು ಪೂದೊಂಬೆಗಳನಾಂತೆಸಪಿರ್ದ।
ವಗಣಿತದ ಕುಟ್ಮಲಗಳಾಂತು ಕರಮೆಸೆದವಾ ಕಾಲದ ಕದಂಬತತಿಯು।
ಬಗೆ ಗೆಟ್ಟು ಪಾರ್ದವಂಚೆಗಳು ಕಲಕಂಠಂಗ।
ಳಗೆ ಬೆರ್ಚಿತಾರ್ಭಟಗಳಟ್ಟಿಗಡಿಗೆ ಮನ್ಮಥಂ।
ತೆಗದು ಬತ್ತಳಿಕೆಯಿಂ ಶರಗಳಂ ತೀಡಿ ತಾಡಲ್ಕೆಳಸಿದಂ ಪಾಂಥರಂ ॥ (6)
ಕೂರ್ರನಿಸ್ವನ ಚಪಲಮತಿ ನಿರಾಗಸದಿಂದ।
ತೋರಹತಿಗೆಳಸುವ ಜಡಭರಿತ ತಾಮಸಾ।
ಕಾರನಿನಿತುಪಕಾರ ನೆರವೇರದರಸನೆಡೆಯೊಳಗನಿಶವೊಪ್ಪಿರ್ದಪೆ ॥
ಯಾರುಬದುಕುವರೆನುತ್ತಮರಿತು ಹಂಸೆಯು ಬೇಗ।
ಪಾರಿದವು ಕೃಪಣತಾಮುಸರೆಡೆಯು ನಿರ್ಮಲರು।
ಸಾರಿರುವದೆಂತೆನುತ ಧರೆಗರುಪುವಂದದಿಂ ಮಾನಸಕೆ ದುರ್ಮ್ಯಾನದಿಂ ॥ (7)

ಇದು ಸುರಪಕರಕಲಿತಕುಳಿಶದಗ್ನಿಯು ಬೆಳಗೊ
ಇದು ಸುರೇಶನ ಕರಿಯು ಸೆಳೆವಂಕುಶದ ಪೊಳಪೊ।
ಇದುವೆ ಮಧುಸೂದನನ ಖಡ್ಗಧಾರೆಯು ಪೊಳಪೊ ಜಂಚರಕ್ಕಸದಾಡೆಯೋ ॥
ಇದು ಸಗ್ಗಸೌಧಾಗ್ರಕಾಂತಿಯೋ ನೋಡಲಿಂ।
ತಿದು ಸುರಾಂಗನೆಯುರಂಬಕನಿಚಯನೋಟಗಳ।
ತ್ರಾವಿಯು ತೋರ್ಪುದೊಯೆನಲ್ ಅಡಿಗಡಿಗೆ ಕಂಗೊಳಿಪವಾಗ ಸೌದಾಮಿನಿಗಳು ॥
ಪುಟ್ಟುತೊಡನಾಗೈದೆ ಘನರವಂ ಘನದಿಂದೆ। (8)
ಬೆಟ್ಟಬೆಳ್ಗೈಯುವ ನಡಮುಗುಗಧ್ವನಿ ಮೀರೆ।
ಕೊಟ್ಟುದಹುದೆಂಬಂತೆ ದಿಕ್ಪಟಲ ಘುಮ್ಮೆಡಲ್ ಕಡಲರವಕೆಮ್ಮಡಿಸಿಯೋ ॥
ನಿಟ್ಟಸುತ ಚಾತಕಖಗಾದಿಗಳ್ ಸಂಭ್ರಮಿಸಿ।
ಬಟ್ಟು ಮುಗಿಲಂಗಣದ ಮುಂಬಿನೋಳ್ ಮುಂಬನಿಯು।
ಕುಟ್ಟಿರವಗೊಂಬಂತೆ ಗುಟುಕಿಸುತ್ತಿರುತಿರ್ದವೇಸೆಂಬೆ ಕಾರ್ಗಾಲದಿ ॥ (9)
ಇದು ವೈಜಯಂತ ಸುಷಮೋಕ್ಷ್ಮಿಯೊ ವೈಶ್ರವಣ।
ಸದನತೋರಣಮಹಾಸ್ವೇಂಭೊಗರ ತೋರಿದುದೊ।
ಇದು ವರುಣಪಟ್ಟಣದ ಗೋಪುರದ ಮೇಲ್ಕಲಶವೇಂ ಬಳಕ ರಾಜಿಸುವುದೊ ॥
ಇದು ತರಣಿಸುತನಗರಹರ್ಮ್ಯಪ್ರಭಾಪಟಲ।
ದಧುಭುತವ್ರೊಯೆನಲು ನಾಲ್ದೆಸೆಯು ಮೇಘಜ್ಯೋತಿ।
ಮುದವೆಬೀರಿದುದಂಬರಾಂಗನೆಯು ಕಡೆಗಣ್ಣ ಬೆಳಗಿನತಿಶಯಮೆಂಬೊಲು ॥ (10)

ಉದಧಿಯುದಕವನೆಲ್ಲ ಪೀರ್ದುರ್ ಕ್ರೋಧವಸಾರ್ದುರ್ ।
ತುದಿಗಾಗಸದಜಲವ ಕುಡಿಯುತ್ಕೆ ನಾಲಿಗೆಯು ।
ವದಗಿಮತ್ತಂಬರದ ಮೇಘ ಮಧ್ಯದಲಿಡಲ್ಕುಷ್ಣಸಂಹಿಷ್ಣುತೆಯೊಳು ॥
ಕದಕದನೆ ನಡುಗೆ ಬಾಯಿಪಿಡಲು ತತ್ಕಾಂತ್ರಿಯುಂ ।
ಚದುರಿಂದ ಕಂಗೊಳಸಿ ತೋರುತಡೆಗುತ ಘನಸ್ಸ ।
ಮುದಯದೊಳಲ್ಲಲ್ಲಿ ಮುಂಗಾರ ಮಿಂಚುಗಳದೇಂ ಮನಂಗೊಳಸುತಿಹುವ್ರೋ ॥ (11)

ಚಿರಕಾಲ ವಿರಹಾಸಹಿಷ್ಣುತೆಯುಲಂಬರವ ।
ತರಣಿ ಚಿಂತಿಸುತಿರೆ ಘನಾಗಮವ ಕಂಡಾಗ ।
ಪರಮಹರ್ಷದೊಳು ಬರಸೆಳದು ಬಿಗಿಬಿಗಿದಪ್ಪಿ ಚುಂಬನಂಗೈದ ಭರಕೆ ॥
ಗುರುಕುಚವ ಕುಂಕುಮವಿಲಿಪ್ತ ಹಾರಾವಳಿಯು ।
ಪರಿದುಕೆಲಕೊಂದೊಂದು ಕೆಡವಪವ್ರೊಯನೆ ತೋರ್ಪ ।
ಸುರಪಗೋಪಗಳದೇಂ ನೋಡಕಂಗಚ್ಚರಿಯನಿತ್ತಪವ್ರ ತತ್ಕಾಲದಿ ॥ (12)

ಚಪಲ ಖಡ್ಗಗಳಾಂತು ಜಲದಭಟಬೈತಂದು ।
ಕುಪಿತದಿಂ ಶರಧಿಯೊಳು ಶರಗಳಂ ತೆಗದು ರಿಪು ।
ಗಪರಿಮಿತಕ್ಲೇಶಮಂ ಕೊಡುತ ತದ್ವಿಕ್ರಮಂ ಜಸಮಂ ನಿವಾರಗೈದು ॥
ಗುಪಿತ ನಕ್ಷತ್ರಮೆನಿಸಿದ ನೃಪತಿಗೀಪೆಸರ್ ।
ಜಪಿಸವೇಳ್ಕಂಬರದೊಳೆಂದು ನಭವಾಗಿತ ।
ದ್ಯುಪಮಿತನಭಸ್ಸಿನೊಳು ತೋರ್ದುದುಪಕಾರಿಗಳ ಪೆಸರನಿಡದುಳವರಾರು ॥ (13)

ಶರಧಾರೆಯಿಂದ ಧರೆಯುಂ ಮುಚ್ಚಿ ಮಿತ್ರಗುಲ ।
ಮರೆಯಾಗಿ ಪಾಲ್ಗಿವ ವಿಧುವನುಂಗುತಲುಷ್ಣ ।
ಕರಕೃತ್ಯಗಳನೆಸಗುತಿರ್ಪ ಜತಭರಿತನಿಂಗಾವ ಶ್ರೇಯಸ್ಕರವನು ॥
ಧರೆಯೊಳಾಪ್ನಿಟ್ಟಿಸುವರೆಂದು ನಾರಾಯಣನೊ ।
ಸರಿಸಿ ಜಾಂಬಕಗಳಂ ಮುಗಿದನೋ ಕೋಪಿಗಳ ।
ಗುರುತರೈಶ್ವರ್ಯಮಿರೆ ನೀಘಗಳು ನಿಟ್ಟಿಸರದೆಂಬಂತೆ ತತ್ಕಾಲದೇ ॥ (14)

ಕರುಣವಿಲ್ಲದೆ ಶರಾಸಾರಮಂ ಮೇಘಭಟ ।
ಕರೆಯುತ್ತ ಬರಲು ಧರಣೀಧರಗಳುರುಕೋಪ ।
ದುರುಬೆಯಿಂ ಸಿಂಹನಾದಗಳೆಸಗಿ ಭಲ್ಲೆಯುವಲನುಗೈದ ಸಮರಕ್ಕೈದೆ ॥
ಪೊರಮಟ್ಟ ಪೊಡದಾಡಲೆಳಸಿದರೊಯೆನೆ ತೋರ್ಪ ।
ವರರೆ! ಗರಿವ್ರೊಗಳಲ್ಲಲ್ಲಿ ನೆಲಬಿರಿವಂತೆ ।
ಮೊರವ ಮೊಳಗುಗಳದೇನಚ್ಚರಿಯು ತೋರುವವ್ರೊ ಘಾಂಥರೆದೆ ನಡುಗುವಂತೆ ॥ (15)

ತಪನ ಉಪಟಳದಿಂದ ತಾಪದಿಂದಲಿ ಚಂದ ।
ವಿಪುಲ ಭೂಪತಿಯು ಶಾರೀರದೊಷ್ಣವನೀಗ ।
ಲಪರಿಮಿತ ತಪದಿಂದವಾಕಾಶ ಗಂಗೆಯುಂ ಪ್ರಾರ್ಥನಂ ಗೈದಳೆನಲು ॥
ಕ್ಲಿಪಟಮಡಿಗಣಿಗೆ ಪೆರ್ಚುತ ಸುರಿವುತಲ್ಲಲ್ಲಿ ।
ಗುಪಿತ ಗೈವುತ ಬರಲ್ ತಾಪಗಳ ನೊಂದೆಣಿಸ ।
ದಪುಗಣನೆಗೊಳದ ನಿಶ್ಚಲಪುರುಷರಂದದಿಂ ಗಿರಿಗಳೇಂ ರಾಜಿಸುವವ್ರೋ ॥ (16)

ಶರದತರಣಿಯುಸುಂಗಿ ಧರಿಸಲಮ್ಮದೆ ಬಾಯು।
ತೆರವನೋಯೆಂಬಂತೆ ತೋರುತಡಗುವ ಚಪಲ।
ಪೊರೆಯು ಪೊರಬೀಳ್ವ ಕದಿರುಗಳ ಬೆಳಗಿನಲಡರಿ ಪೋಗುತಿಹ ಕಾದಂಬದಾ॥
ನೆರವಿಯುತ್ತರಮಾರ್ಗವಿಡಿದೈದೆ ಪೋಗುತಿಹ।
ಪರಮಹಂಸರ ತೆರದಿ ಜೀಳ್ಳುತಿಹ ಮಂಡೂಕ।
ಮುರಗಾದಿಗಳು ಧೂಮಮಾರ್ಗದಿಂ ಭೂತಳಕೆ ಕೆಡವ ಜೀವರೊಳಿಸದವು। (17)

ಶಿವನ ಮೆಚ್ಚಿಸಿ ಧರಣಿ ಸಂತಸದಿ ಘನಪಟಲ।
ಗವಿರಳದ ಜಡೆಯುಳ್ಳದು ಕಳುಪಿದನೊ ಸ್ವರ್ಧುನಿಯು।
ರವಿಯಿಂದಮಿಳಿಬಹ ಜಲಧಾರೆ ಸೂನದಿಯನೊಡಗೂಡಿ ಭೂತಳವನು॥
ಕವಿದುದೊಮ್ಮೆಯೆನಲ್ಕೆ ಕಡಲುಮೇಲ್ವರಿದಂತೆ।
ವಿವಿಧತರಮಿಂಚುಗಳ್ ಮೊಳಗಿಂದಮೆಡೆವಿಡದೆ।
ದಿವಸರಾತ್ರಿವಿಭೇದ ಗಾಣದಂದದಿ ವೃಷ್ಟಿಗರದುದೇಂ ಬಣ್ಣಿಸುವೆನು॥ (18)

ಬಗೆಬಗೆಯ ಸೃಷ್ಟಿಗಳ ಮಾಳ್ಪನಂಬುಜಯೋನಿ।
ಜಗತಿಯೊಳಗದು ವಿಷಮ ಸಮನೆನಿಪುದೆನುತ ತಾ।
ನಗಜೆಯರಸನ ಕೃಪೆಯ ಪಡೆದೊಂದ ವಿಧಮಾದ ಸೃಜನೆಯಂ ಮಾಳ್ಪನೆನುತ॥
ಜಗತಿಯಂ ಜಲಧಿ ಸಂಪೂರ್ಣಗೈವನೊಯೆನಲ್।
ಮಿಗೆಕರವ್ರದಾಸಾರವರೆನಿಮಿಷವೆಡೆಬಿಡದೆ।
ದಿಗಿಲುಗೊಳಸುತ್ತಮಾರ್ಭಟೆಗಳಂ ಚಿಟಿಚಿಟಿಲುಮೆಂಬ ಭರಸಿಡಿಳ್ಗಳಂದ॥ (19)

ಜಾತಿಮಾತ್ರೋಪಜೀವನ ದುಷ್ಟಕಂಟಕ।
ವ್ರಾತ ನಿಷ್ಠುರದದುರ್ಧರಗಳತಿತಾಮಸದ।
ರೀತಿಯನ್ನಾಂತದರಿದ್ರೈಶ್ವರ್ಯಬರೆ ಧರೆಯ ಜನರಿರುವದೆಂತೆನ್ನುವ॥
ಮಾತ್ರನಿಚ್ಛೆಯಗೈದು ಮದಮುಖದಿ ಕೂಗುತ್ತ।
ಮಾತಿಮಿರಮಂ ಕಪಿಸುತಶನಿಪಾತಂಗಳಂದ।
ಭೂತಳವ ನೀರೊಳಗೆ ಕಲಪಿದನೊಯೆನೆ ಲೋಕಬಾಧೆ ಹೈತುಕಮದಲ್ತೆ॥ (20)

ಸಾಗರದ ಜಲವ ಮನಬಂದಂತೆ ಪೀರ್ದು ಮ।
ತ್ತಾಗಸವನಡರಿ ತಜ್ಜ್ವಾಲೆಯಿಂ ನಿರ್ವಹಿಸ।
ಲಾಗದಲೆ ಕಂಗಳೊಳಗಿಂ ಗಳಗಳಂ ಕರದು ಪೂರ್ವಭುಕ್ತಂಗಳನ್ನು॥
ಬಾಗಿ ಕಾರಿದ ಗೊರವ ವಿಷವನಕ್ಕಿಸಲುಳ್ಳದ।
ಲೋಗರಿಂ ಜೀರ್ಣಮಾದಪುದೆ ಶಕ್ತಿಯು ಮಿಂಚಿ।
ಪೋಗೆ ತನುಮಹುದೆ ಜಡಮತಿಯ ಲೋಕಕಾಂತೋರ್ದನಭ್ರಂ ಜವದೊಳು॥ (21)

ಘನಗಜಗಳೆಣ್ದೆಸೆಯನಾಕ್ರಮಿಸಿ ಜೃಂಭಣದಿ।
ಕಸಮ ಮೇಲ್ವಾಯ್ದುಬರೆ ಕಂಡು ಮಾರುತಸಿಂಹ।
ಕಿನಿಸಿನಿಂದಿಂದು ಮದನಖಗಳಂದಂ ಪೊಡೆಯೆ ಶಿರಬಿರಿದು ಭೂತಳಕ್ಕೆ॥
ಬಿನದದಿಂದುದುರ್ವ ಮುಕ್ತಾಫಲಗಳೆಂಬಂತೆ।
ಘನವಾಗಿ ವರ್ಷೋಪಲಂಗಳುಂ ಚೆಲ್ಲಿದವು।
ವನಧಿಮೇಖಲೆಗಮರಪತಿ ಸಮರ್ಪಣೆಗೈದ ಮುತ್ತುಗಳ ಸೇಸೆಯೆನಲು॥ (22)

ವಾರಿವಾಹಂಗಳಿಂದುದಿತ ಸುಪ್ರಾಣಿಕರ ।
ತೋರವುಕ್ತಾಫಲಗಳಾರಿಗುಂ ತೋರಿಸದೆ ।
ತಾರುಷಟ್ಟಾಗಿ ಸುರರ್ರೊದರೀ ಧಾರಿಣಿಗೆ ಕೊಡದೊಂದನೆನುತ ದಯುದಿ ॥
ಮಾರುತ ಜಗಾತ್ಪ್ರಾಣವಾದ ಕತದಿಂ ಕೆಲವ ।
ನಾರ್ರೈದು ಭೂಪತಿಗೆ ಸೇಸೆಯಂತಳಿದನೊ ಗ ।
ಭೀರಮತಿಯಿಂದ ಕೆಲಸಾರಿ ಚೆಲ್ಲಿದ ಕರಕತತಿಗಳೀಂ ಕಂಗೊಳಪವ್ರೋ ॥ (23)

ಉಂಡುದೇ ಚಾತಕದ ತೆರದೊಳೊಂದರೆವನಿಯು ।
ಕೊಂಡುದೇ ಕುಸುಮ ಸೌರಭವನೀಪದಪಂಯು ।
ಕಂಡುದೇ ವೀರುಧಂಗಳಂತಮ್ಯೃತ ರುಚಿಗಳ ಘನಾಘನದ ಹಂಗಿಲ್ಲದೇ ॥
ವಿಂಡೆದ್ದು ಕುಣಿದು ಕಂಬನಿಗಳಡುತಲಿ ನಲಿದ ।
ಖಂಡಸುಖದನುಭವದಲಿಹ ನೀಲಕಂಠಗಳ ।
ತಂಡ ಸಾಧುಗಳಹಹ ಪರರ ಶ್ರೇಯಸ್ಸಿಗುಂ ಹಿಗ್ಗಿಹಾರ್ರೈಪರಲ್ತೆ ॥ (24)

ಮುತ್ತೃಯ್ಯಗಪಕಾರವೆಸಗಿ ಪೋಷಣೆಗೈದ ।
ಮತ್ತ್ವಮುಸುಮಿತ್ರಗುಂ ಶಾಂತಿಗೈದನವರತ ।
ಚಿತ್ತೈಕವೃತ್ತಿಯಿಂದನುಸರಣೆಗೈದ ದ್ವಿಜತತಿಯು ಕಷ್ಟವ ನಿಟ್ಟಿಸೀ ॥
ಮತ್ತೆ ನಿಟ್ಟುರದಿ ಸಂತರ್ಜಿಸುತ ಕಿಡಿಯುನುಗು ।
ಳುತೊಂದು ಪನಿಯು ಜೀವನವಿತ್ತ ಮಾಳ್ಕೆಯೋ ।
ಳ್ತೈತ್ತಾತಗೇಂ ಸಂಸವ್ಯೃದ್ಧಿಕರಮಾದಪುದು ಕೆಡಿಪ್ಪುದೆಲ್ಲವ್ರು ಲೋಭವ್ರು ॥ (25)

ನಿರವಧಿತಮಸ್ಯೃಷ್ಟಿಯಿಂದ ಮಾಯೆಯುತೆರದಿ ।
ಸುರಚಿರದ ನಾಟ್ಯನೆಯುದೋಲ್ ಘನೋದ್ಭಾಸಿತದಿ ।
ಕರುಣಾಕರನ ಸಿರಿಯೊಲಖಿಲ ಜೀವಾಧಾರವೆ ನಿಶಾಂತತೆಯು ಬೆರಸೀ ॥
ಪರಮಾರ್ಥಚಿತ್ತದಂತಾಶಾತನೊಕರಣ ।
ದುರು ಧನುಷ್ಕೋಟಿಯೊಲು ನಿಮ್ನೋನ್ನತಾಭಾವ ।
ದೆರೆದು ಪ್ರಾವೃಟ್ಕಾಲ ರಾಜಿಸಿತು ನಿಬಿಡತರ ಮೋದದಿಂದಾ ಸಮಯುದಿ ॥ (26)

ರಜನೀಮುಖದ ತೆರದಿ ನೀಲಕಂಠ ಪ್ರೌಷ್ಠಿ ।
ಯುಜನಂತೆ ಕಾದಂಬಡಂಬರಾಮೋದಿ ನಿಜ ।
ವಿಜಯಾರ್ಥ ಕೈತಂದ ಪಾಕಶಾಸನನಂತೆ ಚಾಪರಂಜನೆಯಿಂದಲಿ ॥
ದ್ವಿಜರಾಜನಂತಮಿತ ದ್ವಿಜಕುಲಾಮೋದಕರ ।
ಸುಜನರಂದದಲಮಿತ ಜೀವನಪ್ರದ ದೇವ ।
ವಿಜಯುಡಿಂಡಿಮವೆಂಬೆಲಂಬುದಾಗಮುಮುದೇಂ ಸಂಭ್ರಮದಿರಾಜಿಸಿದುದು ॥ (27)

ತಮನಂತೆ ತರಣಿಶಶಿ ಸಂತರ್ಜನೋನ್ಮುಖದಿ ।
ಶಮನಂತೆ ನಿರ್ಘಾತ ಪಾತಭೀಕರ ಕಲ್ಪ ।
ಸಮಯುದಂದದೆ ಸರ್ವ ವಸ್ತುಕಬಳೀಕರಣ ಕೇಲಾಲ ಬಾಹುಳ್ಯದೇ ॥
ಸಮರದಂದದೆ ಕಬಂಧಾಢ್ಯನಾಗುತ ರಮಾ ।
ರಮಣನಂದದೆ ತಡಿದ್ಗೌರಾಂಗನೆಯುನಪ್ಪು ।
ರಮಣೀಯದಿಂದಂಬುದಾಗಮುಮುದೇಂ ಚಿತ್ರಕರದಿ ರಾರಾಜಿಸುವುದೋ ॥ (28)

ಯೆಡೆವಿಡದೆ ಬರ್ಪ [ಘನಮೇಘ] ಗಳಾ ಧ್ವನಿಗಳಂ ।
ದಡಿಗಡಿಗೆ ಸುರಿವ ಬೆರ್ಮಳೆಗಳಂ ಪೊಳೆಗಳಂ ।
ದೆಡೆಗೆಡೆಗೆ ಪೊಳೆವಮಿತ ಮಿಂಚುಗಳ ಸಂಚುಗಳ್ ಕಳದಿಂದ್ರಗೋಪಂಗಳ ॥
ತಡತಡದು ಕೆತವಾನೆಕಲ್ಲುಗಳ ಪಲ್ಲುಗಳ ।
ನೊಡನೊಡನೆ ಪಿಡಿವ ಕಲಕಂಠದುತ್ಕಂಠಗಳ ।
ನಡೆಗೆ ನಡುಗುವ ವಿಪ್ರಲಬ್ಧಾಂಗನಾರಬ್ಧ ಸ್ಮರಯುಜನ ಕಂಗೆಸೆದವೂ ॥ (29)

ನಲಿನಲಿದು ಕುಣಿಕುಣಿವ ಸೋಗೆಗಳ ಜಂಗುಳಯು ।
ಕೆಲಬಲದಲರಳದ ಕದಂಬಗಳ ತಿಂತ್ರಿಣಿಯು ।
ಚಲದಮಲ ಪೊಂಗೇದಗೆಯು ಜಾತಿಕುಸುಮಗಳೆರಗಿ ಬಹ ಬಂಭರಗಳಾ ॥
ಲಲಿತಧ್ವನಿಯುಂ ಕಂಡು ಕಾಂತಾನುರಾಗ ಸಂ ।
ಚಲಿತಮಾನಸದಿಂದ ರಘುನಾಥನಿಂತೆಂದ ।
ನೆಲೆ ಕುವರ ಪ್ರಾವೃಷಾಗಮ ಭಯಾಗಮಹೇತುಕರಮಾಗಿ ಕಂಗೆಸವುದೂ ॥ (30)

ಸತಿಯೊಡನೆ ಬೆರದು ಸಂತಸದಿಂದ ಸೌಖ್ಯ ಸಂ ।
ತತಿಯನನುಭವಿಪ ಭೋಗಿಗಳು ಮೋಕ್ಷಾಲೋಕೆ ।
ನತಚಿತ್ತರಂಗನಾನತರಪ್ಪ ಪ್ರಣಯಜನರುಳದ [ವರ್ಷಕಾಲದಾ] ॥
ಕತಿಪಯ ದಿನಂಗಳಂ ಕಳೆಯುವೇಳ್ಕುಮೆನುತ್ತ ।
ವಿತತ ಚಿಂತೆಯೊಳಂಗನೆಯು ನೆನದು ಬಳಲ್ವ ರಘು ।
ಪತಿಯು ನಿಟ್ಟುಸಿ ನಮಿಸಿ ಸಮಯೋಚಿತಂಗಳಂ ಸೌಮಿತ್ರಿ ಬಿನ್ನವಿಸಿದಂ ॥ (31)

ದೇವರಾಜ್ಞಾಪಿಸಿದುದು ಚಿತ್ರಮಾವರು ರಾಜ ।
ಭಾವ ಧೈರ್ಯಾವಲಂಬಿಯಾದ ಕೆಡದಿಂ ದುಷ್ಟ ।
ಭಾವದಗ್ರಾಮೀಯುದಲೆ ಕಜ್ಜಮಂ ಬೆಳಸಲಹುದಪರಿಮಿತ ಸೌಖ್ಯವು ॥
ರಾವಣಾಸುರವಧಾ ಸಾಧನಗಳನ್ನು ರಾ ।
ಜೀವ ಮಿತ್ರನ ತನಯನನುಗೊಳಪ ಜಾನಕೀ ।
ದೇವ ವಶವಾದಳೆಂದೇ ಚಿತ್ತನಿಲುಯುದೊಳ್ ಭಾವಿಪ್ಪುದು ನರವರೇಣ್ಯಾ ॥ (32)

ಚಿಂತೆಯಾತಕೆ ಪ್ಲವಗಕಾಂತ ವಶವಾಗಿರ್ದ ।
ರಂತರಮದೇನುಂಟು ಕಾರ್ಯ ಕೈಗಂಟಾದು ।
ದೆಂತೆನುತ ತಿಳಯವೇಳ್ಕೆಂದು ಲಕ್ಷ್ಮಣ ತಿಳುಪಲಾಗ ಸಂತಸಗೊಳ್ಳುತಾ ॥
ಮುಂತಣಾಲೋಚನೆಯನನುಮಾನಮುಳದು ಶ್ರೀ ।
ಕಾಂತ ರಾಮಾಪ್ತರನಿತಾಂತ ಶರದಾಗಮವ ।
ಚಿಂತಿಸುತ್ತಿರ್ದನೇಕಾಂತದೊಳು ಗೋಬ್ರಾಹ್ಮಣಾನಂದಕರವ ಮನದೇ ॥ (33)

ಸಂಧಿ 11 ಕ್ಕಂ ಪದ 442 ॥

---

ಸೂಚನೆ॥ ಸುಲಭದಿಂದಖಿಳ ಜೀವರು ಮಹಾಪುರುಷಾರ್ಥ।
ದೊಳವ ಸಂಪಾದಿಸುವ ಶುಭನಾಮಕೀರ್ತನೆಯ।
ನೊಲಿದು ಲಕ್ಷ್ಮಣಗುರುಪಿ ಕೃತಿಯೆನಿಸಿದಂ ರಾಮಚಂದ್ರ ಕರುಣಾಸಾಂದ್ರನು॥

ಪದ॥ ಮಾನಿನೀಮಣಿ ಕೇಳು ಮನುವಂಶನಾಥ ನು।
ಮ್ಮಾನದಿಂ ಭದ್ರಕೋಲಾಹಲವ ನೋಡುತಿರೆ।
ತಾನೊಂದು ದಿವಸ ಮನೆಬಂದು ಲಕ್ಷ್ಮಣನೈದಿ ಪದಪದ್ಮಗಳನು ಪಿಡಿದು॥
ಜ್ಞಾನನಿಧಿ ಸರ್ವಜ್ಞ ಸಕಳಾಗಮಜ್ಞಯುಭ।
ಮಾನವಾತ್ಸಲ್ಯದಿಂದೆನ್ನ ಬಿನ್ನಪವ ಸ।
ನ್ಮಾನದಿಂದಾಲಿಸುತಮನುಮಾನವಂ ಪರಿವುದೆನುತ ಸಂಪ್ರಾರ್ಥಿಸಿದನು॥ (1)
ಜನನಮರಣವ ನೀಗಿ ಸುಖದ ಸಾಮ್ರಾಜ್ಯಗಳ।
ನನುಭವಿಸೆ ರಾಜಯೋಗದ ಪರಿಯನುಪದೇಶ।
ವನುಮಾಡಿ ನಿರುಪಾಧಿಕಂ ಗೈದರಾಪದಾಯಾಸಸಾಧ್ಯಮೆನುತ್ತಲಿ॥
ಮನವಲಸುತ್ತಿದೆ ನಿರಾಯಾಸದಿಂದಲಿ ಸುಖದ।
ನನುಭವಿಸುತಾನಂದಗೊಳಲುಪಾಯವನೊಂದ।
ನೆನಗೆ ಕೃಪೆಯಿಂದರುಹವೇಳ್ಕು ಸರ್ವಜ್ಞನಿಧಿ ಸಕಲಕಲ್ಯಾಣವನಧೀ॥ (2)
ಮತಿಯಿಲ್ಲವಾಗಮದ ಗತಿಯನರಿದಪನಲ್ಲ।
ಹಿತವಹಿತವೆಂದೆರಡನರಿತಿಲ್ಲ ಚಿತ್ತ ಸಂ।
ಸ್ಥಿತಿಯಿಲ್ಲ ಧ್ಯಾನದಲಿ ಪೋಲ್ವದಿಹ ಚಪಲಗಂಡು ಗತಿಸಂಜನಿಪ್ಪದು॥
ಅತಿಶಯಾಭ್ಯಾಸ ಪರರಿಂಗಲ್ಲದಾ ಯೋಗ।
ಮತಿಗೊಡಂಬಡದದರ ಸುಲಭಪಂಥಾನ ಸಂ।
ಗತಿಯ ಸೂಚಿಸಿ ಕೃತಿಯ ಮಾಳ್ಪುದೆನುತೆರಗಿದಂ ಸೌಮಿತ್ರಿ ಭಕ್ತಿಯಿಂದೆ॥ (3)
ಬೆಸಗೊಂಡ ಪರಿಗೆ ಸಂತಸಗೊಂಡು ರಘುನಾಥ।
ನಸುನಗೆಯಲಿ ದಿಟ್ಟಿಸುತ ಸೌಮಿತ್ರಿ ಕೇಳ್ ನೀಂ।
ವಸುಮತಿಗೆ ಹಿತವನಾಚರಿಪ ಕರುಣಾಶಾಲಿ ಕೃತಕೃತ್ಯನಾವಕತದಿ॥
ಬೆಸಸಲಳವಲ್ಲವೀಪ್ರಶ್ನೆಯಂ ಪ್ರಾರ್ಥಿಸಿದೆ।
ಕುಸುಮ ಸೌರಭವನಳಿಯರಸಿವಂದದಿ ಸಾರ।
ರಸವನನುಭವಿಸಲನುಗೈದೆ ಕೇಳಾವಡೆಯುಚಿತ್ತರಿವೆನತಿಗೋಪ್ಯವಂ॥ (4)
ಕಲಿಮಲೋತ್ಕಲಿತ ಕಲ್ಮಷಚಿತ್ತರಿಂಗೆನಿತು।
ವಲವಿನಿಂ ಸಾಧನಗಳೊರದವಡಾಗದು ಸುಖಂ।
ಪಲಪುವಿಧಪೂಜಾರ್ಚನಾದಿಗಳಲವರ ಮನ ನಿಲಲರಿದು ಭಕ್ತಿವಿಡಿದು॥
ಹಲವು ಕೊನೆಗಳನರಸಿ ಗಿಳಿ ಕಾಗಿಯಾದಂತೆ।
ಪಲುಬಿ ಕೆಟ್ಟಪರೆನುತ ತಿಳಿದನಾಯಾಸದಿಂ।
ಸುಲಭದಿಂ ಸದ್ಗತಿಯ ಸೂರೆಗೊಳ್ಳುವ ಪರಿಯ ಸೂಚಿಸುವೆ ಕೇಳು ತನಯ॥ (5)
ಅಲಸನಾಗಲಿ ಸದಾರೋಗಿಯಾಗಲಿ ಮಲಿನ।
ಕಲಿತನಾಗಿರಲಿ ಪಾತಕಿಯಾಗಲುರು ನೀಚ।
ಲಲನಾಸಮೇತನಾಗಿರಲಿ ಪಾನಾಸಕ್ತ ದುಷ್ಟಾನ್ನಭೋಕ್ತನಾಗಿ॥
ಉಲಿಯಬಾರದ ಮಹಾಪಾಪಿಯಾದರುಯೆನ್ನ।
ಚೆಲುವ ನಾಮೋಚ್ಚಾರಣೆಯಲಖಿಳಮಂ ಕಳೆದು।
ನಲವಿಂದ ನಿರ್ವೃತ್ತಿಯನುಂಬನಿದಂ ತಿಳಿದೆ ನಜನಿತ್ತವಚನದಿಂದ॥ (6)

ಕಾಲದೇಶವು ಯೋಗ್ಯಲೇಸುಹೊಲ್ಲೆಯುಮರ್ಥ।
ಜಾಲನಾಯಾಸ ತನುದಂಡನೆಯು ಮಂತ್ರಾರ್ಥ।
ದಾಲಸ್ಯ ಸ್ವರವರ್ಣಲೋಪ ಕುಲಬಲಕುಶಲಶಾಸ್ತ್ರದಾಳೋಚನೆಗಳು॥
ಮೇಲೆ ಜಪತಪನೇಮಮೆಂಬ ಕೋಟಲೆಯಲ್ಲಿ।
ದೇಲಾಯುಗ್ಯದ ಪಾತಕಕೆ ನಾಮಸ್ಮರಣೆ।
ತೂಲಾಗ್ನಿಯುರುಕಣಂ ನ್ಯಾಯದಿಂ ಪರಿಹರಿಸಿ ಮುಕ್ತಿಯಂ ಕೊಡುವುದಣುಗ (7)
ಗೋವಿಪ್ರವಧೆಯು ಗುರುವಂಗನಾಗಮನ ದು।
ರ್ಜೀವಿಗಳಸಂಗ ಸ್ವರ್ಣಸ್ತೇಯ ಚಾಂಡಾಲ।
ಕೈವರ್ತ ಕೈರಾತನಿಲಯಭೋಜನ ಮುಖ್ಯ ಪಾಪೌಘ ಸಮುದಯಮಸು॥
ರೂವಿಲ್ಲದಂತೊಯ್ವ ಪ್ರಳಯಾಗ್ನಿಯೋಪಮಿತ।
ಪಾವನಸುನಾಮಮಾಯಾಸಮೊಳ್ಳನಿತಿಲ್ಲ।
ಮಾವಗಂ ನೆನೆದು ಯೋಗೀಂದ್ರಪದಮನ್ನಾಳ್ದು ಸಂತಸದಲಿರ್ಪುದಣುಗಾ॥ (8)
ಜಾತಿವರ್ಣಾಶ್ರಮಾಚಾರ ವಿರಹಿತನೆನಿಸಿ।
ಸೂತಕಿಗಳೊಡೆಗಲಸಿ ನಿತ್ಯನೈಮಿತ್ತಿಕ।
ವ್ರಾತಂಗಳಂ ಪಳಿದು ಯಾವನಾನ್ನಗಳುಂಡು ಲೋಕನಿಂದಿತನಾದರೂ॥
ಮಾತಾಪಿತೃದ್ರೋಹಮೊಡೆಗೊಂಡುದೆಲ್ಲಮಂ।
ಬೀತುಪೋಗುವಡೆ ಪ್ರಾಯಶ್ಚಿತ್ತ ಹರಿನಾಮ।
ಖ್ಯಾತನೆಂದರುಪುವುದು ಶ್ರುತಿಶಿರಗಳನವರತ ನೀ ತಿಳಿದು ಸುಖಿಪುದಣುಗ॥ (9)
ಸತತ ಶೌಚಾಚಾರ ಕುಲವೇದಶಾಸ್ತ್ರ ಸಂ।
ಗತಿ ಪೂಜೆ ಜಪತಪ ಧ್ಯಾನದನುಷ್ಠಾನ।
ಮತಿಯುತ ಮಹಾಪುರುಷರಿಂದಪ್ಪ ಪರಮಪದ ಸೌಖ್ಯದಾನಂದದಿರವು॥
ಪತಿತಕಿತವಕಿರಾತಪಿಶುನಸ್ವಪಚಂ ಜೀವ।
ತತಿಹಿಂಸಕಂ ಮಹಾಕ್ರೂರನಾದಡು ಜಗ।
ತ್ಪತಿಯ ನಾಮಸ್ಮರಣೆಯಿಂದ ಪಾವನನೆನಿಸಿ ಯತಿಗಳಂ ಸಾರ್ವ ತನಯ॥ (10)
ದುರ್ದಾನ ದುಷ್ಪ್ರತಿಗ್ರಹ ಧೂರ್ತಮನುಜನ।
ಮ್ಮರ್ದಪ್ರಕಾಶಪ್ರಚ್ಛನ್ನಪಾತಕವು ತಾ।
ನಿರ್ದಲ್ಲಿಗೆರಡೆಣಿಸಿ ಮಿತ್ರವಂಚನೆಗೈದು ಭೂತಹಿಂಸೆಗಳನೆಸಗಿ॥
ಸಾರ್ದರಂಗಪಕೃತಿಯನೆಸಗಿ ಮಧುಸಮುದಯುವ।
ಪೀರ್ದು ಲೋಕಾಪವಾದದಲಾಳ್ದನಿಗೆ ಗತಿಯು।
ಮರ್ದಪುದು ನಾಮಕೀರ್ತನೆಯಿಂದಮಿದು ಸತ್ಯಮೆಂದರಿದು ಸುಖಿಸು ತನಯ॥ (11)
ಪರಮಪಾವನನಾಮ ಪಾಪಪ್ರಾಯಶ್ಚಿತ್ತ।
ಪುರುಷಾರ್ಥದಾಯಿಯೆಂಬುದಕೆ ದೃಷ್ಟಾಂತ ಮೊಂ।
ದೊರೆವೆ ಮೂಕಗೆ ನುಡಿಗಳಡಸಿ ವ್ರಾತ್ಯಂ ದ್ವಿಜತೆಯಾಂತಪರಿಯನ್ನು ತಿಳಿದು।
ಹರುಷದಿಂ ಸ್ಮರಿಸಿ ಕೃತಕೃತ್ಯನಹುದೆಂದೊರೆದ।
ಪರಿಯು ನಿಟ್ಟಿಸುತಮಚ್ಚರಿಗೊಂಡು ಲಕ್ಷ್ಮಣಂ।
ಚರಣಕಾನತನಾಗಿ ಬೆಸಗೊಂಡ ಮೂಕನೆಂತಾದ ವಾಗ್ಮಿಯೆನುತ್ತಲಿ॥ (12)

ಬೆಸಗೊಂಡರೊರೆದ ರಘುನಾಥ ಪೂರ್ವದಲೊರ್ವ ।
ನಸಮುಖಲ ಚಿತ್ರವರ್ಮಕ ಧರಾನಾಯಕನ ।
ಬಸುರೊಳುದಿಸಿದ ಕುವರ ಮೂಕನಾಗಿರೆ ಕಂಡು ಚಿಂತೆಗೊಡರಸಿರುತಿರೆ ॥
ವಸುಮತಿಗದೊಂದುದಿನ ನಾರದಂ ಬರಲುಮುನ ।
ದೆಸಕವಮಂ ಬಿನ್ನವಿಸೆ ಮುನಿಪನಾಲಿಸುತಾಗ ।
ನಸುನಗುತ ಪೂರ್ವವೃತ್ತಾಂತಮಂ ವಿಸ್ತರಿಸಿ ಪೇಳ್ದನಾ ನೃಪತಿ ಸೊಡನೆ ॥ (13)

ರವಿವಂಶದೊಳ್ಮೊದಲು ಜಾತನಾದರಸೇತ ।
ನವಯೌವನೋನ್ಮದದಿ ಬೇಟೆಗೈದಿದ ವಿಪ್ರ ।
ನವಸುಧಾಕರವಸಿಷ್ಠಾಶ್ರಮವ ಸಾರಲ್ಕೆ ಬನದ ಗಿಳಿವಿಂಡೆಲ್ಲವು ॥
ತವಕದಿಂ ರಾಮನಾಮಸ್ಮರಣೆ ಗೈವುತಿರೆ ।
ಲವಲವಿಕೆಯಿಂದೊಂದು ಯಾಚನಂಗೈದು ಬಂ ।
ದವಿರಳದ ಹರ್ಷದಿಂ ವಾಚ್ಛಾಯನೀತಂತ್ರಮಂ ಕಲಿಸಿದಂ ಪ್ರಿಯದೊಳು ॥ (14)

ನಾಮಾಮೃತಮನುಂ ಬದಂ ಕೆಡಿಸಿ ವೈಶಿಕದ ।
ಪ್ರೇಮನುಡಿಗಳ ಕಲಿಸಿದಘದಿಂದ ಮೂಕನಂ ।
ತೀಮಹಿಯೊಳುದಿಸಿದ ಕುಮಾರನೆಂದೊರೆದದಾ ಮುನಿಗಾನತನಾಗುತ ॥
ಕಾಯಕಲುಷಿತಗೆ ನಿಷ್ಕೃತಿಯನೆಸಗವೇಳ್ಕು ।
ಧೀಮಂತ ಸಂತಸದಲೆಂದು ವಿಜ್ಞಾಪಿಸಲು ।
ರಾಮನಾಮೋಪದೇಶಂಗೈದರಾಕ್ಷಣದಿ ಪೋದುದಾ ಮೂಕತನವು ॥ (15)

ಮೊದಲು ಮಾಡಿದ ಪಾಪ ತುದಿಯಾದುದಾಕ್ಷಣಕೆ ।
ಹೃದಯಸ್ಥಕತ್ತಲೆಯು ಪೋದುದು ಮುನೀಶ ನಿಂ ।
ದುದಿತನಾಮಪ್ರಭಾವದಿ ಚಿತ್ರವರ್ಮಸುತ ಜಯಸೇನ ಫಣಿಪನಂತೆ ।
ಮಧುಸೂದನಚ್ಯುತಾನಂತಮಾಧವಯೆನುತ ।
ಚದುರಿನಿಂ ಭಜಿಸುತಾನಂದಮಯನಾಗಿರ್ದ ।
ನವಮಲ ಸುನಾಮಕೀರ್ತನೆಯ ಮಹಿಮಾತಿಶಯಮೆಂತೆನುತ ಪೇಳಲಹುದು ॥ (16)

ಪ್ರಾತ್ಯಂದುರಾತ್ಮಗೋಬ್ರಹ್ಮಘ್ನಕೈರಾತ ।
ಧೃತ್ಯಸ್ತುವರ್ಣದಿಂ ಜಪಿಸಿ ವಿಪ್ರತೆಯನ್ನು ।
ಪೇತ್ಯ ಮುನಿಶ್ರೇಷ್ಠನೆನಿಸಿರ್ದ ಕೇಳ್ತನಯ ನಾಮ ಪ್ರಭಾವದಿಂದ ॥
ಜಾತ್ಯಾಂಧಬಧಿರಮೂಕಾದ್ಯನೇಕಾದಿ ದು ।
ಷ್ಕೃತ್ಯಗಳನ್ನೆಲ್ಲಮಂ ನಿಮಿಷದೊಳಗೀಡಾಡಿ ।
ನಿತ್ಯನಿರ್ಮಲನೆನಿಸಿ ಮುಕ್ತರಾಗುವರೈಸೆ ನಾಮಪ್ರಭಾವದಿಂದೆ ॥ (17)

ಆವಕರ್ಮಂಗಳನ್ನೆಸಗಿದರು ಮಗುಳೆ ಮಗು ।
ಳಾವದಾನಂಗಳಂ ಮಾಡಿದರು ಶ್ರೀ ಹರಿಯ ।
ಪಾವನದ ನಾಮಮಂ ಸ್ಮರಿಸಿದಲ್ಲದೆ ಸಾರ್ಥವಾಗಲರಿದಿದುತಥ್ಯವು ।
ಮೂವಿಧದ ಜೀವರಘುತತಿಗಳಂ ಸ್ಮರಣೆಯಿಂ ।
ದೋವಿ ಪರಿಹರಿಸಿ ಜೀವನ್ಮುಕ್ತಿಯಿತ್ತಪುದು ।
ಪಾವನಕೆ ಪಾವನಂ ಮಂಗಳಕೆ ಮಂಗಳಂಪರಕೆ ಪರ ಹರಿನಾಮವು ॥ (18)

ಪರಿಹಾಸವುಜ್ಞಾನಕೃತ್ತಿಮಾಡಂಬರಂ।
ಪರಿಪರಿಯುಲಣಕಸಣಕಂಗಳಿಂದಾದಡಂ।
ಸ್ಮರಣೆಗೈದಡೆ ಮುಕ್ತಿದೊರದಪ್ಪುದು ವೈರದಿಂ ಮೊದಲು ಘಂಟಾಕರ್ಣನು॥
ಪರಮಪದಮಂ ಸಾರ್ದ ಪರಿಯುನರಿ ಸದ್ಭಕ್ತಿ।
ವೆರದು ನೆನೆದನವರತ ಪಾಡುತ ಮಹಾಪುರುಷ।
ರಿರವನೇಂ ವಣ್ಣಿಸುವೆ ನಾವವಿಧಮಾವರುಂ ನೆನೆಯುಲಹುವಿಷ್ಟಾರ್ಥವು॥ (19)
ಮಾನಿನಿಯುಳಾಗಲಜ್ಞಾನವುುಳ್ಳವರಾಗೆ।
ಹೀನಜಾತಿಗಳಾಗಿ ಹಸುಣರಾಗಲಿ ಬಿಡದೆ।
ನ್ಯೂನವಿಲ್ಲದೆ ನಾಮ ಕೀರ್ತನಂಗೈದಡಾರಾದಡವಧನ್ಯ ಮಾನ್ಯಂ॥
ಮಾನವೋತ್ತಮನವನೇ ಪಂಕ್ತಿಪಾವನನತುಲ।
ಜ್ಞಾನಿಗಳಗಧಿಕ ಮತ್ತಿಲ್ಲಿ ಸುಳದರು ತಿಳವು।
ದಾನೆಲಮುಯೋಧ್ಯ ಮಾಯಾವಾರಣಾಸಿ ಗಯು ಮಧುರೆಯೆಂವರಿವ್ರುದಣಾಗ॥ (20)
ನಾಮಕೀರ್ತನೆಗಳನ್ನನವರತ ಮಾಳ್ಪವಗೆ।
ನೇಮನಿಷ್ಟೆಗಳ ಬಯಕೆಗಳಲ್ಲ ಕಿಲ್ಬಿಷ।
ಸ್ತೋಮಮಂ ಪೋಗಾಡಿ ಧನ್ಯ ಜೀವನ್ಮುಕ್ತನೆಂದೆನಿಸಿ ಸಂಚರಿಪನು॥
ಪ್ರೇಮದಿಂದಾಗೆ ನಿಟ್ಟಿಸಲವರು ಕೃತಿಯುಪ್ಪ।
ರಾ ಮಹಾಪುರುಷರಿದ್ದೆಡೆಯುಖಿಲ ತೀರ್ಥಗಳ।
ಧಾಮನೆಂದೆನಿಸುವನದೇನೆಂಬೆ ಮಹಿಮೆಗಳನೆನಿತೆಂದು ಬೆಸರಗೊಂಬೆ॥ (21)
ದಿವದಿ ಮಾಡಿದ ಪಾಪ ಸವದು ಪೋಪ್ಪುದು ತಾಪ।
ಪವಣಿನಿಂದಿರುಳೆಸಗಿದಾ ಪಂಕ ನಿಶ್ಯಂಕೆ।
ನವನವಕವೆನಲೊಮ್ಮೆ ಸ್ಮರಿಸಿದೊಡೆ ಶ್ರೀರಾಮ ಮಾಧವಾಚ್ಯುತನೆನುತಲಿ।
ಭವಭವಾರ್ಜಿತಗಳೆಲ್ಲಂ ಪೋಗಿ ಪುಣ್ಯಲೋ।
ಕವತಿರಸ್ಕೃತಿಗೈದು ಸೌಖ್ಯದವಿರಳ ಪುನ।
ರ್ಭವವಿಲ್ಲದಾನಂದ ಪದವದುಂ ಸಾರ್ವರಿದು ಮಿಗೆಸತ್ಯಮೀ ಲೋಕದೆ॥ (22)
ನಾಮಗಳನೇಕವುದರೊಳಗೆ ಸಾಸಿರನಾಮ।
ಕಾಮಿತಪ್ರದ ಕಲುಷಹರವೆನಿಪ್ಪುದಮಿತಮಾ।
ನೇಮದಿಂದಾವದಾವದ ನೆನೆಯುವೇಳ್ಕು ಫಲಭೇದಮೆಂತೆಂತಪ್ಪವೂ॥
ಆ ಮಹಿಮೆಯುಂ ತಿಳುಪವೇಳ್ಕೆಂದ ಲಕ್ಷ್ಮಣನ।
ಪ್ರೇಮದಿ ದಿಟ್ಟಿಸುತ ಸಕಲಲೋಕೋಪಕೃತಿ।
ಯಾಮಹಿಮೆಯುಂ ನಿರೂಪಿಸಿದ ಶ್ರೀರಾಮಚಂದ್ರನಾನಂದದಿಂದ॥ (23)
ಆದಡಾಲಿಸು ವತ್ಸ ನಾಮಂಗಳೊಡನೆ ಬಹು।
ಭೇದಂಗಳುಂಟಾದಡೆಲ್ಲಮಂ ಕರ್ಮಗಳ।
ಭೇದಿಪವದೊಂದು ಪರಿಯು ಜಪಿಸಿದ ಜನರಿಗಿತ್ತಪವು ಕಾಮಿತಗಳ॥
ಬಾಧೆಯೊಳು ಸಿಲ್ಕಿರೆ ತ್ರಿವಿಕ್ರಮನ ವಿದ್ಯಾರ್ಥಿ।
ಮೋದದಿಂ ಪುರುಷೋತ್ತಮನ ಪರಕವಿರ್ಗೆ ಸುಖಾ।
ಮೋದಬಂಧನಮುಕ್ತಿಯೆನುತ ದಾಮೋದರನ ಕೇಶವನ ನೆನೆವ್ರುದನಸ್ತಾ॥ (24)

ಭೀತಿಯೊಳಗಚ್ಯುತನ ನೇತ್ರರೋಗಾತಂಕ ।
ಬೀತು ಪೋಗಲು ಹೃಷೀಕೇಶನಂ ಭಾಜಿಪುದು ।
ವಾತಪಕ್ಕೀಶಕುಂ ಕೊಳುಗುಳದಿ ನೆನೆವುದಪರಾಜಿತನ ಕಾಲಜಿತನಾ ॥
ಪಾತಾಳದೊಳಗೆ ನರಸಿಂಹನಂ ಪೇರಡವಿ ।
ಭೂತಳದಿವಾಮನನ ಚಕ್ರಿಗಬಿಬ್ಧಿಯುಂ ।
ಯಾತುಧಾನರ ತರಿದ ಕಾರ್ಜಿಯುಂ ಚಿಂತಿಪುದು ನಾಲ್ವೆಸೆಯೊಳುಂ ಬಾಲಕಾ ॥ (25)
ಉರಗಬಾಧಾಶವುನ ಗರುಡಧ್ವಜನ ಸ್ಮರಣಾ ।
ಮಾರಿಭಯನಿಕೃಂತನ ನೃಸಿಂಹಕೀರ್ತನಗಳೀ ।
ಪರಿಯಲಖಿಲೇಷ್ಟ ಪ್ರದಾತೃ ಭಗವನ್ನಾಮಕೀರ್ತನಗಳೆಂದರಿವುದು ।
ಮರದೊಮ್ಮೆ ನೆನೆದರಂ ಸುರಧೇನುವಿನ ತೆರದಿ ।
ಕರದೀವುದೆಲ್ಲಮಂ ಕಾರ್ಯಗಳಗೋಸುಗಂ ।
ಪರಮಭಕ್ತಿಯೊಳು ನಿಯಮದಿ ಜಪಿಸಲಿಷ್ಟಾರ್ಥಗಳನೊದಗಿ ಪಾಲಿಸುವವು ॥ (26)

ಸುಲಭಮಾರ್ಗಮೆನುತ್ತ ನಿಯಮಂಗಳಲ್ಲೆನುತ ।
ಫಲಗಳೀವುದೆನುತ ನಾಮಕೀರ್ತನೆಯನುಂ ।
ಒಲವಿಂದಮುಪದೇಶಗೈದುದಾಮುಮ ನಾಮುವೊಂದೊಂದು ಕಾರ್ಯದೊಳಗೆ ॥
ನಿಲಲಾದವಖಿಲೇಷ್ಟದಾಯಿಯಲ್ಲದೆ ಪೋದ ।
ವಲಘುನಿಯಮತಗೊಡವಾಯಾಸಮೆಂದು ಮಳ ।
ಚಲಿಸುತಿದೆ ಸಂತತಂ ತಾಪತ್ರಯೋಪಶಮ ಮಾತ್ರಮಂ ಸೂಚಿಸನಪ್ಪಾ ॥ (27)
ನೇಮನಿತ್ಯಗಳ ಪೊದ್ದರೆ ಪ್ರಯೋಗಂಗಳುರು ।
ಭ್ರಾಮಕಂ ಸಿಲ್ಕಿರವದಾವ ಪರಿಯಿಂದಾಗೆ ।
ನಾಮಮಾತ್ರವನು ನಾಲಿಗೆಗೊನೆಯೊಳುಚ್ಚರಿಸಲಖಿಳ ಪಾಪಗಳು ಪೋಗಿ ॥
ಶ್ರೀಮತ್ಪದವನೆರ್ವ ಸರ್ವಕಾಲದಿ ಸುಖಾ ।
ರಾಮನಾಗಿರ್ಪ ನಾಮವ ಪೇಳ್ವುದೆನಲಾಗ ।
ಸೋಮಶೇಖರ ಸಕಲನಿಗಮಾರ್ಥಗಳಲರಸಿ ತೆಗವಂಗನೆ ನೊಳುಸುರ್ವನು ॥ (28)

ಜ್ಞಾನದಿಂದಾಗಲಜ್ಞಾನದಿಂದಾಗೆಮನ ।
ದಾನುಭವದಿಂದಾಗೆ ಮರವೆಯಿಂದಾದಡಂ ।
ನ್ಯೂನಮಾದಡು ಕ್ರಮಾಕ್ರಮಗಳಾದರು ನೆನೆವ ಮಾತುರದಿ ಭುಕ್ತಿಮುಕ್ತಿ ॥
ತಾನೆ ತನ್ನಿಂದಪ್ಪುದದರಿಂದ ಸಾಸಿರದ ।
ನೂನನಾಮಂಗಳ ಸಮಾನಮೆಂದೆನುತ ಸು ।
ಧ್ಯಾನದಿಂ ನಿಜಸತಿಗೆ ಶೂಲಿಯುಪದೇಶಿಸಿದನಕ್ಷರ ದ್ವಯುವ ಮುದದೆ ॥ (29)
ಜಾತಿವರ್ಣಾಶ್ರಮಾಚಾರ ಪರಿಹೀನ ।
ಜಾತಿಸಂಪರ್ಕ ಮಿತ್ರಘ್ನತೆಯು ಮೊದಲಾದ ।
ಪಾತಕಸಮೂಹಗಳು ರಾಮನಾಮಸ್ಮರಣೆಯಿಂದ ಪರಿಹರಮಪ್ಪುವು ॥
ಭೂತಳದೊಳುಳ್ಳ ಪುಣ್ಯಕ್ಷೇತ್ರದಟಣೆಯಿಂ ।
ನೀತಮಾಗದಲೆ ಪ್ರಾಯಶ್ಚಿತ್ತಮಿಲ್ಲದತಿ ।
ಸೂತಕಗಳೆನಿತಾದದಂ ನೆನೆದ ಮಾತುರದಿ ಪೋಗಿ ಶುಚಿಯಪ್ಪ ತನಯಾ ॥ (30)

ದಿನದಿನದ ಪಾಪವಂದಂಜೆಗುಂ ನಿಶಿಯೊಳಗೆ ।
ಜನಿಸಿದುದು ರಾತ್ರಿಯೊಳ್ಪೋಪುದಾರುತುವರ್ಷ ।
ತನುಮನೋವಾಙ್ಕೃತ ಕರ್ಮಗಳ ಜನ್ಮಾಂತರೀಯ ಪಾತಕ ಸಮುದಯಂ
ನೆನೆದ ಮಾತ್ರದಿ ಪೋಗಿ ಯೋಗಿಜನರಾನಂದ ।
ವನು ಪಡೆದು ಪ್ರಾರಬ್ಧವಿಪ್ಪನ್ನ ಸುಖಮಿರ್ದು ।
ಕೊನೆಗೆ ಸಾಯುಜ್ಯಸಾಮ್ರಾಜ್ಯಮಂ ಸಾರಿಪುದು ಶ್ರೀರಾಮನಾಮವನಘಾ ॥ (31)

ಕ್ರಮದಿ ಜಪಿಸಿದರಖಿಲ ನಾಮಗಳು ಫಲವಿತ್ತು ।
ವಿಮಲರೆಂದೆನಿಪರಲ್ಲದಡಘವ ತೋರಿಸುವ ।
ವಮೃತದಂದದಿ ಕ್ರಮಂ ಯುತ್ಕ್ರಮಗಳಾದಡಂ ಸೇವಿಪರಿಗಾನಂದವಾಂ ॥
ಶ್ರಮನಿವಾರಣೆಗೈದು ನಿರ್ಮಲತೆಯಂ ಕೊಟ್ಟು ।
ಸುಮನಸೋಪಮ ಗೈವುದದರಿಂದ ಹರನು ನಿಜ ।
ಮಮತೆಯಿಂ ಸಾಹಸ್ರ ನಾಮತುಲ್ಯಮೆನುತ್ತ ಮಡದಿಗುಸುರಿದ ಬಾಲಕ ॥ (32)

ಕೃತಯುಗದಿ ತಪದಿಂದ ತ್ರೇತಾಯುಗದಿ ಯಾಗ ।
ತತಿಯಿಂದ ದ್ವಾಪರದಿ ಪೂಜಾವಿಧಾನದಪ ।
ಚಿತಿಯಿಂದ ಕಲಿಯುಗದಿ ನಾಮಸ್ಮರಣೆಯಿಂದ ಪಾತಕಂ ಪರಿದಪುದಲೇ ॥
ಪತಿತ ಪಾವನನಾಗಿ ಪಾತಕಂಗಳು ಪೋಗಿ ।
ಸತಿಸುತರ್ವೆರಸಿ ಸಂತತ ಸುಖವನನುಭವಿಸಿ ।
ಮಿತಿಯಿಲ್ಲದಾನಂದಪದವ ಸಾರುವರೆಂದು ತಿಳದು ಕೃತಿಯಹುದು ತನಯ ॥ (33)

ಕಲಿತಕಲ್ಮಷದೋಷ ಲೇಶವಾದರು ಕರ್ಮ ।
ಜಲಸೆಯರುಪಾತಕಗಳಾದರುಂ ಗೋವಿಪ್ರ ।
ಪೊಲೆಯು ವಾಕ್ಕಾಯಮಾನಸಕಿಲ್ಬಿಷಂಗಳುಂ ನಾಮಕೀರ್ತನೆಯಮಾಳ್ಪ ॥
ಲಲಿತಹೃದಯರಿಗಿಲ್ಲಮಿದು ಸತ್ಯಮಮರಾವ ।
ನೆಲದಲಿರಲದುವೆ ವೈಕುಂಠ ಪ್ರಿಯದಿಂದಾರ ।
ನೊಲಿದಿಟ್ಟೈಸಿದರವರು ಕೃತಕೃತ್ಯರಪ್ಪರಿದು ನನ್ನಿಯೆಂದರಿವುದಣುಗ ॥ (34)

ನಾಮಸಂಕೀರ್ತನೆಯ ಪಾಸಟಿಯುನಿಡೆ ಸಲ್ಲ ।
ತಾಮಸದಮತಿಯುಲ್ಲ ಸಕಲ ಪುರುಷಾರ್ಥಗಳ ।
ಸ್ತೋಮಮೆಂದರಿದಖಿಳ ಕರ್ಮಕೋಟಿಲೆಯುಳಿದಖಂಡಪದ ಸಾಮ್ರಾಜ್ಯದ ॥
ಸಾಮರಸ್ಯದ ಸುಖವನನುಭವಿಸು ಕಷ್ಟತರ ।
ನೇಮಂಗಳಿಂದ ನಿಷ್ಫಲಮಲ್ಲದೇನಿಲ್ಲ ।
ಸೌಮಿತ್ರಿ ನಾಮಜಾಪಕನೆ ಸಾಕ್ಷಾದ್ವಿಷ್ಣುವಲ್ಲದವ ಮನುಜನಲ್ಲ ॥ (35)

ಪಳಿವಾತುಗಳ ಜೀವನಾರ್ಥವೆಂಬುದ ನೋಡಿ ।
ತಿಳದು ನಾಮಾಮೃತವ ಸವಿಸವಿದು ಸಂತಸದ ।
ಲಿಳೆಯ ಜೀವರ ಗಮನಕಾಲದೊಳ್ ಕರ್ಣೋಪದೇಶ ಗೈದಾನಂದದಿ ॥
ಬೆಳಗುವಂದದೆ ಮಾಳ್ಪ ಪಾಲಾಕ್ಷ ಕಾಶಿಕಾ ॥
ನಿಳಯದೊಳಗನವರತ ನಿಜಸತಿಗೆ ಬೋಧಿಸಿದ ।
ಬೊಲವಿಂದ ಮುಕ್ತಿಸಾಧನವೆಂದು ಸರ್ವಜ್ಞನಿಗಮಾರ್ಥವೇತ್ತ್ರನನಘಾ ॥ (36)

ದೇವರಾಜ್ಞಾಪಿಸಿದ ಮೋಕ್ಷೋಪದೇಶದಿಂ।
ಪಾವನೀಕೃತ ಚಿತ್ತನಾದೆ ಜಗದಧಿನಾಥ।
ನಾವಪುಟ್ಟುವ ಕೋಟಲೆಗಳೆಯದೀ ರಾಮಶುಭಕರಸ್ಮರಣೆಗಳನು॥
ಆವನಾದರು ಮನಕೆ ಬಂದಂತೆ ಸ್ಮರಿಸುವದೊ।
ಭಾವನೆಗೆ ಸಂಪ್ರದಾಯಗಳುಂಟೊ ಕೃಪೆಯಿಂದ।
ಬಾವಜ್ಞಾ ಪಾಲಿಪುದೆನಲ್ಕೆ ರಘುನಾಯಕಂ ಪೇಳ್ದ ವಿಸ್ತರದಿಂದಲೇ॥ (37)

ತರಳ ಕೇಳ್ ರಾಮನೆಂಬೆರಡಕ್ಕರವ ಮಹಾ।
ಗುರುವಿನಿಂದುಪದೇಶವಡೆದು ಹೃತ್ಸಿದ್ಧಿಯುಂ।
ಬೆರದೆಂಟನೊಂದಾಗಿ ಗಣನೆ ಗೈದನವರತ ಭಕ್ತಿಭಾವನೆಗಳಿಂದಾ॥
ನಿರತ ಜಪಿಸುತ ಲಕ್ಷವಾಗೆ ಸಂತಸವೆತ್ತು।
ಧರಣಿ ಸುರಸಂತರ್ಪಣಂ ಗೈದು ತತ್ಫಲವ।
ಪರಮೇಶನಡಿಗಳಿಂಗರ್ಪಿಸುತ ಮಗುಳಿಂದಿನಂತೆ ಜಪಿಸುವದು ತನಯ। (38)

ಈ ಪರಿಯಲೊಂದು ಕೋಟಿ ಸ್ಮರಣೆ ಗೈದವಗೆ।
ಗೋಪತಿಯ ಸದನಮೆರಡಾಗೆ ಕೈಲಾಸವು।
ಶ್ರೀಪತಿಯುಮಂ ಪಿರಂ ಮೂರಾಗಲದರಿಂದ ಪೆರ್ಚೆ ಬರೆ ನಾಮಂಗಳು॥
ಆ ಪರಮಪುರುಷ ತಾನೇ ಚಿದಾನಂದೈಕ।
ರೂಪನೆಂದೆನಿಪನಿದು ಸತ್ಯ ಶ್ರುತಿಮತವೆನುತ।
ನೀ ಪದುಳದಿಂದರಿದು ಜಪಿಸಿ ಸುಖಮಂ ಪಡೆವ ಕಲಿಕಲ್ಮಷವ ಕಡಿವುದೂ॥ (39)

ಒಂದೊಂದ ನೆಣಿಸಿ ಸಾಸಿರ ಸಂಖೆಗಳಮಾಡಿ।
ಪೊಂದೊಂದು ಲಕ್ಕಗಳನೆಣಿಸಿ ಕೋಟಿಯಾದಾಗ।
ಲೊಂದು ಸಮಯದೊಳೀಶ್ವರಾರ್ಪಣಂ ಗೈವುದಿದೊಂದು ಮತಮೀಪರಿಯಲಿ॥
ಛಂದಛಂದದ ರಿಷಿಗಳಾಚರಣೆಯಿರ್ಪವೆನಿ।
ತೆಂದು ಪೇಳಲ್ಕಕ್ಕು ಸಾಧ್ಯಮಲ್ಲವು ಮನಕೆ।
ಬಂದಂತೆ ನಾಮಗಳ ಸ್ಮರಿಸಿ ಜೀವನ್ಮುಕ್ತರಹುದೊಂದು ಮತ ನರೇಶ॥ (40)

ಮನದ ಬಯಕೆಯೊಳು ಲೋಕಾಂತರವ ನಿಟ್ಟಿಸುವ।
ರನುಗೈದಂಗೆ ನಾಮಗಳನೊಂದೆರಡನುತ।
ಲೆಣಿಸವೇಳ್ಕುಮು ಜೀವಮುಳ್ಳನ್ನ ಮಾಳ್ಪೆನೆಂದೆನುತ ಸಂಕಲ್ಪಿಸಿದಗೆ॥
ಎಣಿಕೆ ಸಣಿಕೆಗಳು ನೇಮಂಗಳೆಂಬುವುದಿಲ್ಲ।
ವಿನಿರಸ ಸ್ವಾದನದೊಳಾ ನಾಮಗಳ ಬಿಡದೆ।
ಯನುದಿನ ಸ್ವಾದಿಪುದೆ ನಿಯಮಮುದಕಾನಂದಸಾಮ್ರಾಜ್ಯಫಲವು ತನಯ॥ (41)

ಎನಗೆ ಜೀವನ ನಾಮಕೀರ್ತನಂ ಪಿಡಿದೊಮ್ಮೆ।
ನೆನೆದರೆಯು ಪೊರೆವೆ ಮಗುಳೊಮ್ಮೆ ಸ್ಮರಿಸಿದಡವಗೆ।
ರುಣಿಯೆನಿಪೆ ನೆನವರತವೆಡೆಬಿಡದೆ ಜಪಿಸುತಿಹ ಕೃತಕೃತ್ಯರಾದ ಜನರ॥
ಮನೆಯನರಸುತ ಬರ್ಪೆ ಕರುವನೆಳೆಗಂದಿ ತ।
ನ್ನನುವಿಂದ ಸ್ಮರಿಸಿ ಬರ್ಪಂತಾತ ನಿರ್ದಲ್ಲಿ।
ಗನುದಿನಂ ಬರುತಿರ್ಪೆನೀ ನಾಮಕೀರ್ತನಾಪರರಿಗಾಂ ವಶನಪ್ಪೆನೂ॥ (42)

ಪಾಡುವರ ಸಿರಿಯು ಹಾರೈಸುವೆನು ಮಗುಳ್ ಕೊಂ ।
ಡಾಡುವರ ಸಂತಸವಿ ನೋಡಿ ಹಿಗ್ಗುವೆ ತ್ರುತಿಯು ।
ಮಾಡುವರಿಗಾನಂದಗೊಳುವೆ ಮನದೊಲವಿಂದ ಭಜಿಸುವರ ಭಜಿಪೆನೊಲಿದು ॥
ಮೂಡುವಾನಂದದಿಂ ನಾಮಗಳ ಸ್ಮರಿಸಿ ಕುಣಿ ।
ದಾಡಿ ತನುಮನಗಳೆನ್ನಲ್ಲಿಟ್ಟು ಲಜ್ಜೆಗಳ ।
ನೋಡಿಸಿದ ಪುರುಷರಾನೆನಿಸಿರ್ಪೆನಿದಕೆನ್ನು ತಪ್ಪಿ ಧಿಟವೆಂದರಿವುದು ॥ (43)

ಪಲವು ಮಾತೇನಿನ್ನು ನಾಮಕೀರ್ತನೆಗಧಿಕ ।
ಲಲಿತ ಪಾವನವಸ್ತುವಿನಿತಿಲ್ಲ ನೀ ನಿದಂ ।
ನೊಲವಿಂದ ತಿಳಿದು ಜೀವನ್ಮುಕ್ತನಾಗೆಂದು ನೇಮಿಸಲ್ ಸೌಮಿತ್ರಿಯು ॥
ಕಲಿತ ಹರ್ಷದೊಳೆರಗಿ ದೇವತೆಗಳಂತಪ್ಪ ।
ಸುಲಭ ಮಾರ್ಗವನುಳಿದು ಸುಗುಣರೆಲ್ಲರು ಕರ್ಮ ।
ಕಲಿತಪಸ್ಸುಗಳೇತಕೆಸಗುವರೊ ವಯದಿಂದಮುಸುರವೇಳ್ಕೆಂದೆರಗಿದಂ ॥ (44)

ಅನುಜನಾಡಿದ ನುಡಿಗೆ ಸಂತಸದಿ ರಘುನಾಥ ।
ವನದೊಲವಿಲಿಂತೆಂದ ಪಿಂತೋರ್ವ ವಿಪ್ರಕುಲ ।
ಮನುಜಾಧಮಂ ಬಹಳ ಪಾತಕಂಗಳಮಾಡಿ ಪ್ರಾಣೋತ್ಕ್ರಮಣಸಮಯದೀ ॥
ಮನಬಂದ ತೆರದಲಳುತ್ತಳುತ್ತ ಬಿದ್ದಿರ್ದಿರವ ।
ಗನುವಿಂದಲೊಮ್ಮೆ ರಾಮಾಯೆಂಬ ನುಡಿಯು ಸಂ ।
ಜನಿತಮಾದುದು ಪೋದವಖಿಲ ಪಾಪಂಗಳುಂ ಮುಕ್ತನಾದಂ ವಿಪ್ರನು ॥ (45)

ಪಿಡಿಯಲೆಳಸುವರೈದಿ ಬಂದ ಜವನವರೆಲ್ಲ ।
ಕಡೆಗೋಡಿ ದೂರೆ ಸಮವರ್ತಿಯಾತಿ ಕೋಪದಿಂ ।
ದೊಡನೆ ಸರಸಿಜಪೀಠನಂ ಸಾರಿ ದೂರಿದಂ ವಾಕ್ಪತಿಯು ಶಿವನ ಪೊರೆಗೆ ॥
ನಡೆದರೀರ್ವರು ಕೂಡಿ ವೈಕುಂಠಕ್ಕೈತಂದು ।
ಕಡಲಳಿಯನೊಳು ಪೇಳಲಾತನಿಂತೆಂದ ಕೇಳ್ ।
ಮೃಡ ಸರಸಿಜಾನನ ಪ್ರಮುಖಮುನಿಜನರೆಲ್ಲ ಮನ್ಮತವ ಲೋಕಹಿತವ ॥ (46)

ಪತಿತನಂ ಸೀಕ್ಷಿಸಲ್ವೇಳ್ಕು ಪಾಪದಲದೋ ।
ಗತಿ ಸಮನಿಸಲ್ವೇಳ್ಕುಮೆಂಬುದಿದು ಶ್ರುತಿಮತಂ ।
ಸತತ ಲೋಕಾನುಮತಮೀ ಪರಿಯು ನಿಯಮದಿಂದಪ್ಪುದು ಸನಾತನವಲೇ ॥
ಮತಿಹೀನನೊಂಕುಪಾಮರಜೀವಿಯಾದಡಂ ।
ಹಿತಮಹಿತಲೋಭಹೇಳನಮಾವ ವಿಧಮಾಗೆ ।
ಕ್ಷಿತಿಯೊಳ್ ಪ್ರಯಾಣ ಸಮಯದಲೆನ್ನ ನೆನೆದಡವ ಮುಕ್ತನೆನ್ನಭಿಮತವಿದು ॥ (47)

ಪಾತಕೆಗೆ ಪಾತಾಳ ಸುಕೃತಿಗಂ ಸಗ್ಗಮೆಂ ।
ದೀತೆರದಿ ವೇದ ಪೇಳ್ದಪವು ಭಗವನ್ನಾಮ ।
ಪಾತ್ರಜಾಪಕರಿಂಗೆ ಸಾಯುಜ್ಯ ಪದವೆಂದು ನಿಗಮಾಗಮಗಳುಸುರ್ವವೂ ॥
ಯಾತಕರಿಯದೆ ದುರಾಗ್ರಹದಿಂದ ಶ್ರಮಗೊಳುವ ।
ದೋತು ತಿಳಿದೈದೆನುತ ಸರಸಿಜಾಕ್ಷಂ ಪೇಳ್ದ ।
ಮಾತನಾಲಿಸುತಬ್ಜಯೋಗಿ ಕರಗಳ ಮುಗಿದು ಬಿನ್ನಪಂ ಗೈದನೊಲಿದು ॥ (48)

ದುರುಳರಲ್ಪಜ್ಞರಜ್ಞಾನಿಗಳು ಬಗೆಬಗೆಯ।
ಉರುತರದ ಪಾತಕಂಗಳ ಗೈದು ಗಮಿಸುವವ।
ಸರದೆ ಸಕೃದುಚ್ಚಾರಣೆಯನೆಸಗೆ ಸಾಯುಜ್ಯಮುಪ್ಪುದೆಂದೆನುತ ದಯದೀ॥
ಕರುಣಿಸಿದುದಾಯ್ತು ಶಾರೀರಮುಳ್ಳನಕ ಗೈ।
ದುರುಪಾತಕಂಗಳಂ ಕಡೆಗೊಮ್ಮೆ ನಾಮಮಂ।
ಸ್ಮರಿಸಿ ಮುಕ್ತಿಯನಾಳಿ ಶ್ರುತಿಗಳಾಸುರುವ ಧರ್ಮತತಿಗೆ ಗತಿಯೇನು ಜೀಯಾ॥
ಜಾತಿನೀತಿಗಳು ಗುರುಲಘು ಪಾಪಪುಣ್ಯಗಳು। (49)
ಬೀತು ಸ್ವೇಚ್ಛಾಚಾರ ನಿರತರಪ್ಪರು ಮನುಜ।
ರೇತಕೀ ಶ್ರುತಿಜಾಲ ಧರ್ಮಶಾಸ್ತ್ರಗಳೆನುತ ಕಮಲಭವ ಬಿನ್ನವಿಸಲು॥
ನೀತಿಯಹುದೆಂದರಿತು ಸರ್ವೋಪಕಾರಮೆನ।
ಲಾತನೊಡನಿಂತೆಂದು ಬೆಸಸಿದಂ ದೇವತಾ।
ತಾತ ಲಾಲಿಸು ತತ್ವಮಂ ಪೇಳ್ವೆ ಮನದೊಳಹ ದುಮ್ಮಾನಮಂ ನೂಲಿಸು॥ (50)
ಎನಿತು ಪಾತಕಿಯಾದಡೆನ್ನ ನಾಮಸ್ಮರಣೆ।
ಕೊನೆಗೊದಗೆ ಮುಕ್ತನಹನಿದು ತಪ್ಪಲರಿದು ಕೇಳ್।
ವನಧಿಮೇಖಲೆಯೊಳೆನಿತೆನಿತು ವಿಧದಿಂ ಪೇಳೆ ನಾಮಕೀರ್ತನೆಯು ಪಿಡಿಯೇ॥
ಮನದಿ ನಂಬುಗೆ ಪುಟ್ಟಲಾಗದಾರೊವಡಂ।
ನೆನೆದ ಮಾತ್ರದಿ ಮುಕ್ತಿ ಸಮನಿಸಲ್ ಪೋಗೆನುತ।
ವನಜಾಕ್ಷ ವರವೀಯಲೆಲ್ಲರುಂ ಸಂತಸದಲೈತಂದರೊಮ್ಮನದೊಳು॥ (51)
ಅದರಿಂದಲೆನಿತೆನಿತು ಬೋಧಿಸಲು ಜಾಳೆನುತ।
ಮೊದಂ ನಂಬದೆ ಕರ್ಮಗಳ ಮಾಳ್ಪರನವಿುತ।
ತುದಿಗೊಳ್ವರೀ ಮರ್ಮ ವಾರಿಗುಂ ಗೋಚರಿಸದೆಂತರುಂ ಮನ ನಂಬದು॥
ಸದಯಗುರುಮುಖದಿಂದ ಸಾತ್ವಿಕಜ್ಞಾನ ಸಾ।
ಸದವೊದಗಿ ನಾಮಕೀರ್ತನೆಗೆ ಮನವೆಳಸಿವಡೆ।
ಪದುಮಜಾಸನಮುಖ್ಯ ದೇವತಾನತನಪ್ಪನಿದು ನಿಶ್ಚಿ ಕೇಳು ತನಯ॥ (52)
ನುಡಿವಲ್ಲಿ ನಡೆವಲ್ಲಿ ಕುಳಿತಲ್ಲಿ ನಿಂತಲ್ಲಿ।
ಯೆಡೆಯಾಡುವಲ್ಲಿ ನಗೆಯಿಂದ ಸತಿಪುತ್ರರೊಳಿ।
ತೊಡಂ ಸಲ್ಲಾಪ ಗೈವಲ್ಲಿ ಮತ್ತಾಕಳಕೆ ತೂಕಡಿಸುವವಸರದೊಳು॥
ಸಡಗರದ ಸುಖಗಳನುಭವಿಪಲ್ಲಿ ಪಗೆಯ ಕೈ।
ಯಡೆಯಲ್ಲಿಸಿಲ್ಕಿ ತೃಷೆಯಿಂ ಪಸಿದು ದಣಿದಾಗ।
ಲೆಡೆವಿಡದೆ ರಾಮನೆಂಬೆರಡಕ್ಕರವ ನೆನೆದು ಸಂತಸಂಗೊಳ್ಳು ಬಾಲಕ॥ (53)
ತುಸು ಮಾತ್ರ ಲೋಪ ಮಾಡದೆ ವಿಕಾರವನಿತ್ತು।
ಸಸಿನೆ ವಲಿದಡೆ ಸಗ್ಗಮಾತ್ರ ಫಲಮಂ ಕೊಡುವ।
ಪೊಸತರದ ಮಂತ್ರಜಾಲವ ಜಪಿಸಲೇಂ ಫಲ ನಿಷ್ಫಲಾರಂಭಮಲ್ತೆ॥
ರಸೆಯಮಂದಾರಮೆನಲೊಂದೆ ನಾಮಂ ಫಲದ।
ಹಸರಂಗಳೊಸಗಿ ಪೋಷಣೆ ಗೈವುತಿಹುದೆನ್ನ।
ವೆಸರಕ್ಷರದ್ವಯವ ನೆನೆನೆನೆದು ಸುಖಿಯಾಗಿ ಬಾಳ್ವುದತಿ ಲೇಸು ತನಯ॥ (54)

ನಿಗಮಾಗಮಂಗಳಭ್ಯಾಸ ಶಾಸ್ತ್ರಾದಿಗಳ ।
ಬೊಗುಮಿಗೆಯು ಭಾವನಂ ಯೋಗಯಾಗಾವ್ರತಂ ।
ಮಿಗೆತೀರ್ಥಯಾತ್ರಾಟನಾಭ್ರಮೆಗಳಂ ಬಿಟ್ಟು ಭಕ್ತಿಭಾವನೆಯುನಿಟ್ಟು ॥
ಸೊಗಸಾಗಿ ರಾಮನಾಮಸ್ಮರಣೆಗೈದು ನೀ ।
ಜಗತಿಯೊಳಗಮಿತ ಭೋಗಂಗಳನುಭವ ಗೈದು ।
ಜಗದೀಶನಂಘ್ರಿಯಂ ಸಾರಿ ಕೈವಲ್ಯ ಸಾಮ್ರಾಜ್ಯಮಾಳ್ದಪುದು ತನಯ ॥ (55)

ಈ ಪರಿಯುಪಾಯಾಸದಿಂದ ನಾಮಂಗಳಂ ।
ಗೋಪಿತದಿ ನೆನೆನೆನೆದು ಮುಕ್ತರಪ್ಪುದು ಪೂರ್ವ ॥
ತಾಪಸವಸಿಷ್ಟದತ್ತಾತ್ರೇಯಸನಕಾದಿಯೋಗಿಗಳ ಮತ್ತ ಬಾಲಕ ॥
ಶ್ರೀಪತಿಯ ನಾಮಾಂಕಿತದಿ ಗುಣಗಣಂಗಳ ।
ನ್ನಾ ಪರಮಪುರುಷನ ಚರಿತ್ರೆಯುತ ಪದಪದ್ಯ ।
ರೂಪದಾಲಾಪಮದು ನಾಮಕೀರ್ತನೆಯೆನುತ ಪೇಳ್ದಪರು ಕೇಳ್ ಬಾಲಕ ॥ (56)

ಜಗತೀತಳವ ಪೊರೆಯಲಜಭವಾದಿಗಳೆಲ್ಲ ।
ಬಗೆಬಗೆಯ ಪ್ರಾರ್ಥನಂ ಗೈಯಲನುಮತ್ರಿಯಿಂದ ।
ಯುಗಯುಗದೊಳವತರಿಸಿ ಗೋಬ್ರಾಹ್ಮಣರ ಸಲಹು ದುಷ್ಟರಂ ಶಿಕ್ಷಿಸಿದುದಾ ॥
ಸೊಗಸಾಗಿ ಪದಪದ್ಯರೂಪನಭ್ಯಾಸಗೈ ।
ದೊಗುಮಿಗೆಯು ರಾಗತಾಳಾನುಮತಿಯಿಂ ಪಾಡಿ ।
ಸೊಗಸಿಂದ ಪರವಶಾನಂದರಾಗಿರ್ಪುದದು ಸಂತೋಷಮೆಮಗೆ ತನಯ ॥ (57)

ತಾನರಾಯಿಸ್ವರಂ ಗೀತ ಪ್ರಬಂಧಸಂ ।
ದಾನಯುತಿಲಯವೆತ್ತು ಶ್ರುತಿಮನೋಹರವಾಗಿ ।
ಗಾನವಂ ಮಾಡಿದರೆ ಗರುವಿಕೆಗೆ ಮೆಚ್ಚುತಾಂ ಕೊಡುವೆನಿಷ್ಟಾರ್ಥಂಗಳಾ ॥
ಗಾನಮೆನಗತಿಪ್ರೀತಿಯಾನಂದಕರ ನಾಮ ।
ಗಾನಪ್ರಿಯನೆನುತಮೊರೆಪಾಗ ಮಂಗಳನೆಲ್ಲ ।
ನೀನರಿತು ಪಾಡಿ ಸಂತಸಂ ಗೊಳಿಸಿ ಕೃತಕೃತ್ಯನಾಗಿ ಬಾಳುವದು ತನಯ ॥ (58)

ಸೂರನುದಯಿಪ ಮುನ್ನ ಕರಪಾದಗಳ ತೊಳದು ।
ಚಾರು ತಂಬೂರವೀಣಾದಿಗಳ ಶ್ರುತಿಗೈದು ।
ಸಾರಕೀರ್ತನೆಗಳಂ ಮಾಡಿ ತತ್ಸುಖವನೆನಗರ್ಪಿಸಿ ಕೃತಾರ್ಥನಹುದು ॥
ಧೀರ ಕೇಳೀ ಪರಿಯು ರಾತ್ರಿಯೊಳ್ ಪಾಡುವದು ।
ನಾರದಂ ಗಾಂಧರ್ವತುಂಬುರಾದ್ಯಖಿಲ ಸುಕು ।
ಮಾರತರ ಭಾಗವತಮತ ಸುಲಭದಿಂ ಮೋಕ್ಷಸಾಮ್ರಾಜ್ಯಮಹುದು ತನಯ ॥ (59)

ವೇದಾರ್ಥಭರಿತ ರಾಮಾಯಣವ ಭಕ್ತಿಯಿಂ ।
ಸಾದರದಿ ಪೂಜೆ ಗೈದೋದಿ ಮಗುಳರ್ಚಿಸುತ ।
ನಾದಿಮಧ್ಯಾಂತವಿರಹಿತಚರಿತ್ರೆಯು ತಿಳದು ನಿರ್ವಾಣವಂ ಪಡೆವುದು ॥
ಬೋಧಾಯನಂ ಕಪಿಲದುರ್ವಾಸಕಣ್ವ ಮೊದ ।
ಲಾದ ಮೌನಿಗಳೆ ಮತಮೆಂದರಿತು ಮೂವಿಧದ ।
ಹಾದಿಯೊಳಗಾವದೊಪ್ಪಿದರದಂ ಭಜಿಸೆ ಕೃತಿಯಪ್ಪರಿದು ತಪ್ಪದನಘಾ ॥ (60)

ಸೊಗಯಿಸಿತು ಮತಿ ನಿನಗೆ ಮಿಗೆ ತಪಃಫಲವೊದಗೆ।
ಜಗತಿಯೊಳಾದುದು ಧರೆಗೆ ಸುಲಭದಿಂ ಸೌಖ್ಯ ಮಿಗೆ।
ಜಗದುಪಾದೇಯವುಮಂ ಮಾಡಿ ನಿವಾರ್ಯಮಂ ನೀಂ ಸುಖವ ಪಡೆದೆಯೆನುತಾ॥
ಸುಗುಣಖನಿ ರಾಮ ಪುರಂದರಸನನುಜಾತಂಗೆ।
ನಿಗಮಾರ್ಥಗೋಪ್ಯಸಾರವನೊರೆದು ಕಲ್ಮಷವ।
ತೆಗೆದಖಂಡಾನಂದಗೊಳಿಸಿದಂ ವಾತ್ಸಲ್ಯದಿಂದ ಕೇಳದ್ರಿಜಾತೇ॥ (61)

ಸಂಧಿ 12 ಕ್ಕಂ ಪದ 503॥

---

## ಹದಿಮೂರನೆಯ ಸಂಧಿ.

ಸೂಚನೆ॥ ಮಾರುತಾತ್ಮಜನ ಸವಿನುಡಿಯಿಂದ ಭಾಸ್ಕರ ಕು।
ಮಾರನೆಚ್ಚತ್ತು ಜಗತೀತಳದೊಳುಳ್ಳ ಕಪಿ।
ವೀರರಂ ಕರೆಯೆ ಚರರಂ ಕಳುಪಿ ಸಂತಸವ ತಾಳ್ದ ಶರದಾಗಮದೊಳು॥

ಪದ॥ ಇನಿತು ಸಂಪದಮುಖವ ತೋರ್ದ ಮಾತುರದಿ ಧಿ।
ಕ್ಕನುವಿನಿಂದಾಕ್ರಮಿಸಿ ಲೋಕಬಾಂಧವನಿರವಿ।
ಗನುಮಾನಮಂ ತಂದು ರಾಜಮಾರ್ಗವನುಳಿದು ತತ್ಸಂತತಿಯನು ಪಳಿದು।
ಮನಬಂದ ತೆರದಿ ಸಂಚರಿಸಿ ಗರ್ಜಿಸಿ ಕೆಡಿಗ।
ಳನು ಕರವ ನಿಷ್ಠುರಜಡಾತ್ಮಜೀವನ ಪೋಗಿ।
ಘನತೆಯುಳದತಿ ದೈನ್ಯಕೃಪಣನಂದದಿ ಮೇಘವೆಸದವದ್ರೀಂದ್ರಜಾತೆ॥ (1)
ಸಂಪತ್ಸಮೃದ್ಧಿಯಂ ಸರ್ವತೋಮುಖಮಾಗಿ।
ಸಂಪಾದನಂ ಗೈದ ಖರ್ವ ಕಾಮೋನ್ಮೋದ।
ದಿಂಪಿನಿಂ ಚಪಲಾಂಗನಾಸಕ್ತಿ ಮಿಗ್ಗಳಿಸಿ ಸ್ತನಿತಮನಿಗಳತೋರಿ॥
ಲಂಪಟದ ಭೋಗವ ಶರದುಗ್ರುವಿನುಪದೇಶ।
ಸಂಪನ್ನತೆಯೊಳುಳಿದು ನಿರ್ಮಲಾಂಗತೆವೆತ್ತು।
ಸಂಪಿನಿಂದಿಹ ಮೌನವಾಂತಮನಲಲ್ಲಿ ನಿರ್ಮಲಾಭ್ರಗಳೆಸೆದವು॥ (2)
ಪತ್ರಿಗೆಸಗಿದ ಪ್ರಕೃತಿಯು ಮರದಗಸ್ತ್ಯೋದಯವ।
ನತಿಶಯಮೆನುತ್ತರಿತು ಸಹಜಜಡಭಾವಸಂ।
ಗತಿಯುಳಿದು ನಿರ್ಮಲತೆವೆತ್ತು ರಾಜೀವ ನದಿಗಳಮಲಗುಣಗಣವ ಕೇಳ॥
ಮತಿಯುತರ ಸಂಗತಿಯು ಮಾಡಿ ಮಾನಸವೃತ್ತಿ।
ಯತಿಗಳದು ತನುವಿನಂದದಿ ಮನವನನುಕರಿಸೆ।
ಕ್ಷಿತಿಗೆ ನಡತಂದವೊ ಮರಾಳಸಂಕುಲಗಳೆನಲೆಸೆದವಾವಾವೆಡೆಯೊಳು॥ (3)
ಮಲಿನಮಾತಿ ನಿಷ್ಠುರ ಚಪಲ ಕುಲಗೆಡುಕ ತ।
ನ್ನೊಲುಮೆಯಿಂದಿರ್ದರೆಂದೊರೆವ ನಿಯತರವ ಭೂ।
ತಳವನಂಟದಲೊಂದು ಕಂದಾಯಬಾಳ್ಕೆಯಂ ಮಾಳ್ಪ ಘನನಾಶ್ರಿತರಿಗೆ॥
ಗೆಲವದೇನಹುದು ಗರಿಮುರಿಪೋಗಿಕಂಠದೊಳು।
ಸಿಲುಕೆ ಧನಿಪೊರಮಡದೆ ಪೊದೆಪೊದೆಗಳಂ ಪೊಗುವ।
ವಳೆ ನೀಲಕಂಠತತಿ ಜಗದಿ ನೀಚಾಶ್ರಯರಿಗಹವೆ ಸುಖಸಂತತಿಗಳೂ॥ (4)

ಘನತಮತ್ಸ್ಯನ್ನದಿಂ ರಾಜಾನ್ನದರ್ಶನಂ ।
ಜನಿಸದಾದುದೆನುತ್ತ ಕ್ಷುತ್ಪಿಪಾಸೆಗಳಿಂದ ।
ಮನುದಿನಂ ತ್ರೊಳಲ್ವ ಜೀವಂ ಜೀವಸಂತತಿಗೆ ಸದ್ಯೋದಯದಿ ತೋರುವ ॥
ಮನಸಿಜನ ಮಾವನ ಕರಂಗಳಂ ಪಿಡಿಪಿಡಿದು ।
ತನತನಗೆ ಚುಂಬಿಸಿದವಮೃತವನಿಗಳ್ ಧರೆಯೊ ।
ಳನುವಿಂದ ಕೆಡದವ್ರೋಯೆನಲು ಮಲ್ಲಿಗೆಗಳಲ್ಲಲ್ಲಿ ರಾರಾಜಿಸಿದವ್ರೊ ॥ (5)

ಸತ್ಸಂತತಿಗೆ ಕಳೆಯು ಪೆರ್ಚಿದುದು ದಿಕ್ತತಿಗ ।
ಳುತ್ಸವವು ಸಾರ್ಚಿದುದು ತರಣಿಸಸಿಮಂಡಲಗ ।
ಳುತ್ಸನ್ನತೆಯು ದುರ್ದಿನಂಗಳಾದವು ಸದಿನವಂಗಳಮಲತೆಯಾಂತವು ॥
ವಾತ್ಸಲ್ಯದಿಂದಂಬುರಾಸಿ ಮಾಂಗಲತೆ ಸಂ ।
ಪತ್ಸಮೃದ್ಧಿಯನಾಳ್ದುದಲ್ಲಲ್ಲಿ ನೃಪರಾ ಕ ।
ರತ್ಸಮಯದೊಳು ವಿಜಯದುತ್ಸುಕದಿ ನಲಿವರಿನ್ನೆಂತೊ ನಿರ್ಮಲದತಿಶಯಂ ॥ (6)

ಸರಸಿಗಳ ಸನ್ನಿಧಿಯು ಸಾಧುಭೃಂಗಾಂಗನಾ ।
ವರಗೀತ ಕರಮೆಸದವಲಲ್ಲಿ ವಿಚಕಿಲವ ।
ಸುರಭಿಳಿತಪವಮಾನ ಸುಳಿದ ದುರ್ದಿನದಾಂಧ್ಯಪರಿಯು ಹಂಸಾಳಿನಗುತ ॥
ಚಲಿಸಲನುಗೈದುದಮೃತಾಂಶುಮಂಡಲ ಜಗ ।
ದ್ಭರಿತ ನಿರ್ಮಲತೆಯಿಂ ರಾಜಿಸಿತು ಭೂತಳಕೆ ।
ಬರೆ ಶರದಭ್ರಮೆ ಸಕಲ ಸಂಪತ್ಸಮೃದ್ಧಿ ಮೈದೋರಿದುದು ಫಲರೂಪದಿ ॥ (7)

ಲೋಕಬಾಂಧವನೆಂಬ ಪೆಸರಿಂದ ರವಿಕರಾ ।
ನೀಕದಿಂ ಲವಣೋದಧಿಯ ಜಲವಗ್ರಹಿಸುತಂ ।
ದಾಕೆವಾಳತೆವೆತ್ತು ಕಾವಚಿತ್ಕವೆನಲೀವ ದಾತೃತ್ವಮೇನೆನುತಲಿ ॥
ಆ ಕಳಾನಿಧಿಯೊಂಟುತಿಂಗಡಲ ದಯದೆ ಭೂ ।
ಲೋಕಕೊಮ್ಮನದಿ ತತ್ಸುಧೆಯು ಕರವನೊಯನಲ್ ।
ಶ್ರೀಕರದ ಬೆಳ್ದಿಂಗಳೇಂ ಮನಂಗೊಳಸುವದೊ ಕ್ಷೀರಾಬ್ಧಿ ಮೇಲ್ವರದೊಲು ॥ (8)

ಮನದ ಚಪಲತೆಯಿಂದ ಕ್ಷಣಕೊಂದು ಪರಿಯಾಗಿ ।
ಘನದುರ್ದಿನಾಪಾದಿಯೆನಿಸಿ ಮಿತ್ರನ ಸಿರಿಗೆ ।
ಕನಲುತಿಹಮಲಿನವಿರ್ದೆಡೆಯು ನಿಜಮಂ ತೋರಿಸಲ್ಬಾರದೆಂದೆನುತ್ತು ॥
ಮುನಿದಿರ್ದ ಕಾಲವಶದಿಂದುಷ್ಣನೈದಲ್ಕೆ ।
ತನಗೆ ಶ್ರೇಯಸ್ಕರವ ಕರೆವ ದ್ವಿಜಸಂತತಿಗೆ ।
ಮನದಿಷ್ಟಮನ್ನೊಮ್ಮೆ ಕೊಟ್ಟನೋಯೆನೆ ಪರದುವತಿಸಾಂದ್ರ ಚಂದ್ರಾತಪಂ ॥ (9)

ಗಗನರಂಗದಿ ಶರದ್ರಮೆಯೆಂಬ ನಟಿಯು ಸಸಿ ।
ಮೊಗತಾರಕೋನ್ಮೇಷಗೈದು ಚಂದ್ರಿಕೆಯೆಂಬ ।
ನಗೆದೋರಿ ಘನಯವನಿಕೋಲ್ಲಂಘನೆಯಮಾಡಿ ಹಂಸಕಧ್ವನಿಗಳಿಂದ ॥
ಬಗೆಗೊಳಿಸಿ ಲಾಸ್ಯರುಚನಂ ಗೈಯುಲಿಟ್ಟುಸುತ ।
ದಿಗಧಿಪಾಂಗನೆಯರುಂ ನಗೆಯು ಬೀರುವರೊಯೆನ । (10)
ಲೊಗುಮಿಗೆಯು ನಿರ್ಮಲತೆಯಾಂತೆಸದುದಾಸಮಯದೊಳಗಂಬಕಂ ಮುದದೊಳು ॥

ಪರಿಪಕ್ವಶಾಳಿಕಾವನಪಾಲಿಕಾಗಾನ ।
ಪರವಶತೆಯಾಂತ ಪಾಂಥರ ಹೃತ್ಕುರಂಗಗಳ ।
ತರಿಯೆ ಸ್ಮರಮಲ್ಲಿಕಾಸುಮ ಸಿಳೀಮುಖದಗ್ರದೊಳು ಭೃಂಗವಿಷಬಿಂದುಮಂ ॥
ತ್ವರಿತದಿಂದಿಡಲಂದಿನಿಂದಮಿಂದಿಂದಿರಗ ।
ಳುರು ಸಿಳೀಮುಖನಾಮ ಮಾಗಿ ಪಥಿಕರ ಕುಲವ ।
ನರೆಮಪಾವಾವೆಡೆಯುಲಾರಡಿಗಳಾರಡಿಗಳೆಂ ಮನೋಹರಮಾದುದೋ ॥ (11)

ಚಕ್ಕವಕ್ಕಿಗಳಂಗಹಸ್ಕರೋಪಾಸನೆಯು ।
ಮಿಕ್ಕು ಜೀವಂ ಜೀವರತಿಗೆ ಚಾಂದ್ರಾಯಣವ ।
ಸೊಕ್ಕು ಮೌನವ ಬಕಂಗಳಗೆ ಹಂಸೀಗಣಕೆ ತೀರ್ಥಯಾತ್ರಾನಿಯಮಮಂ ॥
ಯೆಕ್ಕಿತುಳ ನದಿನದಗಳಗೆ ಗುಹಾವಾಸಮ ।
ನ್ನಿಕ್ಕರಿಂದುಪದೇಶ ಗೈಯಲ್ ಶರದ್ಯೋಗಿ ।
ಕಕ್ಕುಲಿತ್ರಯಿಂ ಪಿಡಿಮುದಾಸಮಾಯು ಘನಾಪಾಯಕೃಚ್ಛ್ರವ ಚಾತಕಂ ॥ (12)

ಸರ್ವೌಷಧಿಗಳಿಂದ ಸಕಲ ಫಲಪುಷ್ಪದಿಂ ।
ಗೀರ್ವಾಣರೆಲ್ಲರಂ ಸಂತತಂ ಪಾಲಿಪಳ್ ।
ಸರ್ವಂ ಸಹಿಯೆನುತ್ತಮಿಂದ್ರ ಸಂತಸದಿಂದ ನವರತ್ನಭೂಷಣಗಳ ॥
ಉರ್ವಿಗರ್ಪಿತಗೈದ ತೆರನಂತೆ ಫಲಪುಷ್ಪ ।
ದುರ್ವಾರ ಸಂಪತ್ತಿನಿಂದ ನಿಬಿರೀಸದಿಂ ।
ಸರ್ವಮಂಗಳಮಾಗೆ ತೋರ್ದು ಶರತ್ಸಮಯ ಶ್ರೀಕಲಿತ ಸದನದಂತೆ ॥ (13)

ಮರಕತದ ಮಣಿಯ ಭೂಷಣವ ಸಿಂಗರಗೈದು ।
ಪರಿಪರಿಯ ಚಿತ್ರವಸ್ತ್ರಗಳಲಂಕೃತಿವೆತ್ತು ।
ಸುರುಚಿರದ ಫಲಗಳನು ಕರದಿ ಕಾಣಿಕೆವಿಡಿದು ಪುರುಷೋತ್ತಮನ ಚರಣದ ॥
ಪೊರೆಗೈದಿ ಭಕ್ತಿಯಿಂದೆಚ್ಚರಿಸಿ ಲೋಕವಂ ।
ಪೊರೆಯಲನುಗೈವಳೊ ಧರಾವನಿತೆ ಭುವನದು ।
ದ್ಧರಣೆ ಗೈವರೆನಲ್ಕೆ ತೋರ್ದುದಖಿಲ ಸಮೃದ್ಧಿಯಿಂದಮಾ ಕಾಲದಲ್ಲಿ ॥ (14)

ಜಯ ಹಂಸ ಸಂಸಮುಪಯೋಗಿ ಜೀವನಭದ್ರ ।
ಜಯ ಸಿಂಧು ಜೀವಸಮುದಾಯದ ವಿಲಾಸಕರ ।
ಜಯ ಪುಣ್ಯಶಾಲಿ ಫಲಸಂಪ್ರಾಪ್ತಿಸಾಧನನೆ ಜಯ ದುರ್ಗಸಾಧ್ಯಹರನೆ ॥
ಜಯ ಸದ್ಗುಣಶ್ರೇಣಿ ಶ್ರೀಕರನೆ ಶುಭಕರನೆ ।
ಜಯಯೆನುತ ಕಮಲಾಗುಣಶರಂ ನೃಪತಿಯುಂ ।
ದಯದಿಂದ ಪೊಗಳ್ವ ಮಾಗಧರಂತೆ ಭೃಂಗಾಳಿ ಸಲ್ಲಲಿತದಿಂದೆಸೆದವು ॥ (15)

ಅಂಬರದ ನಿರ್ಮಲತೆಯಾಗೆ ಹಂಸೋಲ್ಲಾಸ ।
ಮಿಂಚೆನಿಸ ಚಂದ್ರಕಾಂತಗಳಿಂ ಪ್ರವಾಹಗಳು ।
ಸಂಭ್ರಮದೊಳೈತರಲು ಕೋಕನದ ವಿಭವದೊಳ್ ಭೂಮಿಚಕ್ರಂ ನಲಿದವು ॥
ಸಂಭ್ರಮಿತ ವಾಹಿನೀ ವೈಶ್ಯದ್ಯ ರಮಣೀಯ ।
ಶುಂಭಪ್ರಫುಲ್ಲ ಮಲ್ಲಿಗಗಳೈಸಿರಿ ಪರ್ಚೆ ।
ತುಂಬಿದಾಪಾಯದೊಳಗಖಿಲೇಷ್ಟಸಾಧನಗಳಾದುದಾ ಪರರಕುಲಕೇ ॥ (16)

ಸರಸಿಜೋದ್ಭವನಂತೆ ಹಂಸಾನುವರ್ತಿನಡೆ ।
ಸರಸಪಾಂಚಾಲನೋಲ್ ಪದ್ಮಿನೀಯನುಸರದೆ ।
ವರಜಪೋಲ್ಲಾಸದಿಂದುರು ಯೋಗಿಯಂದದಲೆ ಸಕಲ ಕಾಲುಷ್ಯಹರದೆ ॥
ಹರಿನಾಮಮೆಂಬಂತೆ ನೀಲಕಂಠದ್ವೇಷ ।
ಕರದಕ್ಷನೆಂಬಂತೆ ಮೆರೆದುದು ಶರತ್ಸಮಯ ।
ನಿರತಂ ಸರಸ್ವತೀ ವೈಭವದಿ ಸತ್ಕವಿಯ ತೆರದಿ ರಾರಾಜಿಸಿದುದು ॥ (17)

ಅತಿಮನೋಹರಶರತ್ಸಮಯದುದಯವನು ಮಾ ।
ರುತಿ ಕಂಡು ಮಂತ್ರಿಜನರೊಡವೆರದು ಕಾರ್ಯ ಸಂ ।
ಗತಿಯ ಕಪಿರಾಜನೊಳು ಪೇಳ ಸಾಧನಗೈಯಲೈತಂದನೊಲವಿನಿಂದಾ ॥
ಸತಿಯರೊಳು ಸಲ್ಲಾಪಮೆಸಗುತಂತಃಪುರದಿ ।
ರತಿಯಿಂದಮಿರ್ದ ಭಾಸ್ಕರತನಯನೀವಾರ್ತೆ ।
ಹಿತವಾಗೆ ಬೇಗ ಪೊರಮಟ್ಟು ಗದ್ದುಗೆಯಲ್ಲಿ ಮಂಡಿಸಿಯೆ ಬೆಸಗೊಂಡನು॥ (18)

ಯೇನಿರಚ್ಚರಿ ಕಪಿಪ್ರವರರೆಲ್ಲರು ಸಮಯ ।
ದಾನಂದವಿಭವವನ್ನುಳಿದು ಸಂಗತದಿಂದ ।
ದೇನು ಕಾರಣ ಬಂದುದಾಯಿತೆನಲ್ ಮಂತ್ರಿಗಳ ಮಧ್ಯದೊಳ್ ಮಾರುತಸುತನು ॥
ಜ್ಞಾನನಿಧಿಯಾದ ಕತದಿಂ ಪೇಳ್ ದಾಕ್ಷಿಣ್ಯ ।
ಮೇನಿಲ್ಲದತಿ ನಿಷ್ಠುರಾಂಗತೆಯ ನುಡಿಗಳಂ ।
ತಾನೊರೆಯಲನುಗೈದನಾ ಸಭಾಸದರೆಲ್ಲ ನೋಡುತಚ್ಚರಿಗೊಂಬೊಲು ॥ (19)

ಕಾಲದೇಶಂವರ್ತಮಾನಸ್ವರೂಪಗಳ ।
ಮೇಲುಕೀಳುಗಳ ತತ್ಕಾಲೋಚಿತಂಗಳಂ ।
ನ್ನಾಲಸ್ಯಮಿಲ್ಲದಾರೈದು ಮಂತ್ರಾರ್ಥೈಕಪರನಾಗಿ ಲೋಕವನ್ನು ॥
ಪಾಲಿಸುವನಾವನವನೆಂದಿಗುಂ ಸಿರಿಯು ಸಂ ।
ಚಾಲಿಸದೆ ನಿಲುವುದತಿ ಮತ್ತ ಪಾನಾಸಕ್ತ ।
ಶೀಲನಾದವಗರಸುತನ ನಿಲುವದೆಂತಕಟವಾಜನಗಳುಳವದೆಂತು ॥ (20)

ತಿಳದು ಕಾರ್ಯಾಕಾರ್ಯ ಸಂಗತಿಯನಾಳ್ದನಗೆ ।
ತಿಳುಪಿ ರಾಜಾರ್ಥ ವ್ಯರ್ಥವನೈದದಂದದಿಂ ।
ಮಳುಪುವಂ ಬುದ್ಧಿಯುತನಾದ ಸನ್ಮಂತ್ರಿಯವನುಳಿದು ನೃಪಚಿತ್ತವಿಡಿದು ॥
ಖಳಪಿಸುಣರೊಡವೆರದು ಕಾಲವಂ ಕಳೆವನಾ ।
ನೆಲದ ವಿಪ್ರಗೆಂತು ಗೆಲವು ಸಮನಿಪುದರಸ ।
ಸುಲಭಮೆನಿಸುತಲಿ ದಾಕ್ಷಿಣ್ಯಮಂ ಹಿತಕರವನುಸುರ್ವನಾಲಿಸುವುದೊಳಿದು ॥ (21)

ಘಟ್ಟಬೆಟ್ಟಗಳೊಳಗೆ ತಿರುಗಿ ಬಾಯಾರಿ ಕಂ ।
ಗೆಟ್ಟು ಶೋಕರವಟ್ಟು ಪೇರಡವಿಯಲಿ ತೊಳಲಿ ।
ಪಟ್ಟಪಾಡುಗಳನೆಲ್ಲ ಮರದು ಸುಖದೊಳ್ ಬೆರದು ಮಾಡಿದುಪಕೃತಿಯ ಮರದು॥
ಬಿಟ್ಟಾತ್ಮಹಿತವ ವೈಶಿಕರಂಜನೆಗೆ ಮನವ ।
ಕೊಟ್ಟೀ ಕೃತಘ್ನತೆಯನಾಂತನಿಹಪರಮೆರಡು ।
ಕೆಟ್ಟಪುದೆನುತ್ತರಿಯದಾದರೇಂ ಪೇಳುವದು ಬುದ್ಧಿಯಿಲ್ಲಿಗೆ ಪೋದುದು ॥ (22)

ಹಿತವನಾಚರಿಸಿದರನೆಂದಿಗುಂ ಮರೆಯದಲೆ।
ಮತಿಯೊಳತಿಶಯದೇವತಾಕಾರಮೆಂದರಿತು।
ಸತತ ನಾವ್ರು ಸೇವಿಪ್ರದು ಸಾಧುಜನಸಾಮಾನ್ಯಧರ್ಮ ಭೂಮಿಾತ್ರಳದೊಳು॥
ಸತಿಸುತಾದಿಗಳು ಸಕಲೈಶ್ವರ್ಯಸಂಪದವ।
ಕ್ಷಿತಿಯು ಸೆಳೆದತಿಬಳನ ತರಿದು ರಾಜ್ಯವನಿತ್ತ।
ಕ್ಷಿತಿಪತಿಯು ಕನಸಿನೊಳು ಸ್ಮರಿಸದಿರ್ಪುದಿದಾವ ನೃಪನೀತಿ ಕಪಿವರೇಣ್ಯ॥ (23)

ಹರುಷಂ ವಿಷಾದಂಗಳೊಂದಲ್ಲದೆರಡಿಲ್ಲ।
ಶರಿರಮಾತ್ರಂ ಭೇದಮೆನುತಗ್ನಿಸಾಕ್ಷಿಯೊಳ್।
ಕರವಿಡಿದು ಭವದೀಯಶತ್ರುವಂ ಸಂಹರಿಸಿ ಸಾಮ್ರಾಜ್ಯಸುಖವನಿತ್ತ॥
ಧೊರೆ ಚಿತ್ತದನುತಾಪದಿಂದಿರುವದಂ ತಿಳದು।
ಪರಿಪರಿಯ ಸುಖವನನುಭವಿಸೈವ ವಾಂಛೆಗೇಂ।
ತೆರವಿಲ್ಲದಲೆ ಚಿತ್ತಮೊಪ್ಪಿದುದು ಕಪಿರಾಜಮೆಸರದೂಣಯಮಾಂತಾದು॥ (24)

ಸಲಹಿದೊಡೆಯಂಗಾದ ಪಲಮಗೆಯ ಸಂಬಾಧ।
ದಾಲಿ ತನ್ನದೆಂದರಿತು ಉಚಿತಮೆನಲೆಚ್ಚರಿತು।
ಕಳಿತುಪಾಯಗಳೆಸಗಿ ಕಾರುಣ್ಯಗಳು ತೊಲಗಿ ಪೋಗುವಂದದೆ ಮಾಳ್ಪುದು॥
ನೆಲದಿ ಸಜ್ಜನಕೃತ್ಯ ಸನ್ಮಾರ್ಗಮುಪಹೃತ್ಯ।
ಕಲಿಧರ್ಮಮನುಸೃತ್ಯ ಕಲಿತೆವೆತ್ತುದು ಸತ್ಯ।
ವಲಘುಮತಿ ರಘುಪತಿಯು ಹಿತವ ಚಿಂತಿಸದಿರ್ದಡೆಂತಹುದು ಸುಕ್ಷೇಮವು॥ (25)

ಮೂರನಂಬಿನ ಮೊನೆಗೆ ಮರುಗಿ ದುಮ್ಮಾನದಿಂ।
ನಾರಿಯುಂ ನೆನೆನೆನೆದು ನಡುಗುತಿರೆ ಚಿತ್ತಕುಂ।
ತೋರಲೀಪತ್ಕೋಪಮುದನು ಸಮ್ಮತಗೊಳಪರಾರುಂಟು ಮೂಲೋಕದಿ॥
ನೀರು ಪೋಗದ ಮುನ್ನಲೇರಿಯುಂ ಬಲಗೈದು।
ದಾರಮತಿಯಿಂ ಬದುಕಲಧಿಕಮಲ್ಲದಡೆ ಕೈ।
ಶೋರಶೇಮುಷಿ ಯಶಶಿಕಾಂತಾಂಗಲೇಪಮುಷಿ ದೌರ್ಭಾಗ್ಯ ಪುಸಿಯು ಜೀಯ॥ (26)

ಕೃತಸುಕೃತಪರಿಪಾಕಫಲರೂಪ ರಾಮಮೂ।
ರುತಿಯು ನಮಗಬ್ಬಿದುದು ಸೌಭಾಗ್ಯ ಮಬ್ಬಿದುದ।
ಮತಿಗೆಟ್ಟು ಪೋಗಾಡಿ ಮಗುಳಪಯಶವ ಕೂಡಿ ಕಾರ್ಪಣ್ಯತೆಗಳ ನೋಡಿ॥
ಕ್ಷಿತಿಯೊಳಂ ಬಾಳ್ದೇನು ಸತ್ಯಮಾಳ್ದರೆ ಭಾನು।
ಸುತನ ಕುಲ ಪೆರ್ಚಿಗೆಯು ಸರ್ವರಿಗೆ ನಚ್ಚಿಗೆಯು।
ಇತಿಯುಪ್ಪುದೆಂದೆನು ಪೇಳ್ದುದಾಲಿಸಿ ಮಾತ ಕಾಯ್ದುಕೋ ಪ್ಲವಗನೇತಾ॥ (27)

ದೊರಕಿದ ಸಮೃದ್ಧಿಗಂ ಸುಹೃದನುಗ್ರಹವೆ ಫಲ।
ನರದೇವ ಗಿರಿತಟದಿ ನೀರದಾಪಾಯಮಂ।
ಪರಿಕಿಸುತಖಿರಲಾದುದೀಗ ಕಾರ್ಯದ ಸಮಯ ಶರದಾಗಮಾದಿ ಜೀಯ॥
ಸ್ಮರಿಸುವದಕಿಂ ಮುನ್ನ ಪೋಗಿ ರಘುಕುಲರನ್ನ।
ಪರಮಪಾವನ್ನಪಾದವ ಕಾಂಬುದದು ಚೆನ್ನ।
ಕರುಣಾಂಬುನಿಧಿ ತಪ್ಪನೆಣಿಸದೆ ಪೊರೆವ ತನ್ನ ಪೊಂದಿದವನೆಂದು ನಿನ್ನ॥ (28)

ಮತಿಯುತನೆ ಕೇಳ್ ಮೂರುಲೋಕಮಂ ಸೃಜಿಸಿ ಮಗು ।
ಳತಿಶಯದಿ ಪೊರೆದು ಮತ್ತುಪಸಂಹರಣೆಗೈವ ।
ರತಿಬಲಾಢ್ಯರೆನುತ್ತಮರಿವುಂಟು ಭವದೀಯ ಮಾನಸಕೆ ಮೇಣವರಿಗೆ ॥
ಇತರ ಸಾಹಾಯ್ಯದಿಂದೇನಹುದು ಕಾಲಸಂ ।
ಗತಿಯನನುಸೃತಿಗೈವಡವರು ಮಾನವರಂತೆ ।
ಕ್ಷಿತಿಯೊಳಗೆ ಸಂಚರಿಪರೆಂಬುದನುಭವಸಿದ್ಧಮಾಗಿ ಕಂಡಿರ್ಪುದರಸ ॥ (29)

ಬೇಗ ರಘುವರನೆಡೆಗೆ ಪೋಗಿ ಕೋಪಾವೇಶ ।
ಮಾಗದಂದದಿ ತಿಳುಪಿ ಕೊಳಲುಚಿತ ಸುಖದುಃಖ
ದಾಗುಹೋಗುಗಳೆಲ್ಲಂ ಬೆರೆದಿರ್ದ ಕತದೊಳಂ ಭಯವು ದಾಕ್ಷಿಣ್ಯಗಳನು ॥
ನೀಗಿತೋರ್ದುದನೆಲ್ಲ ಚಿತ್ತೈಸವೇಳ್ಕನು ।
ದಾಗಸವ ಚಿತ್ತದೊಳಗಿಡದೆ ಸಂತತಿಗಧಿಕ ।
ಮಾಗಿ ಶುಭವೊದಗುವಂತಾಳೋಚಸಂಗೈವುದೆನುತ ಮೌನದೊಳಿರ್ದನು ॥ (30)

ನೂರಕೊಂದೊಂದೆಣಿಕೆಗೈದಾಣಿಮುತ್ತುಗಳ ।
ಸಾರಂಗಪಾಂತ ಮಾರುತಿಯ ವಚನಗಳಿಂದ ।
ತೋರಸಂತೋಷ ಮೈದೋರಿ ಭಾಸ್ಕರತನಯನೈತಂದು ಬಿಗಿದಪ್ಪುತ ॥
ಧೀರರಗ್ರೇಸರ ಭವದ್ವಾಕ್ಯದಮೃತದಾ ।
ಸಾರದೊಳಗಾಳ ಶಾರೀರ ಸೌಖ್ಯಾನಂದ ।
ಪೂರದೊಳ್ ಮುಳುಗಿ ಮುಂಗಾಣದಿದೆ ಮಾನಸಂ ಧ್ಯಾನಿಸುವಡರಿದೆಂಬೊಲು ॥ (31)

ದೊರೆದಪರು ಹಿತವನಾಚರಿಸುವರು ಬುದ್ಧಿಗಳ ।
ನೊರೆವ ಜನ ಸಿಲ್ಕರೊಂದೆಡೆಯ ಮತಿ ಹಿತವೆರಡು ।
ಬೆರೆದಪರು ಸಮನಿಸುವದತಿಶಯವು ರುಚಿರೋಗಹರವಾಗಿ ಕಂಗೊಳಸುವ ॥
ಪರಮವೃಷಧಿಯು ಪೂರ್ವಪುಣ್ಯಾಪರಿಪಾಕದಿಂ ।
ಮರುತಾತ್ಮಭವರೂಪದಿಂದ ಸಾಕ್ಷಾತ್ಕರಿಸಿ ।
ಪೊರೆವುದೆಂದಾನಂದಗೊಳುವೆನಿದು ಮದ್ಭಾಗ್ಯಭೇಯದ ಕೃಪಾಸ್ಪದವಲೆ ॥ (32)

ಒಲವರಿದು ವಿನಯಸನಯಗಳಿಂದಮುಪಚರಿಸಿ ।
ಚೆಲುವೆನಲ್ ಚೆಲುವು ನೀಚಗಳ್ಸ್ನಲತಿನೀಚ ।
ನೆಲದೊಳಲ್ಲಮೆನುತ್ತಮಿರುವರುದರಂಭರಿಗಳಲ್ಲಲ್ಲಿ ನೃಪರೆಡೆಯೊಳು ॥
ಬಲುಸರದ ನುಡಿಗಳಿಂದಾಡಿ ಕಾರ್ಯವ ನೋಡಿ ।
ಗೆಲವ ತೋರಿಸುತೆಡೆರ ಪಾರಿಸುತ ಮಂತ್ರಿಗಳ ।
ಕುಲಶಿಖಾಮಣಿ ನೀನೆ ಮದ್ವಂಶಮುಂ ಭವದ್ವಶಮಲ್ತೆ ಕಪಿಲಲಾಮ ॥ (33)

ಎನುತ ಮಾರುತಿಯ ಬಹುವಿಧದಿಂದಮುಪಚರಿಸಿ ।
ದಿನಕರಾತ್ಮಜ ರಾಜಕಾರ್ಯದಾಳವ ತಿಳದು ।
ವನಚರೋತ್ತಮರ ಕರೆದಾಜ್ಞಾಪನೆಯನಿತ್ತು ಚತುರಬ್ಧಿಪರಿಯಂತದ ॥
ವನನದೀಗಿರಿತಟದಲಿರ್ಪ ಕಪಿಯೂಥಪರ ।
ಮನದ ವೇಗದಲೈದಿ ಕರೆತರುವುದೈ ಪತ್ತು ।
ದಿನಕೆನ್ನ ಪೊರೆಗಿದರೊಳಾವನುಳಿದರು ರಾಜದಂಡನೆಗೆ ಗುರಿಯಪ್ಪನು ॥ (34)

ಸಮಯಕೊದಗಿದಡೆಮ್ಮ ಸಮನೆಂದು ಮನ್ನಿಸುವೆ।
ಮಮತೆ ಯಿಲ್ಲದೆ ನಿಂದಡವರ ಶಿಕ್ಷಿಪೆ ಬೇಗ।
ಶಮನಿಗೊಪ್ಪಿಪೆನೆಂದು ಶಪಥಪೂರ್ವಕವಾಗಿ ಕಪಿವರರಿಗರುಪಿ ಕಳುಪೆ ॥
ಸಮದಗಡಗರ್ವಸರ್ವಂಕಷ ಪ್ಲವಂಗಮರು।
ಶ್ರಮದಿಂದ ನಾಲ್ದೆಸೆಗೆ ರಾಜಶಾಸನವಿಡಿದು।
ಗಮಿಸಿದರು ತರತರದ ವೇಗಲಾಂಘನಜಾಂಘಿಕೋತ್ಕರ್ಷಗವುನವಿಡಿದು ॥ (35)

ಸಕಲಸನ್ನಾಹದಿಂದ ಪದುಳದಿಂದಲಿ ಪೋಗಿ।
ಸುಕುಮಾರಚಿತ್ತ ಶ್ರೀರಾಮಪುರದರಸನಂ।
ಯುಕುತಿಯಿಂ ಕಾಣ್ಬೆಂತೆ ಮಾಳ್ಪ ಭಾರಂ ನಿನ್ನದೆನುತ ಮಾರುತಿಗೊಪ್ಪಿಸಿ ॥
ಸಕಲಮಂತ್ರಿಗಳಗಪ್ಪಣೆಗೊಟ್ಟು ಸೂರ್ಯಸುತ।
ನಖಿಲಸಂಪದಸುಖವನನುಭವಿಸಲರಮನೆಗೆ।
ಸುಕರದಿಂ ನಡೆತಂದ ರಘುವಲ್ಲಭನ ಪದವ ನೆನೆವು ತಾನಂದದಿಂದ ॥ (36)

(ಸಂಧಿ 13 ಕ್ಕಂ ಪದ 539.)

---

## ಹದಿನಾಲ್ಕನೆಯ ಸಂಧಿ.

ಸೂಚನೆ ॥ ತಾರೆಯನುನಯದಿಂದ ಬಿನ್ನವಿಸೆ ಲಕ್ಷ್ಮಣಗೆ।
ದಾರುಣಮನಂ ಕೃಪಾಸಾರಮಾಯಮೆಂದೆನಿಸಿ।
ಸೂರಿಯನ ಸುತನನುಪಜಂಗಿ ರಾಘವನೆಡೆಗೆಕರದೊಯ್ದ ಸನ್ಮಾನದೆ ॥

ಪದ ॥ ವಿಮಲಾಂಬರವನುಟ್ಟು ವಿವಿಧಸೊಬಗಳವಟ್ಟು।
ಭ್ರಮರಾಳಿಕೊಳಯೊಳು ನವಸುರಭಿಮಲ್ಲಿಕಾ।
ಸುಮಗಳನ್ನಿಟ್ಟು ವಿಧುಮುಖಚಂದ್ರಭಾಸಮಂ ಬೀರುತಂಜೆಯಗಮನದಿ ॥
ಸಮತುಕರಿಸುತ ದಿಗುಸಮೂಹಗಳನಾ ಶರ।
ದ್ರಮೆ ಬರಲ್ ಕಂಡು ರಾಘವಗೆ ನಿಜವಲ್ಲಭೆಯ।
ಮಮತೆ ಪುಟ್ಟಲ್ಕನುಜನೊಡನೆ ಬೇಳವ ಮನೋರಥವ ಕೇಳದ್ರಿಜಾತೆ ॥ (1)

ಮಲ್ಲಿಗೆಯು ನಸುನಗೆಯು ಮಗುಳೆ ವಿಕಸಿತಕಸ।
ವಲ್ಲಿಗೆಯು ನಯನಗಳ ಮತ್ತಹಂಸೆಯು ಗಮನ।
ದುಲ್ಲಾಸಮಂ ಬಿಸಿಲ್ವಕ್ಕಿಗಳು ವೃತ್ತಕುಚಯುಗದ ಬೆಡಗುಗಳ ರಜೆಯು ॥
ಜಿಲ್ಲಿ ಭೋರ್ಮೊರೆವ ಭೃಂಗಾಳಿ ತಂಗಾಳಿ ಸ್ವರ।
ನುಲ್ಲಸಿತಸಿಂಜನಿಯು ನಿಷ್ಠುರವ ತೋರಿಸುತ।
ಮೆಲ್ಲಿಯಿಂ ನಿಲಲೀಯದಬ್ಜವದನೆಯು ರತಿಯನೀವುತಿದೆಯೇನುಪಾಯ ॥ (2)

ದಾರಿಣೀಪತಿಗಳೀ ಸಮಯದೊಳ್ ಕಾರ್ಯಸಂ।
ಭಾರಂಗಳನುಗ್ಗೈದು ನಿಜಮನೋರಥಗಳನು।
ದಾರವೆನೆ ಪಡೆದವರು ನಿರ್ಯತ್ನದಿಂದಾವು ನಿರ್ಜನಸ್ಥಾನವಿಡಿದು ॥
ಈ ರಾತ್ರಿಗಳ ಕಳದು ವಿವಿಧ ಸಂತಾಪದ ವಿ।
ಕಾರಗಳನನುಭವಿಸಿ ಮುಂದೆ ಸಂಪಾದಿಸುವ।
ಕಾರಿಯವದೇನುಂಟು ಕಪಿಯರಸನೊಳು ನಂಟದಾಯ್ತು ಕನ್ನಡಿಯಗಂಟು ॥ (3)

ಸತಿಸುತರವೆರೆದು ಸಾಮ್ರಾಜ್ಯವೈಭವದಿಂದ ।
ಮತಿಮಂದತೆಯೊಳಿಪ್ಪ ಮರೆದು ಪಾನಾಂಗನಾ ।
ರತಿಯಿಂದ ಮಂದಸೌಖ್ಯಾತಿಶಯಗೊಳುತಿರ್ದ ಸುಗ್ರೀವನತಿದರ್ಪದಿ ।
ಹತವೈರವಾದ ಬಳಿಕಾರ ಬೆಸಗೊಂಡರೇನು ।
ಹಿತಮದಾರಿಂಗೇನು ತನ್ನ ಸುಖ ಲೇಸೆಂಬ ।
ಮತವನಂಗೀಕರಿಸಿ ಕೃತಕೃತ್ಯತನದಿಂದಮೊಂದೆಣಿಸದಿರ್ದ ಗೃಹದಿ ॥ (4)

ಮೊದಲೆ ಕಪಿಗೈಶ್ವರ್ಯ ಸ್ತ್ರೀಸಮೃದ್ಧಿಯು ಪಾನ ।
ಮದವು ಮಸ್ತಕಕಡರೆ ಮದನಾರಿಯಾಗೆ ತನ ।
ಗಿದಿರಿಲ್ಲಮೆಂದರಿದಸಲ್ಲದಯ್ಯರು ಮಾಡಿದುಪಕಾರಗಳನೆಣಿಪನೆ ॥
ಸುದತಿಯರ ಮೇಳದಲಿ ಸುಖಕರ ವಿನೋದದಲಿ ।
ಮುದವೆತ್ತು ಮನವ ಮದನಾಗಮೋದ್ಧತಿಗೈಯು ।
ತುದಯಾಸ್ತಮಯಮೆಂಬ ಭೇದಮೆಳ್ಳನಿತಿಲ್ಲದಲ್ಲಿ ಸುಖಮಿರ್ದನನುಜ ॥ (5)

ಜಗತಿಯುದ್ದಂಡರಣಪಂಡಿತ ಸುರೇಂದ್ರಸುತ ।
ನಿಗೆ ಸಿಲುಕಿದೀ ರಾಜ್ಯ ತನಗೆಂತಡಸಿತೆಂಬ ।
ಬಗೆಯನರಿಯದೆ ಪೋದ ಬಾಲಿಶತೆಗೊಳಗಾದನುಪಕೃತಿಯನೆಣಿಸದಾದ ॥
ಸುಗುಣಿ ಗುಣಗಳನೆಣಿಸಿ ಸಂತೋಷಗೊಳುವಂತೆ ।
ಲಗಿಮನರಿವನೆ ಭೃಂಗಸಾರಸಾಮೋದಕಂ ।
ಸೊಗಸಾಂತರೀತಿಯೊಳು ಭೇಕಂಗಳೇನರಿತು ಸಂಭ್ರಮಂ ಗೊಳುವವೆನಿತು ॥ (6)

ನೀತಿಶಾಸ್ತ್ರಾನುಮತನಿಗಮಾಗಮಂಗಳರಿ ।
ದಾತನಾದಡೆ ಕೃತಜ್ಞತೆಯೆಣಿಸಿ ಭಯದಿಂದ ।
ಸೀತಾಂಗನಾನ್ವೇಷಣಂಗೈದು ಹಿತಮತಿಯೊಳಿಪ್ಪ ಸ್ಮರಿಸುವನಾವಗಂ ॥
ನೀತಿರೀತಿಗಳುಳ್ಳದ ಪ್ಲವಗಗೆಂತೈ ಶಾಸ್ತ್ರ ।
ರೀತಿ ಸಂಭವಮಹುದು ಮಳೆಗಾಲಮಂ ಕಳೆದು ।
ಪಾತಕದ ಮತಿದಳೆದ ಪೆರರುಪಕೃತಿಯನುಳ್ಳದು ಬೆರ್ಚಿ ಸನ್ಮಾರ್ಗಮುಳ್ಳದು ॥ (7)

ಸಾಮದಿಂದೊಡಬಡಿಸಬಹುದು ಸಜ್ಜನರುಗಳ ।
ಕಾಮಿತವನಿತ್ತೊಡಂಬಡಿಸಬಹುದಧಮರ ।
ನ್ನಾಮದಾಂಧರ ದಂಡನೆಗಳಿಂದ ದುರ್ಮತಿಗಳನ್ನು ಭೇದೋಪಾಯದಿ ॥
ಪ್ರೇಮಗೊಳಸುವಡಕ್ಕು ನಾಲ್ಕುಪಾಯಗಳುಳ್ಳದ ।
ಕಾಮಚರ ವನಚರಂ ನಡಿದರಪಯಶ ಶಾಸ್ತ್ರ ।
ಸೇಮಮಾವಗಿಲ್ಲ ಮುಂದೇಂಗೈವುದಿದಕೆಂತು ಪೇಳುಪಾಯಗಳ ಸೊಲ್ಲ ॥ (8)

ಮಾಡಿದುಪಕಾರಮಂ ಮರಣಾಂತಮೆಣಿಸಿ ಹಿತ ।
ಗೂಡಿ ಸುಖಕಷ್ಟಂಗಳೊಂದೆನಿಸಿ ಭೇದಮಂ ।
ಮಾಡದನುದಿನ ತನುವ ತೆತ್ತು ಬಾಳ್ವಾತನವ ಪುರುಷರೊಳಗುತ್ತಮನಲೆ ॥
ಕೇಡನೆಣಿಸುತ ಕೃತಕ ವಚನರಚನೆಗಳಿಂದ ।
ಮಾಡಿದುದ ದಿಟಮೆನಿಸದಂಬರಕುಸುಮದಂತೆ ।
ಮಾಡುವವ ಪುರುಷಾಧಮನೆನುತ್ತ ಪೇಳುವರು [ರಿ ತು] ನೀತಿಜ್ಞರು ॥ [ಸ ತ ತ] (9)

ಮನುಜರಿಂಗಿದು ನೀತಿ ಮತ್ತೆ ತಿರ್ಯಗ್ಯೋನಿ।
ಗಿನಿತು ತತ್ವ ದೂರ ತೋಪಾಸರ ಭಕ್ಷಣಂ।
ಮನುಮಥವಿಕಾರ ಮುಖ್ಯಾಸೇವ್ಯಮೆಂದೆನಿಪುದದನೆಣಿಸಿ ಫಲಮದೇನು॥
ಯೆನಗೆ ನಂಬುಗೆಯಿತ್ತು ವರುಷಾಸಮಯ ಪೋದು।
ದಿನಿತಾದರುಂ ನೆನೆಯದಾದ ನಿಜಮಿಲ್ಲಾದ।
ಗಿನಿತೇನು ದಂಡನಾಯೋಗ್ಯನಲ್ಲದೆ ನೇಹಕನುಚಿತಂ ಸುಗ್ರೀವನು॥ (10)

ಮಿತ್ರವಂಚಕ ಸಾಧುಮಾರ್ಗದೂಷಕ ತನ್ನ।
ಗೋತ್ರಾಪಕಾರಕ ಶಠಂ ದುಷ್ಟದುರ್ವಚನ।
ಮಾತ್ರಾನುಕಾರಿಗಳ ದಂಡಿಸುವುದಿದು ನೀತಿಯಾದರುಂ ಭೂತಳದೊಳು॥
ಮಿಥ್ಯಪದೇಶಿ ಶರಣಾಗತ ಮಹಾಭೀತಿ।
ಮಿತ್ರಸ್ಥರೆನಿತಾಪಕೃತಿಗೈದರುಂ ಕೃಪಾ।
ಪಾತ್ರ ಶಿಕ್ಷಾಯೋಗ್ಯರಲ್ಲವೆನುತಂ ಧರ್ಮಶಾಸ್ತ್ರನುಮತ ಲಕ್ಷ್ಮಣ॥ (11)

ಮದಮತ್ತ ಬಲಿ ಕೃತಘ್ನಂ ಬಲೀಮುಖಕುಲದ।
ಲುದಿಸಿದತಿನೀಚಂ ವರಾಕನಾತನ ಮುಂತೆ।
ನದದಿಟ್ಟ ಧರಣಿಸುತೆಯನ್ನರಸಲನುಗೈವುದೆನುತ ನಿಶ್ಚೈಸಿ ಮನದಿ॥
ಪುದಿದ ರೋಷದೊಳೊರೆದು ಮಗುಳೆಂದ ಕಪಿಯು ಸಂ।
ಪದದೊಳತಿ ಕೃಪಣ ಮರೆಯೊಕ್ಕರೆಂಬುದ ಚಿತ್ತ।
ಸದನದೊಳ್ ಸ್ಮರಿಸದಾದವರಾರು ನೋಡಿದ್ಬೈ ಲಕ್ಷ್ಮಣ ದುರಾರಾಧ್ಯನ॥ (12)

ಶರಣೆಂದೆ ನೀನಲ್ಲದೆನಗೆ ಪೆರತಿಲ್ಲೆಂದೆ।
ಸುರಪಸುತನಂ ಕೊಂದೆ ಪೋದ ಸಿರಿಯಂ ತಂದೆ।
ಹರಣಭರಣಂಗೈದುದೊಂದಾದರುಂ ಮನಕೆ ತರದಾದ ಪ್ಲವಗನಕಟ॥
ವರುಷಾಸಮಯ ನಾಲ್ಕು ತಿಂಗಳೊಳಗಿರ್ದು।
ಬರುವುದೆಂದಾಂ ಪೇಳ್ದು ಕಳುಪಲಾ ಪರಿಗಳಂ।
ಮರೆದನಹಹಾ ಜಲಧಿಕೃತಹೋಮದಂತಾಯ್ತು ಮಾಡಿದುಪಕಾರಮಕಟ॥ (13)

ಆದೊಡೊಳ್ಪತುಗುಣಗಳೆಣಿಸಿ ಫಲವೇನಿಹುದು।
ಸಾಧಿಸಲಸಾಧ್ಯಮೇನಿಹುದು ಸೌಮಿತ್ರಿ ನೀ।
ನೈದಿ ಕಂಡಾ ದುರಾತ್ಮನಿಗೀ ಪರಿಯನೆಲ್ಲ ನಿಲ್ಲಿಸದಲೆಚ್ಚರಿಪುದು॥
ಕ್ರೋಧದಿಂದ ಸುಬಾಹುಮಾರೀಚದುಷ್ಟವೈ।
ರಾಧಖರದೂಷಣತ್ರಿಸಿರ ಮುಂತಾದವರು।
ಪೋದ ಹಾದಿಯನೇಕೆ ಬಯಸುವೆ ದುರಾರಾಧ್ಯತೆಯೊಳಾರು ಬಾಳ್ದರಕಟ॥ (14)

ಕನಕಪುಂಖಾನ್ವಿದಕಣೆ ಯಾವುದಗ್ರಜನ।
ತನುವ ಕೊಂದುದದೀಗ ನೋಡುತ್ತಮಿದೆ ಬೇಗ।
ನಿನಗೈಯನಾದವನ ಪೊರೆಗೆ ಕರದೊಯ್ದಿಡುವರಿದಿರ ನೋಡುತಮೊಸಗಿದೆ॥
ಮನದ ಚಂಚಲಮುಳದು ಪತಿತಾನ್ನತಿಯ ಸೂ।
ಚನೆಯ ಮಾಡದೆ ಪೂರ್ವದುಪಕೃತಿಯ ಚೆನ್ನಾಗಿ।
ನೆನಸು ತನುವಂ ನಿಲಿಸಿಕೊಂಬುದೆಂದಾ ಕ್ಷಣದೊಳುಸುರ್ದಪುದು ಮತ್ತೆ ಕಪಿಗೆ॥ (15)

ಇನಿತು ಪೇಳ್ದಡರಿತು ಕಾರ್ಯೋಪಯೋಗಂಗ ।
ಳನುಗೈದು ಬಂದು ಸೀತೆಯನರಸಿ ನೆಲೆಯನಿಂ ।
ದೆನಗುಸುರ್ದರೊಳ್ಳಿತಲ್ಲದಡೆ ತಮ್ಮಣ್ಣನಿರ್ದೆಡೆಗೈದಲದುವೆ ಲೇಸು ॥
ಯೆನುತ ಪೇಳುವುದೆಂದು ಬಿತ್ತರಿಸೆ ಲಕ್ಷ್ಮಣನಿ ।
ಗನಿತರೊಳ್ ಕೋಪಾಗ್ನಿರುದ್ರನೆಂದದ ಕೋಪ ।
ಘನತೆಯಿಂದಣ್ಣನೊಡನಾಗ ವಿಜ್ಞಾಪನಂಗೈದನತಿರೋಷದಿಂದ ॥ (16)

ನೀತಿವಂತರಿಗೆ ಪೇಳುವ ನ್ಯಾಯ ನಿಷ್ಠುರವು ।
ಕೋತಿಗೇತಕೆ ಜೀಯ ಮುಂಬರಿದು ಕಾಲ್ವಿಡಿದು ।
ಭೂತಳಕ್ಕಪ್ಪಳಿಸೆ ಕುಪ್ಪಳಿಸಿ ಕರುಳ್ಖಂಡೆಗಳನು ಭೂತಗಳಿಗಿತ್ತು ॥
ಪಾತಕನ ಪರಿಹರಿಸಿ ಕಪಿರಾಜ್ಯಮಂ ಸುಖ ।
ಪಾತ್ರಮನ್ನಂಗದಕುಮಾರಗೊಲಿದಿತ್ತು ಸಂ ।
ಜಾತಹರ್ಷದಿ ಪ್ಲವಗಬಲವನೊಡಗೊಂಡಾನು ಬರುವೆ ಪದಪದ್ಮದೆಡೆಗೆ ॥ (17)

ಯೆಂದು ಕಡುಕೋಪದಿಂದೆರಗಿ ಬೀಳ್ಕೊಂಡು ರಘು ।
ನಂದನಂ ಪೊರಡುವದ ನಿಟ್ಟಿಸುತಮಾತ ಕ್ರೋ ।
ಧಾಂಧತೆಯೊಳಾತನಂ ಗಣಿಸದರೆ ನಿಮಿಷದೊಳು ಕಪಿಕುಲಾಧಿಪನ ಪಿಡಿದು ॥
ಕೊಂದಲ್ಲದುಳಿಯ ಶರಣಾಗತನ ಸಂತತಿಯ ।
ನಂದಿಸಿದರೆಂಬ ದುರ್ಯಶ ಸೂರ್ಯವಂಶಕುಂ ।
ಬಂದಲ್ಲದಿರದೆನುತ ತಿಳಿದು ಕರುಣಾವನಧಿ ಲಕ್ಷ್ಮಣನೊಳಂತೆಂದನು ॥ (18)

ಜಲಜದೈಸಿರಿಯನನುಭವಿಸುತೆಡರಡಸಿದರೆ ।
ತೊಲಗಿ ಕುಮುದಿನಿಯೆಡೆಯೊಳಿರುಳಿರ್ದು ತನ್ಮಿತ್ರ ।
ನೊಲುಮೆಯಿಂ ಸಿರಿ ಬಂದರೆಂದಿಂತಂದದೆ ಕಮಲಗಳ ಪೊರೆಗೆ ಬರೆ ಭೃಂಗಕೆ ॥
ಸಲಲಿತದಿ ಸರ್ವಸ್ವವಿತ್ತು ಸಂಭಾವಿಸುವ ।
ರಲೆ ಮಹಾಪುರುಷರಾಶ್ರಿತರ ಗುಣದೋಷಗಳ ।
ಕಲನೆಗೊಳ್ಳದೆ ಕಾಯ್ದು ನಿಜಕೀರ್ತಿಯಿಂ ಸಲಹಿಕೊಂಬುದಿದು ನನ್ನಿಯೆನುತ ॥ (19)

ಚಪಲತೆಯು ಚೇಷ್ಟೆ ಕ್ಷಣಕೊಂದುಪರಿ ದುರ್ವಿಷಯ ।
ಲಪನೆ ವಂಚನೆ ಭೀತಿ ಕಾತರಗಳಾ ಭಂಗ ।
ಕಪಿಗೆ ಸಹಜಂ ಮಾಡಿದಪಕೃತಿಗಳಂ ಮರೆದು ನಿಜಸದ್ಗುಣಗಳನು ಬೆರೆದು ॥
ವಿಪದಂಗಳಂ ಪರಿದು ವಿನಯದಿಂ ಪೊರೆವಡಿದು ।
ನೃಪರ ನೈಜಂ ಪ್ಲವಂಗವನ ಬಲ ಮರೆಯೊಕ್ಕು ।
ಕೃಪೆಯನವಲಂಬಿಸಿದು ಕೃಪಣಸುಗ್ರೀವನದ ವಂದನೆಗಯೋಗ್ಯನನುಜ ॥ (20)

ಏನುದುರ್ಗುಣಮಿರ್ದರೆಮ್ಮ ನಚ್ಚಿದ ಬಳಿಕ ।
ನ್ಯೂನಾಧಿಕಗಳೆಣಿಸದವರ ಯೋಗಕ್ಷೇಮ ।
ಕಾನೆ ಕರ್ತನೆನುತ್ತ ಬಿರುದಾಂತು ಲೋಕಮಂ ಪೊರೆದಪುದಿದೆಮ್ಮ ಮತವು ॥
ಭಾನುಸುತನೆಮ್ಮ ಪ್ರಾಣಾಯಮಾನಂ ಮಗುಳ ।
ದೇನೆಲ್ಲಮಂತರಮೆನುತ್ತರಿತು ಜಸವು ಜಾ ।
ನೀನಮುಪ್ಪಂದದಿಂ ತಿಳುಪಿ ಕರತರವೇಳ್ಕುಮೆಂದೊರೆದನೇಂ ಕರುಣಿಯೊ ॥ (21)

ಸಂತೈಸಿ ಲಕ್ಷ್ಮಣನ ಕಳುಪಲಾಜ್ಞಾಪಿಸಿದ ।
ಸ್ವಾಂತಾನುರಾಗಮಂ ತಿಳಿದು ಕೋಪಂ ನಿಲದೆ ।
ಮುಂತಕ್ಕೈದಿದ ರೋಷಕಲುಷಿತಾನನದಿಂದ ನಿಟ್ಟುಸುರ್ಗಳ ಬಿಡುತಲಿ ॥
ಪಿಂತಿರುಗಿ ನೋಡದತಿವೇಗದಿಂ ಪಥದಿ ತರು ।
ಪಂತಿಗಳ ಕಿಳ್ತಿಡುತ ತೋಳ ಘಾಳಗಳಿಂದ ।
ನಂತೋಪಮಿತನಾಗಿ ಪದಘಟ್ಟಣದಿ ನೆಲನನದುರಿಸುತಮೈತಂದನು ॥ (22)
ಪ್ರಳಯಜಂಝಾನಿಲಾಟೋಪ ಕಾಲಾನಿಲನ ।
ಚಳಕ ಕಲ್ಪಾಂತಭೈರವನರ್ಥರು ಸಂವರ್ತ ।
ಕೆಳೆಯ ಭಾಸ್ಕರನಾರುಭಟೆಗಳಗಿಮ್ಮಡಿಯೆಂಬ ಕೋಪದಿಂ ಬರಲಜೇಯಂ ॥
ತಳೆಯ ಜಂತುಗಳೆಲ್ಲ ಕಂಡು ಕಳವಳಸುತಿರೆ ।
ತಳೆದ ಶರಚಾಪತೂಣೀರಖಡ್ಗಗಳಿಂದ ।
ನಳನಮಿತ್ರನ ತನಯನಿರ್ಪ ಪತ್ತಣದೆಡೆಗೆ ನಡೆತಂದ ಸೌಮಿತ್ರಿಯು ॥ (23)
ಬರುವ ಪಂಥಾನದೊಳ್ ಕಪಿಯ ದುಷ್ಕೃತ್ಯಗಳ ।
ಸ್ಮರಿಸಿ ಪಲ್ಮೊರೆದೌಡನೊತ್ತಿ ಹೂಂಕರಿಸುತ್ತ ।
ಮರಿನಿಕೃಂತನ ಬರುವ ಪರಿಯ ಕಂಡಂಜಿದರು ನಿಟ್ಟಿಸಿದ ಕಪಿಗಳೆಲ್ಲ ॥
ತರಹರಿಸದಲ್ಲಲ್ಲಿ ಕೂಗುತ ಪಲಾಯನದಿ ।
ತರುತರುಗಳಡರಿ ಕಿಚಾಕಿರಿದು ಪಲ್ಗಿರಿದಾಗ । [ಯೋಲ್ ॥ (24)
ಲೊರಲಿದರು ನಗರಿ ಮೂರ್ಧನಿಗೊಡಲ್ ಕಲ್ಲೋಲಕಲ್ಲೋಲವಾಯುತ್ತದಧಿ
ಕೆಲರು ಮರಮರಡಿಗಳ ಪಿಡಿದು ಪೊರವಳಯದೊಳು ।
ಕೆಲರದ್ರಿಗಳ ಪಿಡಿದು ದ್ವಾರದೇಶಂಗಳಲಿ ।
ಕೆಲಕೆಲರು ತೆರೆವಾಯಿಕೋರೆದಾಡೆಗಳಿಂದ ಪ್ರಾಕಾರದೆಡೆಬಲದೊಳು ॥
ಪಲವಗೆಯ ದನಿಗಳಿಂದಂಬರಪ್ರತಿಧ್ವನಿಯ ।
ಮೊಳಗಿನಿಂದದಿ ಕೂಗಲಾಗ ಕ್ರೋಧಾನಲ ।
ಜ್ವಲಿತವಾಗಲು ಸಿಂಹನಾದದಿಂ ಲಕ್ಷ್ಮಣಂ ಬೊಬ್ಬಿರಿವುತಾರ್ಭಟಿಸಿದಂ ॥ (25)
ಭೂಕಂಪನಂಗೊಂಡುದಖಿಲ ಕಪಿಕುಲವೆಲ್ಲ ।
ಭೀಕರಕ್ಕಂಜಿ ಮೂರ್ಚ್ಛಿತರಾದರಡಿಗಡಿಗ ।
ನೇಕಕೋಪಂ ಪರ್ಚುತೈತಂದ ಲಕ್ಷ್ಮಣಂ ನಿಟ್ಟಿಸುತಮಾ ನಗರವಂ ॥
ನಾಕಕಿಂದತಿಶಯದ ಸೌಭಾಗ್ಯದಿಂದಮತಿ ।
ಶ್ರೀಕರಂ ಚಿತ್ರ ಕಿಷ್ಕಿಂಧಮಂ ಕಂಡು ಘೋ ।
ರಾಕಾರದಿಂ ತೋರ್ಪ ಕಪಿಕರಡಿಗಳ ತತಿಯನೋಡಿ ವಿಸ್ಮಿತನಾದನು ॥ (26)
ಬಿರುಘಾಳಿಯಂದದಿಂ ಮೊರೆಯುತ್ತ ನಿಟ್ಟುಸುರ ।
ಉರಗಪತಿಯೆಂಬಂತೆ ಬರುವ ಲಕ್ಷ್ಮಣನಿರವ ।
ತರುಣಂ ಕುಮಾರನಂಗದ ಕಂಡು ಭಯಗೊಂಡು ಭಕ್ತಿಮುಂಕೊಂಡೆರಗಲು ॥
ಕರುಣದಿಂ ಕುಸ್ತರಿಸಿ ಕಾಕುಸ್ಥತಿಲಕನುರು ।
ಭರದಿಂದ ಕ್ರೋಧವಶನಾಗಿ ಪತ್ತಣದೆಡೆಯೊ ।
ಳರುವದೆಂಬುದನು ನಿಮ್ಮಯ್ಯನೊಡನುಸುರೆಂದು ಪೇಳ್ದು ಬೀಳ್ಕೊಟ್ಟನೊಲಿದು ॥ (27)

ಕನಲಿ ಕಿಡಿಗಳ ಸುಗುಳ್ವ ಕೆಂಗಣ್ಣ ಪುರುಷ ತಾಂ।
ಕಿನಿಸಿಂದ ಬೇಳಲಂಗದ ಭೀತಿಯಿಂದೈದಿ।
ಜನನಿರುಪಮಸುಗ್ರೀವರಡಿದಾವರೆಗೆ ಮಣಿದು ದೀನಭಾವದಲೊರೆದನು॥
ಜನನಾಥ ರೋಷದಿಂ ಬಂದಿರ್ಪನೆಂದೆನುತ।
ಕನಲಿ ಕೂಗಿಟ್ಟರುಂ ಮದಮೋಹಕೆಚ್ಚರುಂ।
ಜನಿಸದಾದುದು ಗಾಢನಿದ್ರಾವಶತೆಯಿಂದ ತಿಳಿಯನೇನೆಂಬುದೊಂದ॥ (28)

ಅಂಗದನ ನುಡಿಯಿಂದಮಾಗದಿರಲೆಚ್ಚರಿಕೆ।
ಸಂಗಡದೊಳಾ ಕುಮಾರಂ ತೊಳಲುತಿರೆ ಮನುಜ।
ಪುಂಗವಾರ್ಭಟೆಗಂಜಿ ತಲ್ಲಣಿಸಿ ನಡುಗುತಂ ಶಾಖಾಮೃಗಂಗಳೆಲ್ಲ॥
ಕಂಗಾಣದಲೆ ಕೂಗಲುದಧಿ ಭೋರ್ಮೊರೆವಂತ।
ಭಂಗುರದ ರೋಷದಿಂದಖಿಳಮಂತ್ರಿಗಳು ಮಾ।
ನಂಗಳಂದೈತಂದು ರಾಹಸದನವ ಪೊಕ್ಕು ಕಂಡರರಸಿರ್ಪ ಪರಿಯ॥ (29)

ಜಡಬುದ್ಧಿಯಿಂದರಸನೆಡೆವಿಡದ ನಿದ್ರೆಯೊಳು।
ಕೆಡೆದಿರ್ಪನುಷ್ಪಡದ ವಿಷಮದಾಯಾಸ ಸಂ।
ಗಡಿಸಿರ್ಪುದಿದನಾವಪರಿಯ ಸೈಪಿಡಲೇಳ್ಕುವಡರಿಂದಮುಪ್ಪದೆನುತ।
ಪೊಡವಿಪತಿಯನು ಚಮತ್ಕಾರ ಸತ್ಕಾರದಿಂ।
ಅಡಿಗಡಿಗೆ ನುತಿಗೈವುತೆಚ್ಚರಂಗೊಳಿಸಲಂ।
ದೊಡನೆ ನಿದ್ರಾಕಷಾಯಿತ ನೇತ್ರದಿಂ ನೋಡುತಿಂತೆಂದ ಸಚಿವನೊಡನೆ॥ (30)

ಆತಂಕಗೊಳುತೆಲ್ಲರೊಮ್ಮನದಲೊಂದೆಡೆಯ।
ಲೀತ್ರಕ್ಕೈ ಗುಮಿಗೂಡಿ ಮೊಗಮೊಗವ ನೋಡುತ್ತ।
ಭೀತಿಗೊಳುತಿಹುದೇನು ಕಜ್ಜವಂ ಬಿತ್ತರಿಪುದೆನಲರಸಗಿಂತೆಂದರು॥
ಸೀತಾನಿಮಿತ್ತವಿಡಿದಿರ್ಪರರಸುಗಳು ಬಂ।
ದಾತುರದಿ ವಾಲಿಯಂ ತರಿದು ನಿಮಗೈಶ್ವರ್ಯ।
ಜಾತಾನುಮೋದವಂ ಪಾಲಿಸಿದರೆಂಬುದಿದು ಜ್ಞಾತಮುಂಟಲ್ತೆ ಜೀಯ। (31)

ಆ ಪುರುಷರೊಳಗೊರ್ವನದ್ರೀಂದ್ರ ನಿಭಗರ್ವ।
ಕೋಪದಿಂ ನಗರದೆಡೆಗೈತಂದು ಲಯರುದ್ರ।
ತಾಪಗೊಳಪಂತೆ ಕ್ರೋಧಾಗ್ನಿಯಿಂದಖಿಲ ಕಪಿಕುಲರ ದಹಿಸುತ್ತಮಿರುವ॥
ಈ ಪರಿಯನಾರಿಗೆಚ್ಚರಿಸಲಕ್ಕುಮೊ ಜೀಯ।
ರೂಪಾಂತ ಸಮವರ್ತಿಯಲ್ಲದವ ನರನಲ್ಲ।
ವೀ ಪುರೀಜನರ ನಿಂ ವಿಪದದಿಂ ಪೆರದೆಗೆದು ಕಾಯ್ವರಾರೈ ಜಗದೊಳು॥ (32)

ಅದರಿಂದಮೆಚ್ಚರಿಸವೇಳ್ಕಾದುದೆಂದು ಪೇ।
ಳ್ದದುಭುತದ ಹೃಚ್ಛೂಲನಿಭವಾಣಿಯಂ ಕೇಳೆ।
ತೆದೆ ನಡುಗಿ ಮುಖ ಗುಂದಿ ಸಚಿವನೊಡನಿಂತೆಂದ ರಾಘವನ ಪದಪದ್ಮಕೆ॥
ಮುದಮುಖದಲಪರಾಧಮೆಳ್ಳನಿತ್ತದಾದರುಂ।
ಬಿದುರಿದವನಲ್ಲದೇಂ ಕಾರಣದೊಳಾಮರ್ಷ।
ಮುದಯವಾದುದೊ ಪುರಾಕೃತದುಷ್ಕೃತಮದೆನಗೆ ವಿದಿತವಲೆ ಮಂತ್ರಿವರ್ಯ॥ (33)

ಭಾನುಕುಲಸಂಭೂತ ಭವ್ಯವಿಗ್ರಹದಾತ ।
ಜ್ಞಾನಸ್ವರೂಪ ನಿಗಮಾರ್ಥಗಳ ಬಲ್ಲಾತ ।
ಗಾನದೇನಪರಾಧವೆಣಿಸಿದುದು ಲೆಕ್ಕಿಸದೆ ತನ್ನ ಸದ್ಗುಣವ ಮೆರೆದು ।
ಮಾನದಿಂ ಪಾಲಿಸಿದನೆಂಬ ಭರವಸಮೆನ್ನ
ಮಾನಸದಿ ದೃಢಮಾಗಿ ನಿಂದಿದೆಕೊ ಕೈವಿಡಿದು ।
ದೀನತ್ವಮಂ ಪರಿದು ಕಲ್ಪಸಾದಪದಿಂದ ಲತ್ಯಾಹಿತಂ ಜನಿಕುವೆ ॥ (34)

ಅಪಕಾರವಂ ಮಾಡಲಸ್ಮದೀಯರು ಪೋಗಿ ।
ಗುಪಿತದಿಂದೇನಾದರರುಪಿ ಮಾನಸಕದೇಂ ।
ಚಪಲತೆಯು ಪುಟ್ಟಿಸಿದರದರಿಂದ ಕೋಪಮೇನುದಿಸಿದುದೊ ನೃಪವರಂಗೆ ॥
ವಿಪರೀತಮಿದು ಕಾಲವಶದಿ ಸಂಭವಮಾದ ।
ದುಪಮಿಸಲದಾರ್ಗಳವೆನುತ್ತಮತಿಚಿಂತೆಯಿಂ ।
ತಪನಸುತ ನುಡಿದನಾ ಮಾತಿಗುತ್ತರಮಿತ್ತನಾಗ ಪವನಾತ್ಮಭವನು ॥ (35)

ಸಮುದರಿಪು ದೋರ್ಗರ್ವಖರ್ವ ದಾರಾಪಹರ ।
ನಮರೇಂದ್ರಸುತನಾರ ದೆಸೆಯಿಂದ ಹತನಾದ ।
ನಮಿತಕಪಿಕುಲದಾಧಿಪತ್ಯಮಾರಿಂದೊಂದು ನಿಮಿಷದೊಳ್ವಶಮಾದುದು ॥
ಕಮಲಾಕ್ಷಿ ಸೀತೆಗೋಸುಗಮಿನಿತು ಸಂಪದಂ ।
ಸಮನಿಸಿತು ನಿಮಗವರೊಳಾಡಿ ಮಾಡಿದ ಕಾರ್ಯ ।
ಸಮಯಮಂ ಸ್ಮರಿಸದಾದುದು ಚಿತ್ತ ಚಿತ್ತದಾನಂದ ಪರವಶತೆಯಿಂದ ॥ (36)

ತ್ರಿಜಗಮಂ ಸೃಜಿಸಿ ಪೊರೆವಳಿಸುವ ಮಹಾಪುರುಷ ।
ಭಜಿಸಿದ ವಯಸ್ಯಭಾವವನೆಂದು ವಿಷಯಗಳ ।
ಗಜಬಜವನುಳ್ಳದಾತಗಿನಿತಾದರುಂ ಹಿತವನೆಣಿಸದಲೆ ಗ್ರಾಮ್ಯಸುಖಮಂ ॥
ಭಜಿಸೆ ಸಮಯಾತೀತಮಾದ ಕತದಿಂ ಶಮಾ ।
ತ್ಯಜಿಸೆಯಾದುದರಿಂದ ಸೌಮಿತ್ರಿ ತಾಂ ಬಂದ ।
ನಜಭವಾದಿಗಳಿಂದ ನಿಲಿಸುವರಶಕ್ಯಮೀ ವಿಗ್ರಹಂ ದುರಾಗಾಹಕಂ ॥ (37)

ಸಾಮವಚನಗಳಿಂದೆ ಸಂತಸಂಗೊಳಿಸವೇ ।
ಳ್ಕೀ ಮಹಾಪುರುಷ ಕೃಪವೆತ್ತು ರಾಜೇಂದ್ರಂಗೆ ।
ನೇಮದಿಂ ಬಿನ್ನವಿಸಲಪ್ಪುದು ದಯಾದೃಷ್ಟಿಯಲ್ಲದಾರಿಂದಾಗದು ॥
ತಾಮಸವನುಳಿದು ಜಾಗ್ರಂಗೈಯವೇಳ್ಕೆಂದ ।
ರಾ ಮಾತಿಗನುಸಾರನೆನಿಸುತಂಗದ ನುಡಿಯು ।
ತಾಮರಸಬಾಂಧವತನೂಭವಂ ಚಿಂತಿಸುತ್ತಮಿರಲಿತ್ತ ಸೌಮಿತ್ರಿಯು ॥ (38)

ಘುಡುಘುಡಿಸಿ ಕೋಪದಿಂ ಗುಹಾದ್ವಾರದೊಳು ಪೊಕ್ಕ ।
ರೆಡಬಲದಿ ಕಾಯ್ದಿರ್ದ ಕಪಿವೀರರತಿಭಯದಿ ।
ಪೊಡಮಟ್ಟು ಕೆಲಸಾರಲಾರನುಂ ನಿಟ್ಟಿಸದೆ ಜವದಿಂದ ಬರುತಮಿರಲು ॥
ಸಡಗರದ ನಂದನಂ ಕಾಸಾರನದಿಗಳುಂ ।
ಬೆಡಗಿನರಮನೆಗಳುಂ ವಿಪಣಿಗಳ ಸಂಭ್ರಮಂ ।
ಬಿಡುಗಣ್ಣರೊಡೆಯನಿಹ ರಾಜಧಾನಿಯದೆಂಬೊಲಚ್ಚರಿಯ ಪುರಮೆಸೆದುದು ॥ (39)

ನವರತುನಮಯದ ಸೌಧಂಗಳಾವಾವೆಡೆಯು ।
ಲವಿರಳದ ಸೌವರ್ಣ ವೇದಿಕಾಂತರಗಳುಂ ।
ನವರಸಾಸ್ಪದ ಶುಕಪಿಕಾಂಗನಾ ಮಾಧುರ್ಯರವಕಲಿತದುಪವನಗಳು ॥
ಶಿವಕರದ ನಗರಿಯು ನಿಜಾವಾಸಕೆಂದೆಂಬ ।
ಲವಲವಿಕೆಯಿಂದವಜ ಮಾನಸದಿ ಸೃಜಿಸಿದನೊ ।
ಭುವಿಯೊಳಚ್ಚರಿಯೆನುತ ವಿಸ್ಮಯದಲೀಕ್ಷಿಸುತ ಲಕ್ಷ್ಮಣಂ ನಡೆತಂದನು ॥ (40)

ದೇವಗಂಧರ್ವಯಕ್ಷಾದಿಗಳು ಪ್ರಿಯದಿ ರಾ ।
ಜೀವಭವನೇಮದಿಂ ನಿರ್ಮಿಸಿದ ಸಂತಾನ ।
ವಾವೆಡೆಯು ಕಂಗೊಳಪ ರತಿ ಕಾಮರೂಪಿಗಳ್ ಶೃಂಗಾರರಸಮೆಂಬೊಲು ॥
ಕಾವನಂ ಕೂಬರ ಜಯಂತರಪ್ರತಿಮರತಿ ।
ದೇವಿಯಪ್ಸರೆಯರಂ ಧಿಕ್ಕರಿಸಿ ಬೆಡಗಿಂದ ।
ಮಾ ವಧೂಜನರಿರ್ಪರಾ ನಗರದತಿಶಯವ ಬಣ್ಣಿಸಲದೆಂತಪ್ಪುದು ॥ (41)

ರಾಜಮಂಡಲವನಂಡಲೆವ ಸೌಧಾಗ್ರಗಳ ।
ರಾಜಿಯುರುಕಾಂತಿಗಳ್ ರಾಜೀವಮಿತ್ರ ನುಡು ।
ರಾಜತೇಜಂಗಳಂ ಕೊಡುತಮಿರ್ಪುವು ಸಕಲಸೌಭಾಗ್ಯ ಸಂಭ್ರಮದೊಳು ॥
ರಾಜಿಸುವ ಶೃಂಗಾರತರವಾದ ಸೌಖ್ಯಕರ ।
ರಾಜವೀಥಿಯ ಪೊಕ್ಕು ಕೆಲಬಲದಲಾರೈವ ।
ರಾಜಗತ್ಪತಿಯಿರ್ಪ ವೈಕುಂಠಸದನಮೆನಲೆಸೆದುದಚ್ಚರಿ ಬೀರುತ ॥ (42)

ಅಂಗದಂ ನಳನೀಲಶತಬಲಿಯು ಮೈಂದದ್ವಿವಿ ।
ಧಂಗಳಾಲಯಗವಾಕ್ಷಂ ಗವಯ ಗಜಶರಭ ।
ಸಿಂಗ ವಿದ್ಯುನ್ಮಾಲಿ ಸಂಪಾತಿ ಸೂರ್ಯಾಕ್ಷ ನಳನೀಲ ವೀರಬಾಹು ॥
ಪಿಂಗಾಕ್ಷ ಜಾಂಬವ ಸುಷೇಣ ದಧಿವಕ್ತ್ರರ ಗೃ ।
ಹಂಗಳಂ ನಿಟ್ಟಿಸುತ ವಿಸ್ಮಯಾಕ್ರಾಂತಹೃದ ।
ಯಂಗವಿುತ ಚಿತ್ರಗಳ ನೋಡುತಚ್ಚರಿಗೊಳುತ ನಡೆದನಾ ಸೌಮಿತ್ರಿಯು ॥ (43)

ಮುಂಗಡೆಯಲೆಸೆದುದರಮನೆ ಶರತ್ಕಾಲಮೇ ।
ಘಂಗಳಂದದಿ ಪೊಳೆವ ಸೌಧಂಗಳೆಡಬಲದೆ ।
ಶೃಂಗಾರನಾಯಕಾಮಣಿಗಣವಿರಾಜಿತದ್ವಾರದೇಶಂಗಳಂದ ॥
ಸಂಗೀತಮಾಧುರ್ಯ ಕಲರವಗಳಿಂದಂಗ ।
ನಾಗಣ ನೃಪೋದ್ಯಾನದೊಲು ಕ್ರೀಡಿಪ ಬೆ ।
ಡಂಗಿನಿಂದಮರೇಂದ್ರವೈಶ್ರವಣರರಮನೆಯ ಸಿರಿಯಿಂದ ರಾಜಿಸಿದುದು ॥ (44)

ಯೆಲ್ಲರುರುಗಳನೊಂದು ಪಲ್ಲವಿತಗೈವ ತರು ।
ಸಲ್ಲಲಿಯಿಂದೆಸೆಯೆ ಮುಂದಕ್ಕೈದುತ ಕಂಡೆ ।
ನಲ್ಲ ಶಾರ್ದೂಲಕೇಸರಿಗಳಂತತಿಭೀಮರೂಪಿಂತ ವಾನರರನು ॥
ಭಲ್ಲಿಯಾಡಿಗಳಂದ ಬಹುತರಮರಂಗಳಂ ।
ದೆಲ್ಲೆಲ್ಲಿ ನೋಡಲೆಡೆದೆರಪಿಲ್ಲದರಮನೆಯು ।
ನುಲ್ಲಸದಿ ಕಾಯ್ದಿರ್ಪ ವೀರಪ್ಲವಗಾಧಿಪರ ನೋಡುತಚ್ಚರಿವಟ್ಟನು ॥ (45)

ಎಡಬಲವ ನೋಡದಾರೊಡನೆ ಮಾತಾಡದಲೆ ।
ಘುಡುಘುಡಿಪ ಕೋಪದಿಂ ಸಪ್ತಕಕ್ಷ್ಯಾಂತರಗ ।
ಳೆಡೆಗೆಡೆಗೆ ನಿಲ್ಲದೊಳಪೊಕ್ಕರಲ್ಲಿರ್ಪರತಿಭಯದಿ ಮೌನದೊಳಿರ್ದರು ॥
ಕಡುವೇಗದಿಂದಮಂತಃಪುರದ ಪೊರೆಗೈದ ।
ಳೆಡೆಗೆಡೆಗೆ ಹೈಮರಾಜಿತವರಾಸನಗಳಂ ।
ದೊಡನೊಡನೆ ಪರಪಿದಾಸ್ತರಣವೈಭವದಿಂದ ತೋರ್ದುದದನೇನೆಂಬೆನು ॥ (46)

ಮಿಂಚಿನ ಬಳಗ ನೆಲದಿ ಮೂರ್ತಿಯಾಂತೈತಂದು ।
ಸಂಚರಿಪ ತೆರದಲಂಗನೆಯರಡಿಗಡಿಗೆ ಕುಡಿ ।
ಮಿಂಚುಗಳ ಸಂಚುಗಳ ಕಡೆಗಣ್ಣ ನೋಟದಿಂ ತೋರುತ್ತಮೆಡೆಯಾಡುತ ॥
ಅಂಚೆಗಮನೆಯರಿರ್ದರತಿಮಧುರಯತಿಲಯದಿ ।
ಸಂಚಿತದ ವಲ್ಲಕೀನಾದಗಳನನುಸರಿಸಿ ।
ಸಂಚಾರಿಗಳ ಪಿಡಿದು ಪಾಡುವ ಮನೋಹರಂ ಕೇಳ್ದುದಾ ಸೌಮಿತ್ರಿಗೆ ॥ (47)

ಮುಂದಕಡಿಯಿಡಲು ಕಿರಿಘಂಟೆ ನೂಪುರರವಗ ।
ಳಂದ ಕೇಳ್ಪಡಲಾಗ ಸೌಮಿತ್ರಿಯತಿಲಜ್ಜೆ ।
ಯಿಂದ ತಲೆಬಾಗಿ ಮುಂದಕೆ ಪೋಗದಲೆ ನಿಂದು ಜ್ಯಾಘೋಷಮನ್ನೆಸಗಲು ॥
ಬಂಧುರಕಠೋರಸಿಡಿಲೋಪಮಿತಕ್ರೂರರವ ।
ದಿಂದ ಸೌಮಿತ್ರಿ ತಾಂ ಬಂದ ಕೋಪದೊಳೆಂದು ।
ಕುಂದಿ ಸುಗ್ರೀವ ಭಯದಿಂದ ಗದ್ದುಗೆಯಿಳದು ನೆನೆದನಂಗದನ ನುಡಿಯ ॥ (48)

ತೋರದಾದುದು ಬುದ್ಧಿಜಡತ್ತೆಯಿಂದಲಿ ಭೀತಿ ।
ತೋರಿತಿದಕೇನೆಂಬೆನೆನುತ ಚಿಂತಿಸಿ ಕರೆದು ।
ತಾರೆಯೊಡನಿಂತೆಂದನತಿಕೋಪದಿಂ ಬಂದ ಲಕ್ಷ್ಮಣನ ಪೊರಗೆ ಪೋಗಿ ॥
ಚಾರುಮೃದುನುಡಿಗಳಂ ಕೋಪಶಾಂತಿಯಗೊಳಸು ।
ವೀರರಂಗನೆಯ ನಿಟ್ಟಿಸಿ ಕ್ರೋಧಮಂ ಗೈಯ ।
ರೋರಂತೆ ಕರುಣಿಸುವರೆನೆ ಕೇಳ ತಾರೆ ನಡೆತಂದಳತಿವಿನಯದಿಂದ ॥ (49)

ಕಲಹಂಸಗತಿಯಿಂದ ವೈತಂದು ಪ್ರೇಮದಿಂ ।
ಕಲಿಗಳಗ್ರೇಸರನ ಮುಂಗಡೆಯ ನಿಲೆ ನೋಡೆ ।
ದಲಘುಮತಿ ಲಜ್ಜೆಯಿಂ ದಿಟ್ಟಿಸದುಪೇಕ್ಷೆಗೈದಿರೆ ಕಂಡು ತಾರೆ ನಯದಿ ॥
ಜಲಜಾಕ್ಷ ಭವದೀಯವಚನದಿಂ ಪೆರತಾರು ।
ಸುಲಭಕೋಪಮಿದೇನುಕತದಿ ಸಂಭವಮಾಯ್ತು ।
ಚಲಿಸಲಾಗು ಪುನಲದ ಪರತ್ವತದಿ (?) ಕಡಿವದೇನತಿಶಯದಿ ಘನತೆ ನಿಮಗೆ ॥ (50)

ಎಡಹಿದರೆ ಪೋಪುದಂ ಪೊಡವಿಯನ್ನಗಿದು ತೆಗೆ ।
ದಿಡುವುದು ವೃಥಾಶ್ರಮಂ ಭಯದೈನ್ಯತೆಯೊಳು ಬೇ ।
ರಡವಿಯೊಳು ಚರಿಸುವನಿಗಭಯಮಂ ಕೊಟ್ಟು ಕೈವಿಡಿದು ಪಾಲನೆಯಗೈದು ॥
ದೃಢತರಾಪ್ತತೆಯಿಂದ ಮಿತ್ರನೆಂದಾಡಿ ಹಿಂ ।
ಗಡೆಯಲೀ ಪರಿಗೈಯಲುಚಿತವೇ ಸರ್ವಜ್ಞ ।
ರೊಡೆಯ ನೀನರಿಯದುದೆ ಕುಲವ ನಿಟ್ಟಿಪುದೆನುತ ವಿನಯದಿಂ ಬಿನ್ನವಿಸಲು ॥ (51)

ತಾರಾವಚನದಿಂದ ಕರಗಿತಂತಃಕ್ರೋಧ ।
ದಾರುಭಟಿ ನಿಲಲು ನಿಷ್ಠುರವಚನದಿಂದಮತಿ ।
ದಾರುಣವ ತೋರ್ಪಡಿಸುತಿಂತೆಂದ ದುರ್ಮೇಧೆಯಿಂದ ಸುಖಲೋಲನಾಗಿ ॥
ಧಾರಿಣೀಶನ ಮನೋವ್ಯಥೆಯು ನೋಡದೆ ನಿಜ ವಿ ।
ಕಾರಮಂ ಪ್ರಕಟಿಸಿದ ಸುಗ್ರೀವನಂ ಪಿಡಿದು ।
ದಾರ ಶಿಕ್ಷಣೆಗೈಯದುಳವುದನ್ಯಾಯಮಿದು ಸಕಲಧರ್ಮೇಚ್ಛೆಯವು ॥ (52)

ಕೆಡಹಿ ಧರ್ಮಾರ್ಥಗಳ ಕಾಮೋಪಸೇವನೆಯೊ ।
ಳೊಡನೆ ಪಾನಾಸಕ್ತನಾಗಿ ಮತಿಯನ್ನೀಗ ।
ತೊಡರಿ ತಾಮಸವೃತ್ತಿಯಿಂದಲುಂ ಹರಿಹಂಗಳರಿಯದಲೆ ಮೂಢನಾದಂ ॥
ಕೆಡುಗು ಪಾನದಲಖಿಲಕಾರ್ಯಂಗಳಾರ್ಯನಿ ।
ರ್ದೆಡೆಯ ಕಾಣದೆ ನಾಲ್ಕುತಿಂಗಳೂರೊಳಗಿರ್ದ ।
ಕೆಡುಕನಂ ಶಿಕ್ಷಿಸುವೆನೆಂದೊರೆದ ಲಕ್ಷ್ಮಣಂಗಿಂತೆಂದಳಾ ತಾರೆಯು ॥ (53)

ಛಂದವಾದುದು ದೇವರಾಜ್ಞಾಪಿಸಿದ ಪರಿಯು ।
ಮಂದನಾಗಿರಲಿಲ್ಲ ನಿಮ್ಮನುಜ ಸುಗ್ರೀವ ।
ಮುಂದರಿತು ರಾಮಕಾರ್ಯಾರ್ಥವಾಗೀ ನೆಲದೊಳುಳ್ಳ ಕಪಿಯೂಥರನು ॥
ಒಂದೆರಡುದಶಕೋಟಿಪರಿಯಂತ ನೆರಹಿರ್ಪ ।
ನಿಂದು ಪ್ರಾವೃಟ್ಕಾಲ ಶರದಾಗಮಂ ಬರುವ ।
ದೆಂದಿಗೆಂದಿಗೆನುತ್ತ ಪಥವ ನಿಟ್ಟಿಸುತಿರುವ ಸ್ವಾಮಿ ಕಾರ್ಯಂಗಳೆಣಿಸಿ ॥ (54)

ವಿರತಿಯಿಂದೀಷಣತ್ರಯಂಗಳಂ ವರ್ಜಿಸಿದ ।
ಪರಮಮುನಿಗಳು ಸರಸಿಜಾಕ್ಷಿಯರ ಕಾಣಲ್ಕೆ ।
ತೊರೆದಪರು ನಿಯಮಗಳನೆಂಬುದಿದು ಪದಿನಾಲ್ಕುಲೋಕ ಜನರರಿತಿರ್ಪರು ॥
ಅರಿಯದಜ್ಞಾನಿ ವಾನರನೆಂತು ಭೋಗಗಳ ।
ಪರಿಹರಿಪನಿದು ಭವಚ್ಚಿತ್ತಮೇನರಿಯದುದೆ ।
ನರದೇವ ಪಾಲಿಪುದನನ್ಯಶ್ರಿಯೋಲಾಭಮೆಂದು ಚಿತ್ತದೊಳರಿವುದು ॥ (55)

ಸುಗುಣ ಲಾಲಿಪುದೆನ್ನ ಬಿನ್ನಪವ ಸುಗ್ರೀವ ।
ಜಗತ್ರಿಯೊಳಗುಳ್ಳಖಿಳಯೂಥಪರ ಗುಮಿಗೊಳಿಸಿ ।
ಜಗತೀತನೂಭವೆಯ ನರಸಿತಂದೀವನೀ ನುಡಿಗೆ ಸಂಶಯಮಿಲ್ಲವು ॥
ಪಗೆಯಲ್ಲ ತನುಮನಂ ನಿಮ್ಮಡಿದೆ ದಯಗೈದು ।
ಮಿಗೆ ಹರುಷಗೊಳಿಸಿ ಭೀತಿಯ ಬಿಡಿಸಿ ಚಿಂತಿಸುವ ।
ಬಗೆಯನಪಹರಿಸು ಮೈತ್ರಿಯ ಬೆಳೆಸು ಭಜಕ ಭವದೀಯನೆನಿಸು ॥ (56)

ಮನೆಮನೋವಾರ್ತೆತನು ಧನಗಳೆಲ್ಲವು ನಿನ್ನ ।
ವನುಜ ಸುಗ್ರೀವನೆಂತಃಪುರದಲೊಪ್ಪಿರುವ ।
ಜನರಾತ್ಮಜಾತನೆನ್ನನುಮಾನಮನ್ನುಳದು ಪ್ರಿಯದಿಂ ಪ್ರವೇಶಗೈದು ॥
ಮನದೊಲವಿನಿಂದವಗಾತ್ರನ ಭೀತಿಯಂ ಪರಿದು ।
ಜನನಾಥನೆಡೆಗೆ ಕರದೊಯ್ಯುದ್ಧಖಿಲಸನ್ನಾಹ ।
ವನು ತೋರೆ ಸುಪ್ರೀತನಪ್ಪನೆಣಿಸಂ ತಪ್ಪ ನುಡಿಯ ಲಾಲಿಪುದು ಬೊಪ್ಪ ॥ (57)

ಸುದತಿಯಾಡಿದ ನುಡಿಗೆ ಸಂತಸದಿ ಸೌಮಿತ್ರಿ।
ಹೃದಯಾನುಮೋದದಿಂ ಸುಗ್ರೀವನಂ ಕಾಣ್ಬ।
ರಧಿಕಹರ್ಷದೊಳ್ಪೈದಿ ಕಂಡನಂತಃಪುರದಿ ಕಾಂಚನದ ಗದ್ದುಗೆಯೊಳು॥
ಉದಯಾಚಲಾರೂಢ ಭಾಸ್ಕರೋಪಮನೆನಿಸಿ।
ಮದಹಸ್ತಿಗಮನೆ ರುಮೆಮುಖ್ಯರಾದಂಗನೆಯ।
ರದುಭುತದಲಂಕಾರವೆತ್ತು ಕುಳ್ಳಿರಲಾಗ ಕಂಡನಾ ಸೌಮಿತ್ರಿಯು॥ (58)

ಅಚ್ಚರಿಯ ವೈಭವವ ಕಂಡಂದು ಲಕ್ಷ್ಮಣಗೆ।
ಕಿಚ್ಚನಾದುವು ಕಂಗಳಡಿಗಡಿಗೆ ನಟಿಪ ಕ್ಷ್ಮ।
ಶ್ರುಚ್ಛಾಲನೆಯು ಮುಖದರೌದ್ರ್ಯಮಂ ಕಂಡಳ್ಕಿ ಬಳ್ಕುತಾಸನವನಿಳದು॥
ಬೆಚ್ಚು ಪೊಡೆದಂತೆ ಕರಗಳ ಮುಗಿದು ನಿಂದಿರಲ।
ಮಚ್ಚರಿಗೆ ಕೋಪ ಸಂಭವಮಾಗಿ ಬಿರುನುಡಿಗ।
ಳುಚ್ಚಾವಚಗಳಂದ ನುಡಿದು ಲಕ್ಷ್ಮಣನತ್ತುಳ ಧರ್ಮಸಂಗತಿವಿಡಿದನು॥ (59)

ಸಾಧುಪೋಷಕ ಕೃಪಾಕರ ಜಿತೇಂದ್ರಿಯ ಸತ್ಯ।
ವಾದಿಯು ಕೃತಜ್ಞ ಕಲ್ಮಷಲೋಕಕಹಿತ ಹಿತ।
ದಾದರಣೆಯುಳ್ಳ ನೃಪ ಚಿರಕಾಲ ಸುಖಿಮಿರ್ಪನಲ್ಲದೆ ದುರಾತ್ಮತೆಯೊಳು॥
ಆದ ಪರಿಗಪಕಾರಮೆಸಗುತುಪಕೃತಿಯೆಂಬ।
ಬೋಧೆಯಂ ಮರೆದನೃತಕೊಡಬಟ್ಟ ನರನಾಥ।
ಪೋದಲ್ಲದಿರಮಿದುವೆ ಲೋಕಾನುಮತ ಶಾಸ್ತ್ರಸಮ್ಮತಂ ವರಕಪೀಶ॥ (60)

ಒಂದಶ್ವದನೃತಂ ಶತಾಶ್ವಹತಪಾತಕವ।
ನೊಂದುಧೇನುವಿನ ಪುಸಿ ಗೋಸಹಸ್ರದ ಹತಿಯ।
ನೊಂದು ಪುರುಷಾನೃತಂ ಕುಲಗೋತ್ರಮಾತ್ಮಾನಹತಿಯನಿತ್ತಪುದೆನ್ನುತ॥
ಛಂದದಿಂ ಪೇಳ್ವ ಶಾಸ್ತ್ರಂಗಳನುಮತಿಯ ನೀಂ।
ಪೊಂದದಾದೆ ದುರಾತ್ಮ ಶಿಕ್ಷಾರ್ಹನಲ್ಲದೇ।
ನೊಂದೇಟಿಸ ಸಲ್ಲ ಸಂಭಾಷಣಾಯೋಗ್ಯ ನೀನಲ್ಲ ಪುಸಿಯಿನಿತಿದಲ್ಲ॥ (61)

ಪೂರ್ವೋಪಕೃತಿಗೈದ ಪುಣ್ಯಪುರುಷರ್ಗೆ ತಾಂ।
ಸರ್ವಶಕ್ತಿಯೊಳು ಪ್ರತ್ಯುಪಕಾರಗೈಯದಲೆ।
ಗರ್ವದಿಂ ಗ್ರಾಮ್ಯಸುಖಕೆಳಸಿ ಶರೀರಮಂ ಮರೆದ ಪಾತಕಿಯ ನೋಡಿ॥
ದುರ್ವಿದಗ್ಧತೆಯಿಂದ ಮರೆದಿಡದೆ ಪೋದವಗ।
ಖರ್ವದುರ್ಗತಿಯೆನುತ ಶ್ರುತಿವಿಹಿತವೆಂದಾ ಸು।
ಪರ್ವಾಣರಗ್ರಜ ನಿರೂಪಿಸಿದನಿದು ಸತ್ಯಮೆನುತ ತಿಳ ಕಪಿಲಲಾವ॥ (62)

ಪಾನ ಗುರುವಂಗನಾಗಮನ ಸ್ವರ್ಣಸ್ತೇಯ।
ಕಾನನಧ್ವಂಸ ಗೋಬ್ರಹ್ಮಹತ್ಯಾದಿಗಳ।
ಗೇನಾದರೊಂದು ಪ್ರಾಯಶ್ಚಿತ್ತಸಂಭವಿಪುದಲ್ತೆ ಶಾಸ್ತ್ರಂಗಳಲ್ಲಿ॥
ಹೀನಶಠದುರ್ಮತಿಕೃತಘ್ನಗೆ ಹಿತಂಗಳಂ।
ಜಾನಿಸದ ಪಾತಕಿಗೆ ನಿಷ್ಕೃತಿಯದುಂಟೆ ಕಪಿ।
ನೀನನರ್ಥಕೆ ಪೊಕ್ಕೆಯೆನುತ ಲಕ್ಷ್ಮಣ ನುಡಿದರಿಂತೆಂದಳಾ ತಾರೆಯು॥ (63)

ಕ್ರೂರಮತಿ ಶಠ ಕೃತಘ್ನಂ ದುರ್ವಿಚಾರಪರ ।
ದೂರನಲ್ಲಂ ಕಪಿಕುಲೇಶ ಪತಿಕಾರ್ಯವಂ ।
ಪೋರುವದೊಳನುಗ್ರೀವ ಕಾಲಾನುಸರಣೆಯುಂ ನಿಟ್ಟಿಸುತ್ತಮೂರೊಳಿರ್ದಂ ॥
ಧೀರ ನಿಮ್ಮಯ ವಚನದಲೆ ನಿಷ್ಟುರಂಗಳಂ ।
ದೋರಂತೆ ಬರೆ ಸಲ್ಲ ರಘುಕುಲಾನ್ವಯರೆಲ್ಲ ।
ಕಾರುಣಿಕರತಿಗರಿಮಗಂಭೀರಗುಣಕಲಿತರೆಂಬುದಂ ಸ್ಮರಿಸು ಜೀಯ ॥ (64)

ಅಟವಿಯೊಳು ಚರಿಸುವನ ಕೈವಿಡಿದು ರಾಜ್ಯ ಸಂ ।
ಘಟನೆಗೈದಿತ್ತು ಮಿತ್ರತೆವೆತ್ತು ಮೃದುಲತಾ ।
ತ್ರುಟಿನೆಗೈದೀ ಪರಿಯ ನಿಷ್ಠುರಗೊಳಪುದಿದು ಸಾಧುಗಳ ಮಾತವಲ್ಲವು ॥
ಕುಟಿಲಂ ಕಳಂಕಿ ಮಿತ್ರಾವಸಾನವ ನೋಡು ।
ತಟನೆಗೈದಪನು ದೋಷಾಕರಂ ಹರನವನ ।
ಜಟೆಯ ಭೂಷಣಗೈದನಂಗೀಕರಿಸಿದವರ ಪೊರೆದಪರು ಸುಜನರಲ್ತೆ ॥ (65)

ಅಬಲನೆಂದೆಣಿಸದಿರು ದೇವಾಸುರರ್ಕಳುಂ ।
ದಭಯರೆಂದೆನಿಸಿ ಬರೆ ಗಣಿಸಿದವರಂ ಪೊಡೆದು ।
ಕುಬುಬರಿವ ಬಲಿಯೆನುತ ವಾಲಿ ಪೇಳದನೀ ಕಪೀಶಬಲದಧಿಕ್ಯವಂ ॥
ಶುಭವ ತಂದೀವನಂ ಬಿಡನೆಂಬ ಪ್ರೇಮಮಿ ।
ತ್ರಭಯಗಳ ಸ್ಮರಿಸಿ ಮೃದುನುಡಿಯಿಂದಮುಪಚರಿಪು ।
ದಿಭರಾಜಸಾಸಿರಪರಾಕ್ರಮಿಯು ಚಿತ್ತಾನುಕಾರಿಯುಂ ಬಲಿಯ ಹರಿಯು ॥ (66)

ಎನುತಮೀಪರಿ ತಾರೆಯುಂ ಪೇಳ್ದುದಂ ನೋಡಿ ।
ವಿನಯದಿಂ ಸುಗ್ರೀವ ಲಕ್ಷ್ಮಣನೊಳಂತೆಂದ ।
ಜನನಾಥ ನಿರ್ವ್ಯಾಜ ಕ್ರೋಧಮೇಂ ಕಾರಣದಿ ಸಂಭೂತಮಾಯ್ತು ನಿನಗೆ ॥
ವನದಲತಿದೀನತೆಯನಾಂತು ತಲ್ಲಣಗೊಳುವ ।
ದನು ಕಂಡು ಕಾರುಣ್ಯದಿಂದ ಶ್ರೀರಘುನಾಥ ।
ಮನೆಯರಸುತನ ಸುಖಾಭೋಗಂಗಳೆನಗಿತ್ತುದಾತನ ಕಟಾಕ್ಷದಿಂದ ॥ (67)

ಹರಿಯಕ್ಷನಿಭಸುರಪಸುತನ ಕರಗತಮಾದ ।
ಸಿರಿಯ ಸೆಳೆದರದಾರ ಶರಣರಕ್ಷಕನೆಂಬ ।
ಬಿರುದನಂಗೀಕರಿಸಿ ವಾಲಿಯಂ ಸಂಹರಿಸಿ ವೊಪ್ಪದಿಂ ಕಪಿರಾಜ್ಯಮಂ ॥
ಕರುಣಿಸಿದ ಪರಮಪುರುಷನ ಪದಸ್ಮರಣೆಯಿಂ ।
ಪರಿಪರಿಯ ಭೋಗಗಳನನುಭವಿಸುತಾನಂದ ।
ಭರಿತನಾಗಿರ್ದೆ ತನುಮನಧನಂ ಸತಿಯರಂ ಚರಣಾಬ್ಜಕರ್ಪಿಸಿದೆನು ॥ (68)

ಶರಮೊಂದರಿಂದ ತಾಳೋದ್ಭೇದನಂಗೈದು ॥
ಧರಣಿಯಂ ಸೀಳ್ದು ಮಗುಳೈತಂದು ತೂಣೀರ ।
ದಿರವೆನಿಸಿದಪ್ರಮೇಯಾತಿಬಲ ಮುಲ್ಲೋಕನಾಥ ರಘುನಾಥನಿಂಗೆ ॥
ನೊರಜ್ ನಾನೇಂ ಗೈವೆ ಸಾಹಾಯ್ಯಮೇನೈ ಜಗ ।
ದ್ಭರಿತವಿಕ್ರಮಮುನಿಯ ಪದಿನಾಲ್ಕು ಲೋಕಗಳ ।
ಸರಳಗ್ರದೊಳ್ ತರುವ ಪ್ರೀತಿ ಬರೆ ಪಾಲಿಸುವ ಜಗದೇಕವೀರನನಘಂ ॥ (69)

ತಪನಕುಲಪಾವನ್ನನೆನ್ನಪಾಲಿಸಿದ ಪರಿ ।
ಗುಪಕಾರವಂ ಮಾಡಿ ಮೆಚ್ಚಿಸುವಡೇಸರವ ।
ಕಪಿ ಚಪಲನಲ್ಪಸಾರಾನ್ವಿತನುಮೆನುತಖಿಲಲೋಕಮೆಲ್ಲಂ ಬಲ್ಲುದು ॥
ಕೃಪೆಯಿಂದ ಡಿಂಗರಿಗನೆಂದೊರೆದು ಕರವಿಡಿದು ।
ಕೃಪಣತೆಯು ಪರಿದು ಸಂಪದಮಿತ್ತು ದೇವಗಾ ।
ನುಪಮೆದಾರೆಂದೆನಿಪೆನನುದಿನಂ ಮನ್ಮನೋಮಂದಿರದಿ ಪೂಜಿಪೆನೆಲೈ ॥ (70)
ಯೆನ್ನಿಂದಮುಪಕಾರವಾ ಮಹಾಪುರುಷಂಗ ।
ಮೆನ್ನಜನ್ಮವ ಸಫಲಮೆನಿಸಲ್ ಪ್ಲವಂಗಬಲ ।
ವನ್ನು ನೆರಪಿಹೆನರಸ ಮಳೆಗಾಲವಂ ಕಳೆದು ಕಾರ್ಯಕೊದಗುವೆನೆನ್ನುತ ॥
ಸನ್ನಾಹದೊಳಗಿರ್ದನಲ್ಲದಾಂ ಮದಮತ್ತ ।
ನೆನ್ನಿಸಿರೆನಾದಡಂ ಸೇವಕನ ದೋಷಂಗ ।
ಳನ್ನೆಣಿಸಲೇನುಂಟು ಕರುಣಾರಸದಿ ಪೊರೆಯುವೇಳ್ಕೆನುತ ಕೈಮುಗಿದನು ॥ (71)
ವಿನಯಮೃದುಮಧುರತರವಚನಂಗಳಂದಾಗ ।
ಮನಕೊದಗಲಾನಂದವೋವಿ ರವಿನಂದನನ ।
ಬಿನದವೆನಲಪ್ಪಿ ಸಂತೈಸಿ ಸಿಂಹಾಸನದಿ ಕುಳ್ಳಿರಿಸಿ ಮಮತೆಯಿಂದ ॥
ಸನುಮತಂಗೊಳಸಲನುಗೈದ ಶ್ರೀರಾಮಪದ ।
ವನಜಸಾರಸಭೃಂಗ ಭವದೀಯ ಭಕ್ತಿಬಲ ।
ವನು ಪೊಗಳಲೆನ್ನಳವೆ ಸಾರಾಂಶಮಂ ತಿಳಿದು ಹರುಷಿಸುವುದೆನುತೊರೆದನು ॥ (72)
ಜಗತೀತಳದಿ ರಾಮಗಹನಾಂಕಣಭೀಮ ।
ನಿಗೆ ತಕ್ಕ ಸೇನಾನಿ ನೀಂ ಜಯಶ್ರೀಜಾನಿ ।
ಯುಗಪದಿಟ್ಟಿಸಲಾವ ಕಾರ್ಯವಾಗದು ಜೀವಲೋಕ ನೆನೆದಡೆ ಬಾರದೇ ॥
ಸುಗುಣತಿಳಯುದ ಜಾಡ್ಯಮತಿಯೊಳತಿಕ್ರೂರಾಢ್ಯ ।
ದಗಣಿತದ ನುಡಿಗಳಂ ಮರೆಪ್ರದಾರಡಿಗಳಂ ।
ಜಗದೀಶ ದುಮ್ಮಾನಮನ್ನೋವಿ ಸನ್ಮಾನಮುಳದೆನಾಂ ಕಪಿಕುಲೇಂದ್ರ ॥ (73)
ಶರದಾಗಮಮದಾಗೆ ಮೊರೆವುತಾರಡಿ ಕೂಗೆ ।
ಮಿರುಗೆ ಕಾದಂಬಗತಿ ಚಲಿಸಲ್ಕದಂಬತತಿ ।
ಗಿರಿಮಲ್ಲಿಕಾಪ್ರತತಿ ಪರಿಮಳವಬೀರಲತಿರಾಗವೇರ್ಪಡೆ ರಘುಪತಿ ॥
ಧರಣಿಜೆಯ ನೆನೆನೆನೆದು ದೈನ್ಯರಸನೊಳ್ ನನೆದು ।
ಪರಿಪರಿಯ ಪಲುಬುತಿರೆ ಪರಿಣಾಮಗೊಳ್ಳದುರೆ ।
ಮರುಗಿತಂತಃಕರಣದಿಂ ಮುಂದೆ ವಿಬುಧಜಣ ಕಾಣ್ಬರಾದುದು ಕಾರಣಂ ॥ (74)
ಬೇಗ ನೀನೈದಿ ಸಂತೈಸದಿರಲಿನ್ನಾರು ।
ಪೋಗಿ ಸಂತಸಗೊಳಿಪ ವೀರರುಂಟೇ ತೋರು ।
ಭೋಗಜೆಯುಮೊವ ಪೊಣೆ ನೀನಲ್ಲದಾವನೆಣೆಯಾಗುವಂ ಭೂತಳದೊಳು ॥
ಜಾಗವೂಡದೆ ನಡೆದು ಜಂಜಡಗಳಂ ಪೊಡೆದು ।
ಶ್ರೀಗರುವನಂ ಪೊರೆದು ಶ್ರಿತವಾಂಛೆಯಂ ಮೆರೆದು ।
ಸಾಗರಾಂತದ ಕೀರ್ತಿಯನ್ನಾಳ್ದು ಚಿರಸುಖದಿ ಬಾಳ್ದಪುದು ಕಪಿಕುಲೇಶ ॥ (75)

ಎಂದು ಸೌಮಿತ್ರಿ ಕುಸ್ತುರಿಸಿ ಹರುಷೋತ್ಸುಕದೊ।
ಳೆಂದು ಭಾಸ್ಕರತನಯು ಮಂತ್ರಿಗಳಗೊರೆದ ಕಪಿ।
ವೃಂದಮಂ ಪೊರವಳಯದಲ್ಲಿ ಶುಭವೇಳೆಯುಲಿ ಪಾಳಯವ ಬಿಡಿಸಿ ಬೇಗಾ॥
ಇಂದಿರಾವರರಾಮಪುರದರಸನಂ ಕಾಣ್ಬೆ।
ನೆಂದು ಭುಲ್ಲವಿಸಿ ಲಕ್ಷ್ಮಣನ ಪೂಜೆಸಿ ಚಿತ್ತ।
ದಿಂದ ರಘುವರಪದದ್ವಂದ್ವದೆಡೆಗೈದಿದಂ ಪ್ರಬಲಬಲದಿಂದ ಮುಂದೆ॥ (76)

(ಸಂಧಿ 14 ಕ್ಕಂ. ಪದ 615.)

## ಹದಿನೈದನೆಯ ಸಂಧಿ

ಸೂಚನೆ॥ ಪ್ರಬಲಬಲ ಸೌಮಿತ್ರಿ ಸಹಿತವಾ ಸುಗ್ರೀವ।
ವಿಭವದಿಂದೈತಂದು ಶ್ರೀರಾಮಚಂದ್ರಮನ।
ಶುಭಚರಣಗಳಗೆರಗಿ ಸಂತಸದಿ ಪ್ಲವಗಬಲಮೆಲ್ಲಮಂ ತೋರಿಸಿದನು॥

ಪದ॥ ತರಣಿತನಯುನ ಮನೋವೃತ್ತಿಯುಂ ಕಂಡಾಗ।
ಮರುತಾತ್ಮಭವ ಚಮೂಪತಿ ನೀಲ ಕಪಿಬಲವ।
ಕರೆಸಿ ನಗರಾದ್ಬಹಿರ್ದೇಶದೋಳ್ ಪಾಳಯುವ ಬಿಡಿಸಿ ಜವದಿಂದವೈದಿ॥
ತರಿಸಿ ಬೆಳ್ಗೊಡೆಚಾಮರಂಗಳಂ ಶಿಬಿಕಾದಿ।
ಪರಿಪರಿಯು ರಾಜೋಪಚಾರಗಳನನುಗೈದು।
ಹರುಷದಿಂ ವಿಜ್ಞಾಪನಂಗೈದರಾನಂದಿಯಾದ ಸುಗ್ರೀವನಗಜೇ॥ (1)
ವಂದಿಮಾಗಧನಿಚಯುಮುಗ್ಗಡಿಸಿ ಕೇಳ್ದು ರವಿ।
ನಂದನಂ ಲಕ್ಷ್ಮಣನ ಕರವಿಡಿದು ಶುದ್ಧಾಂತ।
ದಿಂದ ಪೊರಮಟ್ಟಿಂದ್ರನಣ್ಣಂಗೆ ವಯುದಿಂದಮಿತ್ತ ನವರತುನಮಯುದ॥
ಛಂದವಾದತಿಶಯುದ ಶಿಬಿಕಾಧಿರೋಹಣವ।
ಬಂಧುರಪ್ರೇಮದಿಂದೈದಿ ಪಿಂದೆಡೆಯುಲಾ।
ನಂದದಿಂ ಚತುರಂತಯಾನವೈಭವದಿಂದಮಾಪುರವ ಪೊರವಂಟನು॥ (2)
ಬಿರುದನುಘ್ಘಡಿಪ ಮಾಗಧವಂದಿಸಂದೋಹ।
ಪುರತ ಸ್ಸುವರ್ಣಮಯುಯುಷ್ಟಿಕಾಸಾಗಳಂ।
ಉರವಣಿಸ ಪಿಡಿದುಂ (?) ಬರಾಬರಿಗಳಂ ಬಿಡಿಪ ಸೌವಿದಲ್ಲರ ರಭಸದಿ॥
ವರಕಶಾಘಾತಪಾತನದಿಂದ ಮೊಡಬಲದ।
ಹರಿಗಳಂ ಬೆದರಿಸುತ ಬರುತಮಿರಲುಭಯುಚಾ।
ಮರತಚ್ಛತ್ರದೈತಂದ ಕಪಿಸಾರ್ವಭೌಮನಾನಂದದಿಂದ [ಭರದಿ]॥ (3)
ಅಂಜನಾಚಲನೀಳರತಿಬಲಾನ್ವಿತಪ್ಲವಗ।
ಕುಂಜರರ್ ಮುಕ್ಕೋಟಿಗಧಿನಾಥ ಹರಿಯು ಕರ।
ಕಂಜಗಳ ಮುಗಿವುತಿಹ ಜೀಯುಪಾಯುವಧಾರು ನಿಟ್ಟಿಪುದು ಬಹುಪರಾಕು॥
ಕಂಜಬಾಂಧವನಸ್ತಮಿಸುವಶೈಲನಿವಾಸ।
ರಂಜಿಸುವ ಹೇಮಾಭದಶಕೋಟಿ ಪ್ಲವಗ ಪ್ರ।
ಭಂಜನೋದ್ಗತಿಯು ಕಪಿತತಿಯು ಕೈಮುಗಿಯುತಿದೆದಯುದೊಳ್ಪ್ರೇಕ್ಷಿಪುದು ಜೀಯು॥

ಹರನ ಗಿರಿಯಿಂದಯ್ತಂದ ಸಾಸಿರಕೋಟಿ ।
ಹರಿಗಳಾ ಹರಿಕೇಸರಾಭವರ್ಣರು ಭಕ್ತಿ ।
ವೆರೆದಿವೆನುತಿಹುದು ಕಪಿರಾಯ ಚಿತ್ತವಧಾರು ತುಹಿನಗಿರಿತಟನಿಕಟದಿ ॥
ನಿರತಮಿಹ ಸಾಹಸ್ರಕೋಟಿಸಂಖ್ಯಾ ಕಪೀ ।
ಶ್ವರರು ನಮಿಪರ್ ದೇವ ಧರಣೀಸುತೋಪಮಿತ ।
ದುರುಪರಾಕ್ರಮಮೈಂಧ್ಯ ಶತಕೋಟಿ ಸಾಹಸ್ರಮೆರಗುತಿದೆ ಕಪಿಲಲಾಮ ॥ (5)

ಕ್ಷೀರೋದಧಿಯ ತಟಿತ್ರಮಾಲ ವನವಾಸಿಗಳು ।
ನಾರಿಕೇಳಾದಿಗಳ ನೆಣಿಸಲಳವಲ್ಲ ದೌ
ದಾರ್ಯ ಶಾಖಾಮೃಗೋತ್ತಮರು ಕಾಣಿಸಿಕೊಂಬರಿಪ್ಪನಾಯುಷ್ಮಂತನೆ ॥
ಧಾರುಣೀತಳದೊಳನಿತುಂಟಾ ಬಲೀಮುಖರ ।
ವೀರರೈತಂದು ಕಾಣಿಕೆಂಗುನಿತ್ತೆರಗುತಿದೆ ।
ಸೂರನಂದನ ಪರಾಕೆನುತ ಬಿನ್ನೈಪಗೈದರಾ ವೇತ್ರಹಸ್ತರೊಲಿದು ॥ (6)

ಪ್ಲವಗಾಧಿಪತಿಗಳೈತಂದು ಕಾಣಿಕೆಗೊಡ ।
ಲ್ಕವಿರಳದ ಹರ್ಷದಿಂ ಕೈಕೊಂಡು ಮನ್ನಿಸುತ ।
ಮವರವರ ವಿಧವರಿತು ಸನ್ಮಾನಬಹುಮಾನಗಳನಿತ್ತು ಕುಸ್ತರಿಸುತ ॥
ರವಿಕುಲೇಶನ ಕಾಂಬರತಿಕ್ಷಿಪ್ರದಿಂ ಪೋಪ ।
ಲವಲವಿಕೆಯಿಂದೈದುವವಸರದಿ ಕಹಳೆತ್ರತಿ ।
ಸುವಿಮಲದ ಶಂಖಭೇರೀಮೃದಂಗಾದಿರವ ದಶದಿಶಾಕ್ರಮಣಗೈಯೆ ॥ (7)

ರಾಮನೊಪ್ಪಿದ ಪುಣ್ಯಶೈಲದೆಡೆ ಗೈತಂದು ।
ಸೌಮಿತ್ರಿ ಸಹಿತ ಶಿಬಿಕಾವತರಣಂಗೈದು ।
ನೇಮದಿಂ ಫಲಪುಷ್ಪಗಳನು ಕಾಣಿಕೆವಿಡಿದು ನಳನಾಕ್ಷನೆಡೆಗೆ ನಡೆದು ॥
ಸಾಮಗಾನಪ್ರಿಯ ಸನಾತನ ಪರಬ್ರಹ್ಮ ।
ಸಾಮಜಾವನ ಸದಾಶಿವಮಯ ನಿಜಾನಂದ ।
ದಾಮ ರಾಮ ನಮೋಯೆನುತ್ತ ವಂದನಂಗೈದನಾಗ ಸುಗ್ರೀವನೊಲಿದು ॥ (8)

ಎರಗಿದ ಕಪೀಂದ್ರನಂ ಬರಸೆಳೆದು ಬಿಗಿಯಪ್ಪಿ ।
ಹರುಷದಿಂ ಕುಳ್ಳಿರಿಸಿ ಬೆಸಗೊಂಡನಾ ಮಯನ ।
ಪರಿಪರಿಯಲುಪಚರಿಸಿ ಪೊಗಳದಂ ರಘುವೀರ ಭಕ್ತವಾತ್ಸಲ್ಯಮೆಂತೊ ॥
ನಿರತಿಶಯ ಸೌಭಾಗ್ಯ ಕರಕಲಿತವಾದಂತೆ ।
ತರಣಿಸುತನಾಗಮನಮಾತ್ರದಿಂ ಧರಣಿಜೆಯ ।
ಮರೆದು ಹಿಗ್ಗಿದನದೇಂ ಕರುಣಿಯೋ ನರನಾಥ ಭಜಕಸುರಭೂಜನಲ್ತೆ ॥ (9)

ಕ್ಷಿತಿಯೊಳಗೆ ಕುಳ್ಳಿರ್ದ ಸುಗ್ರೀವನೊಡನೆಂದ ।
ನತಿಶಯದ ಮೃದುಳತರದಿಂದ ನಸುನಗೆಯಿಂದ ।
ಕ್ಷಿತಿಪರಿಗೆ ಗುಣಧರ್ಮಕಾಮಾರ್ಥವೆನಿಸುವವ ಕಾಲೋಪಸೇವನೆಯೊಳು ॥
ಹಿತಮಿತದಲನುಸರಿಸೆ ಸುಖದಿ ಬಾಳ್ದಪರಲ್ಲ ।
ದತಿಶಯಂಗೈಯೆ ಕಾಮವನು ತರುಗೊನೆಯೊಳಗೆ ।
ಮತಿಗೆಟ್ಟು ಮಲಗಿದನ ಪರಿಯುಪ್ಪದಲ್ಲದವ ಪ್ರಥಿತನಾಗನು ಕಪೀಶ ॥ (10)

ಅರಿಗಳಂ ನಿಗ್ರಹಿಸಿ ಪೊರೆದು ನಿಜಬಂಧುಗಳ।
ಧರಿಣಿಗುಂ ಪ್ರಿಯನೆನಿಸಿ ಮೂರು ವರ್ಷದ ಫಲವ।
ನರಿತುಂಡು ಧರ್ಮಸಂಕಲಿತಮನನಾದವಂಗರಸುತನ ಚಿರಮಪ್ಪುದು॥
ಹರಿಕುಲಾಗ್ರಣಿ ನೀತಿಶಾಸ್ತ್ರಂಗಳಲಿ ಪೇಳ್ದ!
ಪರಿಯನೀ ನರಿಯದುದೆ ಶತ್ರುನಿಗ್ರಹ ಜನಕ।
ತರುಣಿ ಬರುವಡುಪಾಯಮೇನುಂಟದಂ ತಿಳದು ಮಾಳ್ಪುದೈ ಮಂತ್ರಿವೆರೆದು॥ (11)

ಪೋದ ಕೀರ್ತಿಯುಂ ಸಿರಿಯುಂ ಪ್ಲವಗರಾಜ್ಯಂ ಸುಖಾ।
ಮೋದಂತವತ್ಪ್ರಸಾದದಲ್ಲೆನಗೆ ಸಮನಿಸಲ್।
ಪಾದಸ್ಮರಣೆವಿಡಿದು ಪಲವುವಿಧ ಸಾಧನದ ಪರಿಕರಗಳನುವಗೈದು॥
ಮೇದುರ ಪ್ರಯತ್ನದಿಂದೈತಂದು ರಕ್ಕಸನ।
ಸೂದನಂಗೈವರಿಚ್ಛೈಸಿರ್ದ ಕಪಿಬಲನ।
ನೀ ದಯದಲೀಕ್ಷಿಪುದು ಬಾನೆಡೆಯುಂ ಮತ್ತಿಳೆಯುಂ ಬೆಸಲಾದೊಲೆಸೆವುದೈಸೆ॥ (12)

ದೇವಗಂಧರ್ವಋಷಿಪುತ್ರಹರಿಶರಭಗಜ।
ತೀವಿಯುಳ್ಳತುಲಬಲರೀ ಬಲೀಮುಖರಖಿಲ।
ಪಾವನಮಹಾಕ್ಷೇತ್ರ ವಾಸಿಗಳು ಭೂತಳದಪರಿಯನೆಲ್ಲರ್ ಬಲ್ಲರು॥
ದೇವರಾಜ್ಞಾಪಿಸಿದ ಮಾಳ್ಕೆಯೊಳ್ ಕಾರ್ಯವನ।
ತೀವಜವದಿಂದೈದಿ ಪದದೆಡೆಯಲೊಪ್ಪಗಿಪ।
ಈ ವಸುಧೆಯೊಳಗಿವರಿಗಗ್ಗಳದ ವಿಕ್ರಮರ್ ಕಾಣ್ಬುದಿಲ್ಲರಸ ನೆಲದೆ॥ (13)

ಸಾಮುದ್ರನಾದೇಯ ಪಾರ್ವತೇಯರು ಮಹದ್।
ಭೀಮಬಲ ಪ್ರಬಲದಾಡೆಗಳು ಘೋರಾಕೃತಿಯ।
ಧೂಮರಹಿತಗ್ನಿಯಂತೆಸೆವರತಿಜೀವಿಗಳು ವೈನತೇಯೋಪಮಿತರು॥
ಸ್ವಾಮಿಕಾರ್ಯಕೆ ತನುವ ತೆತ್ತು ಶಿರದೊಳಗಾಂತು।
ನೇಮಮಂ ಮನದಿಷ್ಟಮೇನುಂಟದೆಲ್ಲಮಂ।
ತಾಮಸಂಗೈಯದಲೆ ತಂದೀವರೀ ಪ್ಲವಗಸತ್ತಮರು ಮಿತ್ರಜ್ಞರು॥ (14)

ಶತಶತ ಸಹಸ್ರ ಸಾಹಸ್ರ ಲಕ್ಷಂ ಲಕ್ಷ।
ವಿಶ್ರತ್ರಮಯುತಾಯುತಂ ಕೋಟಿಕೋಟಿಗಳು ಮ।
ತ್ರ್ತಿಶಯರ್ಬುದಮರ್ಬುದಂ ಖರ್ವ ಶತಖರ್ವ ಶಂಕು ಸಾಸಿರಶಂಕುಗಳ್॥
ಕ್ಷಿತಿಯರೇಣುಗಳೆಣಿಸಬಹುದು ಕಪಿಬಲದ ಸಂ।
ಗತಿಯ ಗಣಿಸಲ್ಕೂಡದೇಕಂ ಪದಾರ್ಥ ಪರಿ।
ಗತಲೆಖ್ಖದಿಂದಾಗರಸ ಮತ್ತೀಬಲಂ ತವ ಪದದೊಳಗಂಗೈವುದು॥ (15)

ಮೇರುಮಂದರನಿಲಯದಮಿತಸಾಹಸಗಳೀ।
ಧಾರಿಣಿಯನೆಲ್ಲಮಂ ಚರಿಸಿ ಬಲ್ಲರ್ ದೇವ।
ಚೋರದಶಕಂಧರನ ತರಿದು ಧರಣೀಸುತೆಯ ತಂದೊಪ್ಪಿಸದೆ ಮಾಣರು॥
ಕಾರಿಯವೊಳೆಲ್ಲಂ ಭವಚ್ಚರಣಗಳಗೆ ವಿ।
ಸ್ತಾರವೆನೆ ಗೋಚರಿಪುದೆನುತೊರೆದ ಭಾಸ್ಕರಕು।
ಮಾರನಂ ಕುಸ್ತರಿಸಿ ರಘುನಾಥನಿಂತೆಂದ ನಸುನಗುತ ವಿನಯದಿಂದ॥ (16)

ಸುರಪ ಮಳೆಗರೆವುದುಂ ಸೂರ್ಯ ಕಳ್ತಲೆಯನಂ ।
ಪರಿದಪುದು ಶಶಿ ಸರ್ವಜಗತಿಯುಂ ಪೊರೆದಪುದು ।
ಧರೆಗಿದೇಂ ಚಿತ್ರ ಸನ್ಮಿತ್ರ ಮಿತ್ರಾರಸಂ ನಿನ್ನಿಂ ಸನಾಥನಾಗಿ ॥
ಅರಿದಶಾಸ್ಯನ ಕುಲವ ತರಿದು ವೈದೇಹಿಯುಂ ।
ಕರವಿಡಿದೆನೆಂದಿರ್ದನಲ್ಲದನುಮಾನ ಮೇ ।
ನಿರುಪುದೈ ಕಪಿರಾಯ ಸಾಧುಸಜ್ಜನ ಪ್ರಿಯ ಸುಜನಾನಂದದಾಯ ॥ (17)

ಯೆನುತ ಸಂತಸದಿಂದ ರಾಘವಂ ಬೇಳುತಿರ ।
ಲನಿತರೊಳ್ ಕೆಂದೂಳಡರ್ದು ನಭವುಂ ತುಂಬಿ ।
ತಿನಶಶಿಗ್ರಹತಾರೆಗಳ ಗರ್ಭದೊಳಗಾಂತ ಭೂತಳಮದಾಗಸ್ತುಂಬರಂ ॥
ವನಪರ್ವತಂಗಳ್ ಕುಲಾಲಚಕ್ರೋಪಮಿತ ।
ಮೆನೆ ಭೂಮಿಕಂಪಿಸಿದುದೆಣ್ದೆಸೆಗಳೊಳ್ ಪ್ರತಿ ।
ಧ್ವನಿಗೊಡಲು ಕಡಲು ಮೇಲ್ವರಿದಂತೆ ವಾನರೀಶ್ಯಾನೆ ನಡೆತಂದುದೊಲಿದು ॥ (18)

ತರುಣಾರ್ಕನಿಭವರ್ಣ ಪದ್ಮಕಿಂಜಲ್ಕನಿಭ ।
ವರಸುಧಾಕರತೇಜ ಮೇರುಮಂದರಮೆನಿಪ ।
ಹರಿಗಳು ಪತ್ತುಸಾಸಿರಕೋಟಿಯೊಡಗೊಂಡು ಶತಬಲಿಯು ಕಂಗೆಸೆದನು ॥
ಮಿರುಪ ಸೌವರ್ಣಶೈಲಾಭ ದಶಸಾಹಸ್ರ ।
ಮೆರಡೊಂದು ಕೋಟಿ ಕಪಿಬಲಸಹಿತಮೈತಂದು ।
ಕರಗಳಂ ಮುಗಿದ ತಾರೆಯ ಪಿತೃನಾತ ಗಜಸಾರನಾ ಕಪಿವೀರನು ॥ (19)

ರುಮೆಯ ಪಿತನೈತಂದು ಸಾಸಿರಂಕೋಟಿಯುತ ।
ಸಮದಕೇಸರಿದರ್ಪ ಕಪಿವೀರರೊಡವೆರೆದು ।
ವಿಮಲಫಲಪುಷ್ಪಗಳ ಕರವಿಡಿದು ಕೈಮುಗಿದು ಕೆಲಸಾರಿದಂ ಮುದದೊಳು ॥
ಕಮಲಕಿಂಜಲ್ಕನಿಭದಮಿತಸಾಹಸ್ರಕಪಿ ।
ರಮಣೀಯಾಧೀಯುತಂ ವೀರಕೇಸರಿ ಬಂದ ।
ನಮಿತಧೀಯುತ ಪರಾಕ್ರಮಿಗಳಗ್ರೇಸರಂ ವೈದೇಹಿರಿದಂ ಮುದದೊಳು ॥ (20)

ಬಂದ ಗೋಲಾಂಗೂಲಪತಿ ಗವಾಕ್ಷಂ ಸೇನೆ ।
ಯಿಂದಮೊಕ್ಕೋಟಿ ಸಾಸಿರವಾರ ತೋರ್ದೈದೆ ।
ಪಿಂದೆ ಋಕ್ಷಂಗಳಧಿನಾಥ ಧೂಮ್ರಂ ಸುಳದ ನಿಕ್ಕೋಟಿಬಲವಬೆರೆದು ॥
ಛಂದದಿಂ ಮುಕ್ಕೋಟಿ ಕಪಿಗಳಂ ಕೈಲಾಸ ।
ಮಂದರೋಪಮಮೆನಲ್ ಪನಸ ತೋರಿದ ಮೇಘ ।
ದಂದದಿಂ ನೀಲ ದಶಕೋಟಿಮಂಗಗಳೊಳ್ಳೈದಿ ನಿಂದು ಕರಗಳ ಮುಗಿದನು ॥ (21)

ಐದುಕೋಟಿ ಪ್ಲವಂಗಮರಿಂದ ಗವಯ ತಾ ।
ನೈದೆ ಬಂದನು ದಧಿಮುಖಂ ಕೋಟಿಸಾಸಿರದ ।
ಲೈದಿ ಬರಲಶ್ವಿನೀಪುತ್ರರ್ ಮಹಾಬಲರ್ ಮೈಂದದ್ವಿವಿದನಾಮರು ॥
ಐದೈದು ಮತ್ತೈದು ಕೋಟಿಸಾಸಿರ ಕಪಿಗ ।
ಳೈದಿ ಬರಲೈತಂದ ಮುಕ್ಕೋಟಿ ವಾನರರ ।
ನೈದೊಡನೆ ಕರೆದು ಗಜನೆಂಬಾ ಮಹಾಕಪಿಯು ಕಂಗೆಸೆದ ಮೋದದಿಂದ ॥ (22)

ಅಂಬುಜಾಸನತನಯು ನಿಖಿಲಭಲ್ಲೂಕನಿಕು ।
ರುಂಬದಶಕೋಟಿಯುತನಾಗಿ ನಡೆತಂದನಾ ।
ಜಾಂಬವನು ಬಲಶಾಲಿ ಮತಿಯುತರೊಳಗಗ್ಗಳಂ ಮಾನ್ಯ ಹರಿಮೂರ್ಧನ್ಯನು ॥
ಕುಂಭಜೋಪಮರುಮಣ್ವಾನ್ನಾಮ ವಾನರಂ ।
ಸಂಭ್ರಮದಿ ಕೋಟಿಶತಶಾಖಾಮೃಗಂಗಳಾ ।
ಡಂಬರದಲೈತಂದು ಕಾಣಿಕೆಯನಿತ್ತೆರಗಿ ನಿಂದು ಕರಗಳ ಮುಗಿದನು ॥ (23)

ಮಂದರಂ ಮೇರುವೈತಂದ ಮಾಳ್ಕೆಯೊಳು ನಡೆ ।
ತಂದನಾ ಗಂಧಮಾಧನ ಕೋಟಿಶತಶತಗ ।
ಳಂದ ಪದ್ಮಸಹಸ್ರಶಂಕುಶತಮರ್ಬುದಗಳಮಿತಬಲದೊಡನೆ ಬೇಗ ॥
ಬಂದ ಯುವರಾಜನಂಗದನಿಂದ್ರಸಂಭೂತ ।
ನಿಂದಧಿಕಬಲನಾತನೊತ್ತಿನಲಿ ಷಟ್ಕೋಟಿ ।
ಬೃಂದದಿಂ ತಾರ ಮೈದೋರಿದಂ ರಾಘವಂ ಬೆರಗಾಗಿ ನಿಟ್ಟಿಸುವ್ರೊಲು ॥ (24)

ಪನ್ನೊಂದುಕೋಟಿ ಕಪಿವೀರರೊಡವೆರೆದಾಗ ।
ನನ್ನಿಯಿಂದಯುಥಾಪನೈತಂದನೆಡಬಲದಿ ।
ಸನ್ನುತಿಸಲಯುತಸಾಸಿರ ಕಪಿಪ್ರವರರುಂ ರಂಭ ನಡೆತಂದನೊಲಿದು ॥
ಭಿನ್ನಗಿರಿಶಕಲಗಳೊಯೆನಲೆರಡು ಕೋಟಿಕಪಿ ।
ಯುನ್ನತರನೊಡವೆರೆದು ದುರ್ಮುಖ ಮಹಾವೀರ ।
ಮುನ್ನೈದಿ ಪೊಡಮಟ್ಟು ಕಾಣಿಕೆಯನಿತ್ತು ರವಿಸುತನ ಕೆಲದೊಳ್ ನಿಂದನು ॥ (25)

ರಜತಾಚಲೋಪಮಿತ ರಮಣೀಯಕರಮಾದ ।
ವಿಜಯಕೋಟಿಸಹಸ್ರ ಕಪಿಗಳೆಡಬಲದೊಳಂ ।
ಭಜಿಸುತಿರೆ ಹನುಮಂತನೈತಂದು ಪದಕೆರಗಿ ವಾನರೀಬಲವ ತೋರೆ ।
ಕುಜಗಿರಿವ್ರಜಹಸ್ತಕಲಿತಪ್ಲವಗಾಧಿಪರು ।
ಗಜರುತ್ತಮೊಕ್ಕೋಟಿ ಶತದೊಳಂ ವಿಶ್ವಕ ।
ರ್ಮಜ ನಳಂ ತಾಂ ಬಂದು ಕರಗಳಂ ಮುಗಿದೆರಗಿ ಕಂಡನಾ ರಘುವೀರನ ॥ (26)

ದಧಿಮುಖಂ ದಶಕೋಟಿ ಕಪಿಗಳಂದೈತಂದ ।
ನದೆ ಶರಭ ಕುಮುದ ವೈಶ್ವಾನರಂ ಮೊದಲಾದ ।
ಪದಿನೇಳುಕೋಟಿ ಕಪಿನಾಯಕರೊಳಾ ಪೃಥಿವಿ ಕಂಗೆಸೆಯದಾದುದಾಗ ॥
ಇದರಿಂದಮಾಜಿಯೊಳು ಬರುವ ಕಪಿಸಂತತಿಗ ।
ಳುದಯಮಂ ಗಣಿಸಲಾರ್ಗಳವಲ್ಲ ನಾಯಕರು ।
ವಿದಿತವಾಗಿರುವುದೆಪ್ಪತ್ತೇಳುಕೋಟಿ ಮಗುಳೆನಿತಿರ್ಪ ರೆನುತರಿಯರು ॥ (27)

ಬಲವೆಲ್ಲ ಬಂದುದಾಕ್ಷಣದಿ ಸೂರ್ಯನ ಸುತ್ತು ।
ಮುಲಿವ ಮೇಘಂಗಳೆನೆ ಸುಗ್ರೀವನವರುಗಳ ।
ನೊಲಿದು ಮನ್ನಿಸಿ ರಾಘವೇಂದ್ರನಂ ಕಾಣಿಸುತ ಕಾಣಿಕೆಗಳೊಪ್ಪಿಗಿಸುತ ॥
ಕಳುಪಿ ಕೈಮುಗಿದು ರಘುವೀರ ಕೇಳ್ ಬಲದಿ ।
ನಳನಭವನಿಂದ್ರಚಂದ್ರಾದಿ ದೇವರ್ಕಳೇ ।
ತಳೆದು ಕಪಿರೂಪುಗಳ ತ್ವಚ್ಚರಣಸೇವೆಗೈತಂದಿರ್ಪರೆಂದರಿವುದು ॥ (28)

ವಿನತಾಸುತನ ಗಮನ ವೀರಮಾರುತನ ಗತಿ।
ಯನು ಮಿಕ್ಕಿರ್ಪರಿಂದ್ರಾದಿದೇವರ್ಕಳಿಂ।
ಮನದೊಳಗೆ ಗಣಿಸದ ಪರಾಕ್ರಮಿಗಳೀ ಬಲದೊಳಿರ್ಪರ್ಕೈ ಕಪಿವೀರರು॥
ವನಜಜಾಂಡದ ಕರ್ಪರವನೊಡೆವ ಬಲಗಳುಂ।
ಘನಕಾಮರೂಪಿಗಳು ಜನ್ಮಸಾರ್ಥಕ್ಯಮಿಂ।
ದೆನಿಸಿಕೊಳಲೊಳಗಕೆ ಭಕ್ತಿಯಿಂ ಬಂದಿಹರು ಬೆಸನೀವುದಭಿಮತವನು॥ (29)
ಎಂದೊರೆದ ಸುಗ್ರೀವನಂ ತೆಗದು ತಕ್ಕೈಸಿ।
ಬಂಧುರಸ್ನೇಹದಿಂದಾಗ ರಘುನಂದನಂ।
ಛಂದದಿಂ ನುಡಿದ ಸುರತರುವಂಗಣದೊಳಿರ್ದು ಬೇರೆ ಬಯಸುವದದೇನು॥
ಪಿಂದೊರೆದ ಸೌಮಿತ್ರಿಯಾನು ನಿನ್ನಾಧೀನ।
ಮೆಂದು ಬಳಕಡಿಗಡಿಗೆ ಕಾರ್ಯಂಗಳೀನರುಪ।
ಲಂದು ಮುಂದಾಗುವದ ನೀನೆ ಯೋಚಿಸಿ ತಿಳದು ಮಾಡುವದು ಮನವೊಲಿದೊಲು॥
ಧರಣಿಜೆಯ ಪೋಗಾಡಿ ದುಮ್ಮಾನದೊಳು ಕೂಡಿ।
ಬರತಮರುಹಾತ್ಮಜಕಬಂಧಾದಿ ವಚನಗಳ।
ಪರಿವಿಡಿದು ಭಾಸ್ಕರನ ಸುತನ ಕಂಡಾಕ್ಷಣದಿ ಸರ್ವಸ್ವಮನ್ನಾತಗೆ॥
ಕರಕಲಿತ ಗೈದಾಗ ದುರುಳದಶಶಿರ ಪೋದ।
ಧರಣಿಸುತೆಸಿರಿಸಂಪದಂಗಳುಂ ವಶಮಾದು।
ದರಿತು ಮಗುಳಾವುದಾನೊರೆವುದುಳಿದೆನು ತಿಳವುದಿದ ಜಯಕಳತ್ರ॥ (31)
ಹರುಷದಿಂ ಗಾಮುಪುರದರಸಂ ನಿರೂಪಿಸಿದ।
ಪರಿಯನೆಲ್ಲವಕೇಳಿ ಸುಗ್ರೀವ ಭಕ್ತಿಯಿಂ।
ದೆರಗಿ ಕರಗಳಮುಗಿದು ನಾಲ್ದೆಸೆಗೆ ಕಪಿಬಲವ ಕಳುಪೆ ಬೆಸನಾಂತು ಮುದದಿ॥
ಕರೆದಾ ಬಲಾಢ್ಯರೊಡನೊರೆದನತಿವೇಗದಿಂ।
ಪರಿದು ದಶಕಂಧರನ ತಾಣಮಂ ಕಂಡು ಬಂ।
ದೊರೆವ ಬಲಶಾಲಿಗಳ ಬೆರೆದೆಗವುದೆಂದೆ ಪುತ ನೇಮಿಸಿದನಾಕ್ಷಣದೊಳು॥ (32)

ಸಂಧಿ 15 ಕ್ಕಂ ಪದ 642॥

## ಹದಿನಾರನೆಯ ಸಂಧಿ

ಸೂಚನೆ॥ ವಿನುತಂ ಮರುತ್ತನಯಶತಬಲಿಸುಷೇಣಕರ।
ನಿನಸುತಂ ಪ್ರಿಯದಿಂದ ಕರೆದು ನಾಲ್ದೆಸೆಯೊಳಂ।
ಜನಕನಂದನೆಯನರಸುವಡೆ ಕಳುಪಿದ ರಾಮಲಕ್ಷ್ಮಣರ ಸನ್ನಿಧಿಯಲಿ॥
ರಾಮನಪ್ಪಣೆವಿಡಿದು ರವಿತನಯನತಿವಿನಯ।
ಪ್ರೇಮದಿಂ ವಿನತನಂ ಕರೆದು ಪೇಳಿದ ನೀನು।
ಸೋಮಸೂರ್ಯಾತ್ಮಭವ ಮುಖ್ಯಕಪಿನಾಯಕರನೊಡಗೊಂಡು ಮೂಡಗಡೆಗೆ॥
ಸೀಮದಿಂದೈದಿ ನದಿನದಗಳ ಗುಹಾಶಯಗ।
ಳಾ ಮಹಾರಣ್ಯಗಳ ಪೊಕ್ಕು ಶೋಧಿಸಿ ಬೇಗ।
ರಾಮನಂಗನೆಯ ಕುರುಹನ್ನಾಂತು ಬಹುದೆನುತ ಪೇಳ್ದನದ್ರೀಂದ್ರಜಾತೆ॥ (1)

ಗಗನಧುನಿಯುಂ ಸರಯು ಕಾಳಿಂದಿ ಸರಸತಿಯು ।
ನೊಗುವಿಗೆಯು ಸಿಂಧುಶೋಣಾದಿಗಳನುತ್ತರಿಸಿ ।
ಮಿಗೆ ಬ್ರಹ್ಮಮಾಲಾ ವಿದೇಹ ಮಾಳವಕಾಶಿಕೋಸಲಂ ಮಗಧಂಗಳಾ ॥
ಸೊಗಸಾದ ಪತ್ತಣಂ ರಜತಾಕರಸ್ಥಳವ ।
ಮಿಗೆಕೋಶಕಾರ ತಾಣಂಗಳಲಿ ನೀವು ಪೊಕ್ಕು ।
ಜಗತೀತ್ರಸೊಭವೆಯು ಸರಸುವದು ಕುರುಪಿಡಿದು ಕಾಮರೂಪಂಗಳಿಂದೆ ॥ (2)
ಉದಧಿಯೊಳು ಮುಳುಗಿರ್ಪ ಶೈಲನಗರಂಗಳಂ ।
ಕುಧರಕೋಟಿಯೊಳಿರ್ಪ ಘೋರಯವನಾದಿಗಳ ।
ಸದರಕರ್ಣಿಕಮೇಕಪಾದ ಬಳಸಿಹ ಕರ್ಣದಾರ್ಜಯುರಯೋಮುಖಿಗಳಾ ॥
ವಿಧುವೈರಿಯನೆ ಕಿರಾತಕರ್ಣಚೂಡರಂ ।
ಬುಧಿಯ ಮಧ್ಯದಲಿರ್ಪ ಹೇಮಾಂಗಪುರುಷಾದ ।
ರದುಭುತದ ಪತ್ತಣಗಳನ್ನರಸಿ ನೋಳ್ಪುದೈ ಕಾಮರೂಪಿಂದೆ ಜವದಿ ॥ (3)
ಯೆಡೆಗೆಡೆಗೆ ರತ್ನಮಯಮೆನಿಸುವ ಯವದ್ವೀಪ ।
ಮೊಡನೇಳು ರಾಜ್ಯೋಪಶೋಭಿತಂ ಸೌವರ್ಣ ।
ಮುಡುನಿಕಾಶದ ರೌಪ್ಯ ಸ್ವರ್ಣಮಂಡಿತ ಧರಣಿಯಿಂದ ರಾರಾಜಿಸುವದು ॥
ಕಡೆಗೊಳಸುತಾ ಯವದ್ವೀಪಮಂ ಪೋಗೆ ಮುಂ ।
ಗಡೆಯುಲಂಬರಚುಂಬಿಸಿಸಿರನಗ ಕಂಗೊಳಪು ।
ದೆಡೆಗೆಡೆಗೆ ದೇವದಾನವರು ತೋರುವರಲ್ಲಿ ನೋಳ್ಪುದೈ ಜಾನಕಿಯನು ॥ (4)
ಮುಂದೆ ಲೋಹಿತಜಲಮಗಾಧಭೀಮಾಕೃತಿಯು ।
ಲೊಂದಿರ್ಪ ಸಿಂಧುತೀರವ ಕಂಡು ಬಹುವನಗ ।
ಳಂದಂಗಳಂ ತಿಳಿದು ಪರ್ವತಗಳಿಂದುದಿತ ನದಿಗಳಂ ನಿಷ್ಕುಟಗಳ ॥
ಛಂದಛಂದದ ದರಿಗಳುಪವನಗಳಂ ನೋಡಿ ।
ಸಿಂಧುದ್ವೀಪಂಗಳಂ ಕಂಡು ಚೆಚ್ಚರಗೊಂಡು ।
ಮುಂದಕೆಡಿಯಿಡುವದೈ ಕಾಣೆ ನೆಳಲಂ ಪಿಡಿವ ದನುಜರೊಪ್ಪಿರುವರಲ್ಲಿ ॥ (5)
ಕಳೆದು ಮುಂದಕ್ಕೈದೆ ಲೋಹಿತದ ಸಾಗರಂ ।
ಪೊಳೆವಧಿಕಕೂಟ ಶಾಲ್ಮಲಿಯುಂ ಮಹಾಗರುಡ ।
ನಿಳಯಮನ್ನುಳಿದು ಮುಂದಡಿಯಿಡಲ್ಕಂದೇಹನಾಮರಕ್ಕಸಸಮುದಯಂ ।
ಕಳೆವೆತ್ತ ಶೈಲಶೃಂಗಂಗಳೋಳ್ ಜೋಲ್ದಿರುವ ।
ನಳನ ಮಿತ್ರೋದಯದಿ ವಿಪ್ರದತ್ತಾರ್ಘ್ಯದಿಂ ।
ಕಳಚಿಬೀಳುವ ರಹನ್ಯಹನಿ ಸಾಗರದೊಳಗೆ ಭೀಮ ದೌರ್ಜನ್ಯಖಳರೂ ॥ (6)
ಅಲ್ಲಿಂದ ನಡೆಯೆ ಕ್ಷೀರೋದಧಿಯು ಕಂಗೊಳಪು ।
ದಲ್ಲಿ ವೃಷಭಾಚಲಂ ದಿವ್ಯಫಲಪುಷ್ಪಂಗ ।
ಳುಲ್ಲಾಸದಿಂ ರಜತದುಪಪರ್ವತಗಳಿಂದ ರಾಮಣೀಯಕವಾಗುತೆ ।
ಅಲ್ಲಲ್ಲಿ ರಜತಸೌವರ್ಣಖಚಿತದ ಸರಗ ।
ಳಲ್ಲಿ ಪೊಂದಾವರೆಗಳುಣುತಂ ಸುದರ್ಶನದ ।
ಚೆಲ್ವಾಂತ ರಾಜಹಂಸೀಗಣ ಸಮಾಕುಲದಿ ಕಂಗೊಳಪುದಾ ಶೈಲವು ॥ (7)

ಸುರಯಕ್ಷಕಿನ್ನರಾಪ್ಸರಿಯರೆಲ್ಲಂ ಕ್ರೀಡೆ ।
ವೆರದಿರ್ಪರಾನೆಲದಿ ಮುಂದಕ್ಕೈದಲ್ಕೋರ್ಪು ।
ದುರುಭೀಷಣಂ ಸರ್ವಭೂತಭಯದಂ ಜಲೋದಧಿಯಲ್ಲಿ ಕೋಪದಿಂದ ॥
ತುರಗವದನಂ ಪುಚ್ಛ ಸಾಗರದ ನಿರ್ಘೋಷ ।
ದುರುಭರದಿ ನೋಡಿ ಬಡಬಾಮುಖವ ನಿರ್ವಹಿಪ ।
ಡರರೆ ಧೃತಿಯುತರಲ್ಲದುಳ್ಳದರಿಂಗಾಗದಾ ತಾಣಮಂ ನಿಟ್ಟಿಸುವರೆ ॥ (8)
ಸಾಗರೋತ್ತರತಟದಿ ಹದಿಮೂರು ಯೋಜನದ ।
ರಾಗಮಯಕನಕಪರ್ವತವೊಸೆವುದದ ಬೇಳ್ವ ।
ರಾಗವೊ ಕರುಜಾತರೂಪಶಿಲೆಯೆಂದೆನುತಲಾ ಮಹಾಪರ್ವತದೊಳ್ ॥
ಮೇಗಿರ್ಪ ಚಂದ್ರನಿಭಪನ್ನಂಗ ಭೂಧರಂ ।
ಶ್ರೀಗರುವ ಸಾಸಿರ ಫಣಾವಿಭೂಷಿತ ಮಹಾ ।
ಭೋಗತಾಲಾಂಕಂ ದಶೇಶ್ವರನ ಭಕ್ತಿಗಂ ವಶನೆನಿಸಿ ಪ್ರೀತಿವೆರಸಿ ॥ (9)
ಮೆರೆದಿರ್ಪನಲ್ಲಿಂದ ಮುಂದಕ್ಕೈದಲು ಹೇಮ ।
ವೆರೆದ ಶ್ರೀಮಾನುದಯಪರ್ವತಂ ಬಾನೆಡೆಯ ।
ಶಿರವಿಟ್ಟು ನೂರು ಯೋಜನದಾಯತದಿ ತೋರ್ಪುದದು ಸ್ವರ್ಣಮಯದಿಂದಲೆ ॥
ಪರಿಪರಿಯ ನಂದನದಿ ಸುರಪಾವಿ ಸೇವಿತದಿ ।
ಹರುಷಗೊಳಿಸುವದೊಂದು ಯೋಜನದ ವಿಸ್ತಾರ ।
ಸಿರಿಕರದ ಶತ ಯೋಜನೋನ್ನತದ ಸೌಮನಸ್ಸಿನ್ನಾರು ಶೃಂಗಮಿಹುದು ॥ (10)
ಮೊದಲು ಪದಮಲ್ಲಿಟ್ಟು ಮತ್ತೆರಡನೆಯ ಪದವ ।
ಪದುಳದಿಂದುತ್ತರದ ಮೇರುಮಸ್ತಕದೊಳಂ ।
ಪದುಮನಾಭಂ ತ್ರಿವಿಕ್ರಮರೂಪವಂ ಕೊಂಡಕಾಲದೊಳಗಿಟ್ಟು ನಡೆದಂ ॥
ಉದಯಗಿರಿವಾಲಖಿಲ್ಯಾದ್ಯ ವೈಖಾನಸರು ।
ಮುದದೊಳೆಸೆವರು ಸುಧಾಗಿರಿಗೆ ಒರೆಯೆನಿಸಿಹುದು ।
ಸದಯಭಾಸ್ಕರಗೈದಿಬರಲುತ್ತರವನುಳದು ದಿವಸವಾದಪುದೂರ್ವಿಗೆ ॥ (11)
ತರಣಿಯಂಗದರಾಗ ಗಿರಿಯದೇಹಚ್ಛಾಯ ।
ವೆರದೆರಡು ಪೂರ್ವಸಂಧ್ಯಾಪ್ರವರ್ತನೆಯಪ್ಪ ।
ಧರಿಸಿ ಧರಣೀಸುತೆಯ ಕುರುಪರಿದು ತಿಂಗಳೊಳಗೈತರ್ಪುದತಿಜವದೊಳು ॥
ಬರದಾವನುಳದನವ ದಂಡನಾಯೋಗ್ಯನೆಂ ।
ದೊರೆದು ಬೀಳ್ಕೊಟ್ಟುಗನ್ಯಾಶಗಂ ಮಾರುತಿಯ ।
ಕರೆದಂ ಗವಾಕ್ಷಗಜಗವಯಮೈಂಧದ್ವಿವಿಧಜಾಂಬವಾದ್ಯರ ಪ್ರೇಮದಿ ॥ (12)
ಪೇಳದಂ ದಕ್ಷಿಣದ ದಿಕ್ಕು ದುಸ್ತರ ದೈತ್ಯ ।
ರಾಳದವ ಸಂಚರಿಪನವನ ನೇಮದಿ ಕ್ರೂರ ।
ಕಾಳರಕ್ಕಸರಲ್ಲಿ ನೆಲೆಗೈದು ನಿಂದಿರ್ಪರದರಿಂದೆ ಜಾಗ್ರತೆಯನು ॥
ತಾಳ ಮುಂದೈದು ಸಾಸಿರ ಬೆಡೆಯ ವಿಂಧ್ಯದಿ ಲ ।
ತಾಳಗುಲ್ಮಾದ್ಯ ತರುಷಂಡಗಳ ನೋಡಿ ಮುಂ ।
ದಾಳುಗಳ ಪಂಥಾನಕಂ ಕಳುಪಿ ನಡೆದಪುದು ನರ್ಮದಾತಟಕೆ ಮುದದಿ । (13)

ಭೋಗವತಿಯುಂ ಕೃಷ್ಣವೇಣಿವರದಾನದಿಯು।
ಮೇಗೆ ಬನತರುತುಂಗಭದ್ರೆಯುದರಿಂ ಮುಂದೆ।
ಪೋಗಲ್ವಿದರ್ಭ ಮಾಹಿಷ್ಮಕ ಕಳಿಂಗಮಂ ಕಳಕಳದು ಬಳಿಕ ಮುಂದೆ॥
ಬೇಗದಿಂ ದಂಡಕಾರಣ್ಯ ಕೇರಳ ಚೋರ।
ಮಾಗಧ ದ್ರವಿಡಾದಿ ರಾಜ್ಯಗಳ ಶೋಧಿಸುತ।
ಪೋಗಿ ಕಂಡಪುದಯೋಮುಖನಾಮಪರ್ವತವ ಸರ್ವತರು ಮಂಡಿತವನು॥ (14)
ಅಲ್ಲಿಂದ ಬೆದಕುತ್ತೈತರೆ ಮುಂದೆ ಕಾಣಿಸುವ।
ದುಲ್ಲಾಸದಿಂದ ಕಾವೇರಿಯು ಮಹಾನದಿಯು।
ಚೆಲ್ವಿನಿಂ ಸೇವಿಸುವ ಸಿದ್ಧಚಾರಣಗಣವ ನೋಡುತ್ತೈದಲ್ಕೆ ಮುಂದೆ॥
ಬಲ್ಲಹನಗಸ್ತ್ಯ ತಾಪಸವರ್ಯ ಸೂರ್ಯನಿಭ।
ನಲ್ಲಿರ್ಪನಾತನಪ್ಪಣೆ ಪಿಡಿದು ಗಿರಿತಟಗ।
ಳಲ್ಲಿನೋಡುವದು ಚಂದನವನೋದ್ದೇಶಗಳ ನಮಿತ ಗುಲ್ಮಾದ್ಯಗಳನೂ॥ (15)
ಟೆಂಕಣುದಧಿಯನು ಕಂಡಲ್ಲಿ ಮಾಹೇಂದ್ರಗಿರಿ।
ಯಂ ಕಂಡು ಪರಿಪರಿಯುತ್ತದುಗುಲ್ಮಗುಹೆಗಳಲಿ।
ಶಂಕೆಯಿಲ್ಲದೆಯರಸಿ ನೋಡುವದು ಜಾಗ್ರತೆಯೊಳನಿತುನೆಲನಂ ತೊರೆಯದೆ॥
ಬಿಂಕದಿಂದಡಿಯಿಡಲ್ ಸಿಂಹಿಕಾನಾಮದ ಕ।
ಳಂಕಿ ಛಾಯಾಗ್ರಾಹಿಯಿರ್ಪಳಾ ದೇಶಮಂ।
ನೋಂಕದೋರೆಯೊಳೈದಿ ಪುಷ್ಪಿತಕಶೈಲಮಂ ಕಾಣ್ಬುದಲೆ ರಮ್ಯಕಮೆನೆ॥ (16)
ರವಿಶಶಿನಿಭಂಗಳಂತೆಸೆವ ಕೋಡುಗಳಿಂದ।
ತವಕದಿಂದಂಬರವ ಚುಂಬಿಪುದು ಕಾಂಚನದ।
ನವಕಶೃಂಗವನೊಂದ ಸೇವಿಪ ದಿವಾಕರಂ ರಜತವ ನಿಶಾಧಿಪತಿಯು॥
ಪವಣಿಂದ ಭಜಿಪಂ ನೃಶಂಸ ನಾಸ್ತಿಕ ಕೃಪಣ।
ನವಿರಳದ ವಂಚಕರಿಗಾ ಶೈಲ ಕಾಣ್ಬಡದು।
ಸುವಿವೇಕದಿಂದ ವಂದಿಸಿ ಗಿರಿಯೊಳರಸುವದು ಜನಕಜಾತೆಯನು ಬಿಡದೆ॥ (17)
ಅದರಿಂದ ಮುಂದೆ ಪದಿನಾಲ್ಕು ಯೋಜನದಗಲ।
ಪದದಿ ಪೋಪುದು ಕಷ್ಟವಲ್ಲಿಂದ ನಡದರುಂ।
ವಿದಿತಮಪ್ಪುದು ಸೂರ್ಯವನ್ನಾಮಗಿರಿಯೊಂದು ತತ್ತಟದೊಳರಸಿನೋಡಿ॥
ಪದುಳದಿಂದೈದಿ ವೈದ್ಯುತಪರ್ವತವ ಕಾಣು।
ತದರೊಳಗೆ ಮೂಲಫಲಮಧುಭೋಜನಂ ಗೈದು।
ಪದವಿಯಿಂ ಪಿಡಿದೈದೆ ಕಂಜರದ ಪೆಸರಾಂತ ಗಿರಿಯೊಂದು ತೋರ್ಪುದೈಸೆ॥ (18)
ಕಲಶಜನ ಭವನಮದು ದೇವನಿರ್ಮಿತವದರೋ।
ಳೊಲಿದೊಂದು ಯೋಜನದ ವಿಸ್ತಾರಮಂಬರವ।
ನಿಲುಕುವದು ದಶಯೋಜನಾಯತದ ಕೋಡೊಂದು ಕನಕಮಣಿಮಯಖಚಿತದಿ॥
ನಿಲಯ ಸರ್ಪಂಗಳಿಗೆ ವಾಸುಗಿಯು ಸೌಖ್ಯದಿಂ।
ದೊಲಿದಿರ್ಪನದು ಭೋಗವತಿಯೆಂಬನಾಮಸಂ।
ಕಲಿತಮಾಗಿಹುದದರೊಳರಸುವದು ಜನಕಸುತೆಯನು ಕಾಮರೂಪಿನಿಂದೆ॥ (19)

ಭೋಗವತಿಯುಂ ಕಳೆದು ಮುಂದೆ ನೋಡುತ ನಡೆಯು।
ಲಾಗ ಸರ್ವರ್ತುಮಯ ಸರ್ವರತ್ನಾಢ್ಯತೆಯ।
ಪೂಗವೆಸೆ ವೃಷಭಪರ್ವತಮದಱೊಳೊಪ್ಪಿಹುದು ಚಂದನದ ಬನಮದಱೊಳು ॥
ಬೇಗನಿಟ್ಟಿಸುತದಂ ಮುಟ್ಟದಿರಿ ಗಾಂಧರ್ವ।
ಭೋಗತರವಸ್ತು ರೋಹಿತನಾಮಗಾಂಧರ್ವ।
ಸಾಗರಂ ಮೊರೆವಂತೆ ಘೋಷಿಸುತ ಕಾಯ್ದಿರ್ಪನಾ ಬನವ ಬಲಸಹಿತಲೇ। (20)

ಗ್ರಾಮಣಿಯು ಶುಷ್ಕಶೈಲೋಪ ಶುಭಬಭ್ರುವೆಂ।
ದಾ ಮಹಾಪುರುಷರೈವರು ನಿಲಯಕ್ಕೈದಲ್ಲಿ।
ಸೋಮಸೂರ್ಯಸಮಾನ ವರ್ಣದಿಂ ರಾಜಿಸುವರಾನೆಲದಿ ನೋಡಿಮುದದಿ ॥
ಆ ಮಹಾಧ್ವನದಿಂದ ಮುಂದಕಡಿಯಿಡೆ ಸಲ್ಲ।
ಸೋಮಯಾಜಿಪ್ರಮುಖಪುಣ್ಯಕರ್ಮಿಗಳೈದಿ।
ವೈಮಾನಿಕರ ಪುರಿಯು ಸಾರ್ವಪಂಥಾನಮದು ಮಿಕ್ಕಜನರಿಂಗಾಗದು ॥ (21)

ತೋರುವದು ಮತ್ತಾಚೆಯೊಳಗೆ ಪಿತೃಲೋಕಪತಿ।
ದಾರುಣಂ ಯಮಲೋಕತಮಸಾವೃತಂ ನೋಡ।
ಬಾರದದರಿಂದ ಪಿಂತಿರುಗಿ ಬಪ್ಪುದು ತಿಂಗಳಪ್ಪನ್ನನೀವೆನುತಲಿ ॥
ಆಱಿದರೊಳೊಂದು ದಿನ ಪಿಂದುಳಯೆ ದಂಡನೆಗೆ।
ಕಾರಣಮದಹುದೆನುತ ಕಪಿಕುಲಾಗ್ರೇಸರೆಂ।
ತೋರಿ ನುಡಿದಂಗದಾದಿಗಳಗಪ್ಪಣೆಗೊಟ್ಟನಾ ರಘೂದ್ವಹನೆಡೆಯೊಳು ॥ (22)

ಪೇಳ ಜಾಂಬವಮುಖ್ಯಕಪಿಗಳಗೆ ಸಂತಸವ।
ತಾಳ ಕರೆದಾಸುಷೇಣನೊಳೆಂದ ನೀವೈದಿ।
ಸೂಳಱಿದು ಪಶ್ಚಿಮದದೆಸೆಯನರಸುವದಖಿಳ ವಾನರಸಮೂಹವೆರದು ॥
ಕೇಳೀ ಮರೀಚಿಸುತ ಋಷಿಪುತ್ರ ಮುಖ್ಯರಿಂ।
ದೂಳಗವಕೊಂಡು ಜಾನಕಿಯ ಕುರಹಂ ಕಂಡು।
ನಾಳೀಕ ಮಿತ್ರನಸ್ತಮಿಪಾದ್ರಿಯಡೆಗೈದಿಬಹುದೆನುತ ವಿವರಿಸಿದನು ॥ (23)

ಮೆರೆವುದು ಸುರಾಷ್ಟ್ರಬಾಹ್ಲಿಕಕಶೂರ ಭೀಮಮದ।
ರಱಗಿನಲಿ ಪುನ್ನಾಗಗಹನಮದರಿಂದೈದ।
ಉರುತರದ ಕೇತಕೀವಿಪಿನ ಪ್ರತ್ಯಕ್ಸ್ರೋತಮೆನಿಸುವಾ ನದಿಗಳನ್ನು ॥
ಮರುಭೂಮಿಯಂತೆಸೆವುದತ್ಯುಚ್ಚತರಮಾದ।
ಗಿರಿಯೊಂದು ಶೃಲಂಗಳಂದಮತಿಘೋರತರ।
ಪೆರದಿರ್ಪುದಲ್ಲಿಂದ ಮುಂದೆ ತೋರುವದುದಧಿ ತತ್ತಟಾವಾಸಗಳಲೀ ॥ (24)

ಕೇತಕೀಬನಮಂ ತಮಾಲನಂದನಗಳಂ।
ಖ್ಯಾತಮೆನಿಸುವ ನಾರಿಕೇಳಬನಮಂ ಶೈಲ।
ಜಾತಂಗಳಂ ಮುರಲಿಪತ್ತನದ ಜಟಪುರವ ಮತ್ತವಂತೀನಗರಮಂ ॥
ಪೂತುಕಾತಿರ್ಪ ಪುಣ್ಯೋಪವನಗಳಲರಸಿ।
ಸೀತೆಯಂ ಸಿಂಧುಸಾಗರಸಂಗಮಕ್ಕೈದ।
ಲಾ ತಟದೊಳೆಸೆದಿರ್ಪುದದು ಮಹಾಮೇರುಗಿರಿ ನೂರು ಕೋಡ್ಗಳಿಂದ ॥ (25)

ಆಗಿರಿಯುತಪ್ಪಲೊಳಗತಿ ಘೋರತರಸಿಂಹ।
ಭಾಗಸಂತತಿ ಮೀನಗಜತಾಣ್ಗೈದಿರ್ದ।
ವಾಗಮದ ಮಾತಂಗದಾನಜಲಪಂಚ್ಛಿಲಿತಜೀಂಕರಣ ಕಾಣಿದೆಸೆವುದು॥
ಸಾಗರದಿ ಸೂರುಯೋಜನದಗಲ ಸ್ವರ್ನಮಯ।
ಮಾಗಿರ್ಪಪಾರಿ ಯಾತ್ರುವ ಪೊಂದಿ ನೋಡುತಿರೆ।
ಬೇಗ ಕಂಗೊಳಪರ್ಯೆ ಗಾಂದರ್ವರಿಪ್ಪತ್ತುನಾಲ್ಕುಕೋಟಿಯು ಚಿತ್ರುದಿ॥ (26)
ಕಾಮರೂಪಿಗಳು ಭೀಷಣರಗ್ನಿಕಲ್ಪರು।
ದ್ದಾಮಬಲಸೌರುಷರು ಮತ್ತವರ ಕಣಕದತಿ।
ನೇಮದಿಂದೊಳಪೊಕ್ಕು ಧರಣೀಸುತೆಯನರಸುತಿರೆ ಕಪಿಗಳ್ನುತಮವರು॥
ಭೀಮದಿಂ ಕೋಪಿಸಲು ಮತ್ತೊಂದುತಾಣದಿನಿ।
ಕಾಮವೈಡೂರ್ಯ ವಜ್ರಾಕರಂ ದಿವ್ಯತರು।
ಸಾಮರಸ್ಯದೊಳೆಸೆವದೊಂದು ಶೈಲಂ ವಜ್ರನಾಮ ಕೇಳ್ ಕಪಿಲಲಾಮ॥ (27)
ಆ ಮಹಾಪರ್ವತದ ತಪ್ಪಲುಗುಹಂಗಳೊಳು।
ರಾಮನಂಗನೆಯನರಸುತ ಪೋಗೆ ಮುಂಗಡೆಯು।
ತಾಮಸೀಜನವಧೆಗೆನುತ್ತಲಿ ಸಹಸ್ರಾರಮಂ ವಿಶ್ವಕರ್ಮ ಸೃಜಿಸೀ॥
ಪ್ರೇಮದಿಂದೀಯಲಾ ಚಕ್ರವಾನ್ಪರ್ವತ್ರದಿ।
ತಾಮರಸನಯನ ಹಯಮುಖದ ದಾನವನ ತರಿ।
ದಾ ಮಹಾಚಕ್ರಮಂ ಪಂಚಜನವಧೆ ಗೈದು ಶಂಖಮಂ ಕೊಂಡನೊಲಿದು॥ (28)
ಗಿರಿಯತಪ್ಪಲುಗುಹಾಶಯಗಳಂ ಜಡೆದರಸಿ।
ಪರಿಯೆ ಮುಂದಕೆ ವರಾಹಾಖ್ಯಶೈಲಂ ತೋರ್ಪ।
ದರುವತ್ತುನಾಲ್ಕು ಯೋಜನದುದ್ದಸ್ವರ್ಣಮಯಮೆನಿಪ ಶೃಂಗಂಗಳಿಂದ॥
ಮೆರೆದಪುದು ಕನಕಮಯ ಪ್ರಾಗ್ಜ್ಯೋತಿಷಾಖ್ಯಪುರ।
ನರಕದಾನವನಿರ್ಪನಾ ತಾಣದೊಳಗಾರು।
ಚರಿಸಲಸದಳ ಕಾಮರೂಪಿಂದ ನಿಟ್ಟಿಪುದು ಧರಣೀತನೂಜಾತೆಯ॥ (29)
ಆಗಿರಿಯನುಳಿದು ಮುಂದಡಿಯಿಡಲು ಹರಿಶರಭ।
ಮೇಗೆ ಶಾರ್ದೂಲಗಜಭೀಕರರವಂಗಳಂ।
ಮೇಘವಾಹಂನಾಮಗಿರಿಯಿರ್ಪುದಾ ಶೈಲ ರತುನಸೌವರ್ಣಮಯವು॥
ಶ್ರೀಗವುರಪಾಕಶಾಸನಗಖಿಲ ದೇವತೆಗ।
ಳಾಗ ಪಟ್ಟಾಭಿಷೇಕಂ ಗೈದರಾ ಗಿರಿಯ।
ಮೇಗೆ ತತ್ಶೈಲ ಶ್ರೀಸಂಪತ್ಸಮೃದ್ಧಿಯಿಂದೆಸೆವುದತಿಚಿತ್ರಕರದಿ॥ (30)
ಅದನರಿದು ಮುಂದೈದದರುವತ್ತು ಪರ್ವತಗ।
ಳುದಯಿಸುವ ಭಾಸ್ಕರೋಪಮದಿಂದ ರಾಜಿಸುವ।
ದದುಭುತಂ ತರುಗುಲ್ಮಲತೆಗಳೆಲ್ಲಂ ಸ್ವರ್ಣಮಯದಿ ರಾರಾಜಿಸುವವು॥
ಅದರಮಧ್ಯದೊಳೊಂದು ಧೊರೆ ಮೇರುಪರ್ವತಂ।
ಮುದದಿಂದವಾದಿತ್ಯನಿತ್ತ ವರದಿಂ ದೇವ।
ಹೃದಯಾನಂದಕಮೆನಲ್ ಮರುತವಿಶ್ವೇದೇವವಸುಗಳಾಕರಮೆನಿಪುದು॥ (31)

ದೇವಗಂಧರ್ವಯಕ್ಷಾದಿಗಳು ಸಂತಸದೊ ।
ಳಾ ವನೋದ್ದೇಶದೊಳಗಿರ್ಪರಾ ಕಾಂತಿಯುಂ ।
ತೀವಿ ಸ್ವರ್ಗಾಂಗರೆಂದೆನಿಸಿ ನಾನಾಚಿತ್ರಕರ ಭೋಗಗಳ ಭುಂಜಿಸಿ ॥
ಸಾವಧಾನದೊಳರ್ಪರಾದಿತ್ಯ ಪೂಜೆಯಿಂ ।
ಸೇವಿಸುತಮನುದಿನಂ ತಚ್ಛಿಖರದೊಳಗಿರ್ಪ ।
ರಾ ವಸುಧೆ ಸಾಮಾನ್ಯರಿಂದ ನಿಟ್ಟಿಸುವುದಲ್ಲ ವರುಣನಾಲಯು ಕಪೀಂದ್ರ ॥ (32)

ಗಿರಿಯಾಗ್ರದೊಳು ವಿಶ್ವಕರ್ಮನಿರ್ಮಿತವಾದು ।
ದರಮನೆಯದೊಂದಿಹುದು ನವರತ್ನಮಯದಿವ್ಯ ।
ಕರುವಾಡದಿಂ ಪಾಕಶಾಸನನ ಮಂದಿರಕೆ ನಾಲ್ಕುಮಡಿಯೆನೆ ವಿಭವದಿ ॥
ಮೆರೆದಪುದು ಭವನಮದು ವರುಣನಿಹ ನೆಲೆ ಸೂರ್ಯ ।
ಬರುವಂ ಮುಹೂರ್ತಾರ್ಧದೊಳು ನೂರುಸಾಸಿರದ ।
ನಿರುತಯೋಜನಗಳಂ ಮತ್ತಾರು ಕಾಣದೊಳಗಾ ಗಿರಿಯ ಶಿಖರದೊಳಗೆ ॥ (33)

ಚಿಂತಿಸದೆ ಬಳಸಿನೋಡುತ್ತವಾ ಶೈಲವ ।
ನ್ನಂತರದಿ ಕನಕಮಯ ವೇದಿಕಾಂತರಗಳಂ ।
ಸಂತಸೊಪ್ಪಿಹ ಮೇರು ಸಾವರ್ಣಚತುರಾಸ್ಯಕಲ್ಪನಾಮುನಿವರಂಗೆ ॥
ಸಂತದಲಾ ಮೌನಿಗೆರಗಿ ಬೆಸಗೊಂಡು ಭೂ ।
ಕಾಂತೆಯಾತ್ಮಜೆಯ ಪಿಂತಿರುಗಿ ತಿಂಗಳಿಂದಂ ।
ಮುಂತೆ ಬಹುದಸ್ತಗಿರಿಯಿಂದ ತಡೆಯದೆ ಬರ್ಪದು ರಾಜಾಜ್ಞೆಯದುತಪ್ಪದು ॥ (34)

ಎನುತೊರೆದು ಕಪಿವರರ ನೆರಹಿ ಪಿಶ್ಚಿಮದಿಸಗೆ ।
ವಿನಯದಿಂದಾ ಸುಷೇಣನ ಕಳುಹಿ ಶತಬಲಿಯು ।
ಘನತೆಯಿಂ ಕರೆದು ಕುಸ್ತರಿಸಿ ಪೇಳಿದ ರಾಜಕಾರ್ಯಸಂಗತಿಯನೊಲಿದು ॥
ನಿನಗೆ ಪಾಸಟಿಯಪ್ಪ ವೀರವೈವಸ್ವತನ ।
ತನಯಾದಿಗಳಕೂಡಿ ಬಡಗತ್ಯೈದುತ್ತಮಲ್ಲಿ ।
ಜನಕಜಾತೆಯನರಸಿ ತಹುದೆನ್ನ ಋಣದಿಂದ ಮುಕ್ತನಂ ಮಾಳ್ಪುದನಘ ॥ (35)

ನೋಡುತ್ತೈತರೆಯುವನ ಪಾಳಿಂದ ಪ್ರಸ್ತವರ ।
ನಾಡು ಭರತಂ ಶೂರಸೇನ ಕುರುಮದ್ರಕಂ ।
ಕೂಡಿರುವ ಕಾಂಬೋಜ ಪಾಶ್ಚಾತ್ಯ ಶಕರನಾರಟ್ಟಗಳನು ॥
ನೋಡಿ ಬಾಹ್ಲಿಕ ರಿಷಿಕಟಂಕಣಂ ಚೀನಗಳ ।
ನಾಡೆಲ್ಲಮಂ ತೊಳಲಿ ಪರಮಜೀನಸ್ವಹತ ।
ಬೀಡುಗಳ ನಿಟ್ಟಿಸುತ ಹಿಮವಂತಶೈಲಮಂ ಸಾರ್ದಪುದು ಜವದೊಳೊಲಿದು ॥ (36)

ತಿಳಿದು ಲೋದ್ರಕಪದ್ಮಷಂಡಸುರದಾರುವನ ।
ಗಳನೋಡಿಯಾಶ್ರಮವ ನಾಲ್ ದೇವತನಿಳಯ ।
ಕಾಳಾಖ್ಯಶೈಲವ ಕಂಡು ಮುಂದೈದಿ ಹೇಮಗರ್ಭವ ಕಾಣ್ಬುದು ॥
ಬಳಲದಾ ಗಿರಿಯೊಳಿಟ್ಟಿಸಿ ಸುದರ್ಶನನಾಮ ।
ಪೊಳೆವಗಿರಿಯಂ ಕಂಡು ದೇವಸಖಗಿರಿಪತಗ ।
ನಿಳಯಮೆಂದರಿತಲ್ಲಿ ಕಾಂಚನೋದ್ಯಾನಗಳ ನಿಟ್ಟಿಪುದು ಪೇಪೇಯಲಿ ॥ (37)

ತವಕದಿಂದದರಾಚೆಯೊಳು ನೂರುಯೋಜನವ ।
ಜವದಿಂದಮೈದುವದ ಪಕ್ಷಿಖಗಮೃಗಮಿಲ್ಲ ।
ದವಿರಳದ ಘೋರನೆಲಮದರಿಂದ ಮುಂದೆಸೆವುದೈಸೆ ಕೈಲಾಸಶಿಖರಂ ॥
ನವಕಮೆನೆ ವಿಶ್ವಕರ್ಮನು ರಚಿಸಿಕೊಟ್ಟಿರುವ ।
ಭವನವೊಂದಿಹುದದರ ತಟದೊಳತಿ ಚಿತ್ರಮೆನೆ ।
ಶಿವನ ಸಖನಿಹ ತಾಣಮತಿಮನೋಹರಮೆನುತಮರಿತು ನೋಳ್ಪುದು ಕಪೀಶ ॥ (38)

ಗಿರಿಯನೆಲ್ಲವನುತ್ತರಿಸಿದು ನೋಡುತಮುಂದೆ ।
ತೆರಳುವದು ಕ್ರೌಂಚಗಿರಿಯೊತ್ತಿಗುಂ ಜಾಗ್ರತೆಯು ।
ಬೆರದು ವಂದಿಸಿ ಕಾಮರೂಪಿನಿಂದೊಳಪೊಕ್ಕು ವೇಗದಿಂ ನೋಳ್ಪುದಲ್ಲಿ ॥
ಪರಮಋಷಿತರಣಿನಿಭರಿರ್ಪರಾ ಗಿರಿತಟದಿ ।
ಸುರರಿಂದ ಪೂಜೆಗೊಳುವತಿತಪೋನಿಷ್ಠರಾ ।
ಗಿರಿಯು ಪೊಗುವರಸಖ್ಯ ಸೇನಾನಿ ಪೂರ್ವದೊಳು ಶರಸಾಧನಂ ಗೈದನು ॥ (39)

ಮೆಲ್ಲನಾ ಶೈಲತಟದೊಳ್ಪುಡುಕಿ ನಡೆತರಲು ।
ಮುಲ್ಲೋಕವಿದಿತಮೈನಾಕಗಿರಿಯೊಪ್ಪಿರುವು ।
ದಲ್ಲಿ ಮಯನಿಹನದರ ಸಾನುಪ್ರದೇಶಗಳಲಶ್ವಮುಖಿಗಳ ಮನೆಗಳ ॥
ನೆಲ್ಲಮಂ ಶೋಧಿಸುತ ಮುಂದೈದಿ ವೈಖಾನ ।
ರೋಲ್ಲಾಸ ವಾಲಖಿಲ್ಯಾದ್ಯಖಿಳ ಸಿದ್ಧರಿಹ ।
ಚೆಲ್ವಾಶ್ರಮಂಗಳಂ ನೋಡಿ ಜಾಗ್ರತೆಯಿಂದಮರಸುವದು ಭೂಸುತೆಯನು ॥ (40)

ಹೇಮಪುಷ್ಕರಕಲಿತ ತರುಣಭಾಸ್ಕರವರ್ಣ ।
ದಾ ಮರಾಳಗಳು ಕ್ರೀಡಿಪವು ವೈಖಾನಸರ ।
ನಾಮಸರಸಿಯು ತೋರ್ಪುದದರೊಳಗೆ ಕ್ರೀಡಿಸುವರಧಿಕತರ ಸೌಖ್ಯದಿಂದ ॥
ಪ್ರೇಮದಿ ಕರೇಣುಗಳನೊಡಗೊಂಡುಬಹ ಸಾರ್ವ ।
ಭೌಮ ನಾಮಜಕುಲಗ್ರಾಮಣಿ ವಿನೋದಕಂ ।
ದಾ ಮಹಾಸರಸಿನೊಳಗನವರತ ಮಾಡುತಿಹವಾನಂದ ಮಂಪರದೊಳು ॥ (41)

ಆ ಸರಸ್ಸಂ ಕಳದು ಶೈಲೋದ ನಿಮ್ನಗವ ।
ಲೇಸಿನಿಂ ದಿಟ್ಟಿಸಲು ಕೇಚಕಾಖ್ಯದವೇಣು ।
ರಾಸಿಯಂ ತೋರ್ದಪುದು ಸಿದ್ಧರಿಂ ಸೇವಿತಂ ಮುಗುಳೋರ್ವರಿಂದಾಗದೂ ॥
ಭಾಸಿಸುವದುತ್ತರದ ಕುರುಪುಣ್ಯಭೂಮಿಯತಿ ।
ಲೇಸೆನಿಪಕನಕಕಮಲಂಗಳಂ ರಾಜಿಸುವ ।
ವೈಸೆ ಸರಸಿಗಳು ವೈಡೂರ್ಯ ಪತ್ರಾಢ್ಯತೆಯೊಳುಂ ನದಿಗಳೆಸೆದಿರ್ಪವು ॥ (42)

ತರುಣಭಾಸ್ಕರವರ್ಣಮೆರೆವ ಕಾಸಾರಗಳ ।
ಪೊರೆಯೊಳನವರತುನಮಯ ಫಲಪುಷ್ಪಪಲ್ಲವದಿ ।
ಭರಿತಸ್ವರ್ಣಕಾರಪುಳಿನ ಕನಕಾಭತೆಯಲಿಸದಪವುಮುದಕಂಗಳು ॥
ಪರಮಚ್ಛಶಾಲೂರ ಚಿತ್ರತರಶೋಭೆಯಿಂ ।
ಮಿರುಮಿರುಗುವಾವರ್ತವೀಚೀಮರೀಚಿವಿ ।
ಸ್ಫುರಣೆಯಿಂ ಕಾಣ್ಬಡಿಸುತಿರುತ್ತಿರ್ದುದೇನೆಂಬೆ ಸಂಭ್ರಮವಿಡಂಬಗಳನು ॥ (43)

ಸತತ ಷಡೃತುಗಳಗಲದಲಿರ್ಪವಾ ಭೂಮಿ ।
ಯತಿಶಯವನೆಣಿಸಲಳವಲ್ಲ ತರುನಿಕರಗಳು ।
ಸತಿಯರಿಗೆ ಪುರುಷರಿಗೆ ಮನದಿನೆನೆದುದನಿತ್ತು ಕ್ರೀಡೆಗೈಸುವವು ಮುದದಿ ॥
ಪ್ರತಿಪದದಿ ಹರ್ಷ ಬೆರ್ಚುಗೆಯಪ್ಪುದಾನೆಲದಿ ।
ಮತಿರೂಪುಗಳವ್ವನಕ್ಕೊಣೆಯಂ ಸಂಭವಿಸು ।
ದತಿಶಯದ ತಾಣಮದರಿಂದಖಿಲ ದೇವರ್ಕಳಲ್ಲಿ ಕ್ರೀಡಿಸುತಿರ್ಪರು ॥ (44)

ಸತತ ಸಂಗೀತರಸಮಾಧುರ್ಯಪರವಶತೆ ।
ಯತುಲಶೃಂಗಾರರಸಪೂರಿತ ಪ್ರೌಢ ಸಂ ।
ಗತಿಯಿಂದಮಾನಂದಗೊಳುವರಲ್ಲಿಯ ಜನರ್ಪೇಳ್ವುದೇನಚ್ಚರಿಯನು ॥
ಮತಿಯುತನೆ ಪೇಳ್ವುದೇನುತ್ತರ ಪಯೋನಿಧಿಯು ।
ಜತೆಯೊಳಹುದೈ ಸೋಮಗಿರಿ ಹೇಮಮಯಮೆನಿಸು ।
ತತಿಶಯದಿ ಸುರಲೋಕ ಬ್ರಹ್ಮಲೋಕಗಳಿಂದ ಬರ್ಪರಿಪ್ಪರೆ ಗಿರಿಯು ॥ (45)

ತನ್ನ ಬೆಳಗಿನೊಳಿರ್ಪುದಾಶೈಲಮಾದಿತ್ಯ ।
ನನ್ನು ಬಯಸರು ತಟದಲೇಕಾದಶಾತ್ಮಕಂ ।
ಪನ್ನಗಾಭರಣಶಿವನಿರ್ಪನಲ್ಲಿಂ ಮುಂದೆ ನಡೆಪ್ರದಾರಿಂದಾಗದು ॥
ಇನ್ನಾಗಭೂತಂಗಳದರ ಬೆಸರಂ ಗೊಳರು ।
ಸನ್ನುತಿಪರಖಿಲದೇವರ್ಕಳನುದಿನ ಶೈಲ ।
ವನ್ನುನಿಟ್ಟಿಸಿ ತಿರಿಗಿಬಹುದುತ್ತರಕೆ ಪೋಗದಖಿಲ ಕಪಿವರರ ಬೆರದು ॥ (46)

ತಿಳದನಿತ ಕಂಡನಿತ ಪೇಳದೆಂ ಕಾಣದಿಹ ।
ತಿಳಿಯದಲೆ ಪೇಳದಿಹದಾವುದುಂಟದ ನೀವೆ ।
ತಿಳದು ನೋಳ್ಪುದು ಸೂರ್ಯಕಿರಣಸಂಚರಿಪನಿತ ಕಂಡಿರ್ಪನದರಾಚೆಯಂ ॥
ತಿಳಿಯೆ ನೀಂ ಬುದ್ಧಿಮತಿಯೆಂದಂತು ಜಾನಕಿಯ ।
ಪೊಲಬ ತಿಳದೈತಂದು ಧನ್ಯನೆಂದೆನಿಸೆನ್ನ ।
ಕುಲವನೆಂತರ್ಯಾಮಿ ರಾಮನ ಸಂತುಷ್ಟಿಗೊಳಪುದೈ ಕಪಿಕುಲೇಂದ್ರ ॥ (47)

ಪೋದಸಿರಿ ಕಪಿರಾಜ್ಯಮೆಲ್ಲಮಂ ತಂದಿತ್ತು ।
ಸಾದರದೊಳೆನ್ನ ಪೊರೆದೀ ಮಹಾಪುರುಷಂಗೆ ।
ಸಾಧಕಮದೇನೆನ್ನ ದೆಸೆಯಿಂದ ಮಾದಪುದು ಜನ್ಮಸಫಲತೆವೆರಸಲು ॥
ಮೇದಿನೀಸುತೆಯ ಕುರುಹಂ ತಂದುಕೊಟ್ಟರಾ ।
ಮೋದಮಪ್ಪುದು ರಾಮಪುರದಸಿರಿಯರಸನಿಗೆ ।
ಬೋದುರದೊಳೆನುತ ಶತಬಲಿಯ ಬೀಳ್ಕೊಟ್ಟನಾ ಸುಗ್ರೀವ ಸಂತಸದೊಳು ॥ (48)

ಸಂಧಿ 16 ಕ್ಕಂ. ಪದ 695.

## ಹದಿನೇಳನೆಯ ಸಂಧಿ-

ಸೂಚನೆ ॥ ಮಾರುತಿಯ ಜನನ ವೃತ್ತಾಂತಂಗಳೆಲ್ಲಮಂ ।
ಚಾರುತರದಂಗುಲೀಯ ಪ್ರದಾನಂ ಗೈಸಿ ।
ಸೂರಿಯನತನಯ ಬೀಳ್ಕೊಡಲ್ಕೈದಿ ಪೊಕ್ಕರಾ ಹೇಮಾಂಗನಾಪುರವನು ॥

ಪದನು ॥ ಅವಧರಿಸು ಪಾರ್ವತಿ ಕಪೀಂದ್ರ ಭೂಖಿಂತಳದ ।
ವಿವರಗೈದಾಗ ಕಪಿನಾಯಕರ ಬೀಳ್ಕೊಟ್ಟು ।
ಪವನಸಂಭೂತನಂ ಕರೆದು ಕಸ್ತುರಿಸುತ್ತನುತಿಗೈದ ರಾಮನೆಡೆಯ ॥
ಜವತೇಜಧೃತಿಪರಾಕ್ರಮ ಮಹಾಹವ ಸತ್ತ್ವ ॥
ಪವಣಿಲ್ಲದೀಗುಣಗಳೆಲ್ಲ ಭವದೀಯ ನಾ ।
ಮವ ನೆನೆದರಿಂಗಹುದು ಪರಮೇಶನಪರಾವತಾರ ಮಾರುತಕುಮಾರ ॥ (1)

ಗುರುವಚನವಿಡಿದೆನ್ನನುದ್ಧರಿಸವೇಳ್ಕೆಂದು ।
ಪರಮಪುರುಷನ ಪದದ್ವಂದ್ವದಾಶ್ರಯ ಗೈದು ।
ಪರಿಪರಿಯ ಸೌಖ್ಯಮಂ ತಂದಿತ್ತೆ ಮೇಲ್ಪಸವ ಕೃತಕೃತ್ಯತೆಯನು ಗಳಿಸಿ ॥
ಪೊರೆವ ಕಾರಣ ನೀನೆ ಹರಿಕುಲೋತ್ತಮ ಭವ ।
ಚ್ಚರಿತೆಯಂ ಪೊಗಳಲೆನ್ನಳವೆ ಧರಣೀಸುತೆಯ ।
ಕುರುಹನೆಂತಾದರುಂ ತಂದಿತ್ತು ಕಾಯ್ವುದೆಂದೊರೆದನಾ ಸುಗ್ರೀವನು ॥ (2)

ದಶಮುಖಯರ್ಪನಾ ದಕ್ಷಿಣಾಸೆಯೊಳು ಹರಿ ।
ಪಶುಪತಿಗಳಾದಡಂ ತತ್ಪತ್ತಣವ ಪೊಕ್ಕು ।
ಮಶಕೋಪಮಾನಮೆಂದೆನಿಸಿ ಕೊಂಡಾದರೆಯ ಪ್ರಾಣದಿಂ ಬರ್ಪುದಳವೇ ॥
ವಿಶದಶತಯೋಜನಾಂಬುಧಿಯ ಲಂಘಿಸಿ ದೈತ್ಯ ।
ವಶತೆಯಾಂತಾ ನೆಲನ ನೋಡಿಬರೆ ಕಪಿವರರ ।
ದೆಸೆಯಿಂದಮಾಗದು ಸರ್ವಜ್ಞನೀನೇನ ನುಡಿವೆ ಮಹಾಬಲನಂದನಾ ॥ (3)

ಮನದೊಲವಿನಿಂದ ಮನ್ನಿಸುತಮೆನ್ನಯ ಸೊಲ್ಲ ।
ವನನಿಧಿಯನುತ್ತರಿಸಿ ವಹಿಲಗತಿವಿಡಿದರಸಿ ।
ಜನಕಜಾತೆಯ ಕುರುಹ ತಂದಿತ್ತು ಕೃತಿಯೆನಿಪುದೆನ್ನ ಮಾರುತನಂದನ ॥
ಎನುತ ಸುಗ್ರೀವ ನುತಿಸಿದ ಪರಿಯನಾಲಿಸುತ ।
ವಿನಯದಿಂ ಬೆಸಗೊಂಡ ರಘುವೀರ ಚಾರಿತ್ರ್ಯ ।
ಯನು ಬಿತ್ತರಿಪುದೆನಲು ಸೂರಸುತನರ್ಘ್ಯಯಿಂ ಪೇಳಲನುಗೈದನೊಲಿದು ॥ (4)

ದೇವ ಲಾಲಿಸು ಪೂರ್ವಕೈಲಾಸಶಿಖರದೊಳು ।
ಪಾವನವನೋದ್ದೇಶದೊಳಗೆ ವಾಸಿಷ್ಟಮುನಿ ।
ಪಾವನತ ಪದವಿಗಳ ಪರಮೇಶಗಿರಿಜಾತೆವೆರಸಿ ಕ್ರೀಡಿಸುತಿರಲ್ಕೆ ॥
ಆ ವೇಳೆಯೊಳ್ ಪ್ಲವಗಮಿಥುನ ಮೈಥುನಕೆಳಸ ।
ಲಾ ವಿಧವ ಕಂಡು ಪಾರ್ವತಿ ಯಾಚನಂಗೈಯೆ ।
ದೇವಿಯನುಮತಿಯಿಂದನಿತ್ತನುತ್ತಮರತಿಯನಾನಂದದಿಂ ದೇವನು ॥ (5)

ಆದುದದ್ಭುತಗರ್ಭ ದುರ್ಭರಮದೆಂಬಂತೆ ।
ಭೂಧರಪ್ರತಿಮ ಪಿಂಡೋದ್ಭಾರಮಂ ಧರಿಪ ।
ರಾದುದಾಯಾಸ ನಿರ್ವಹಿಸಲಾರದಲೀಶನೊಡನೆ ವಿಜ್ಞಾಪಿಸಲ್ಕೆ ॥
ಆ ದಯಾನಿಧಿಯುದರಗತಗರ್ಭಮಂ ತೆಗೆಯ ।
ತಾ ಧರೆಯೊಳಡೆ ಧರಣಿ ಧರಿಸಲಾರದೆಯುಷ್ಣ ।
ಬಾಧೆಯಿಂ ತಲ್ಲಣಿಸುತಿರಲು ತತ್ಸಮಯದೊಳಗಾದುದಂ ಬಿನ್ನವಿಪೆನು ॥ (6)

ಆ ಸಮಯದೊಳಗೆನ್ನ ಸೋದರಿಯು ಕೊಳದೆಡೆಯ ।
ಭಾಸುರದ ತಪದಿಂದ ತರಣಿಯಂ ಪ್ರಾರ್ಥಿಸುತ ।
ಲೇಸ ಕರುಣಿಸುವ ಸುತನಂ ಬೇಡುತಿರಲರಿತು ಪರಮೇಶ ನಿಜಚಿತ್ತದಿ ॥
ಆ ಸುವಾಸಿನಿಗೆ ಸುತನಂ ಕೊಟ್ಟುಬಹುದೆನುತ ।
ವಾಸವಾರ್ಚಿತ ಚರಣನು ವಾಯುವಿಂಗರುಪ ।
ಲಾಗತಿಯ ಕರತಳಕೆ ಗರ್ಭಮಂಘಳವ ತಂದಿತ್ತಂ ಜಗತ್ಪ್ರಾಣನು ॥ (7)

ನೇಮದಿಂ ಜಪಿಸಿ ಕಂಗಳ ತೆರೆದು ಕರತಳದೊ ।
ಳಾಮಹತ್ಫಲವಿರಲ್ಕಂಡು ಸಂತಸದಿಂದ ।
ಲಾ ಮಾನಿನೀಮಣಿಯು ಭುಂಜಿಸಿದಳಾಕ್ಷಣಂ ಒಂದಂ ವಿಚಾರಿಸದಲೆ ॥
ಪ್ರೇಮದಿಂ ಗರ್ಭಸಂಭವಮಾಯ್ತು ನವಮಾಸ ।
ವಾಮೆಗಾಗಲ್ ಜನನಮಾದ ಪಟುವೇಷದಿಂ ।
ಶ್ರೀಮದಾಭರಣಭೂಷಿತ ನೀಲಕಂಧರಂ ತಾನೆಂಬೊಲಚ್ಚರಿಯಾಳು ॥ (8)

ಜನನಮಾದಾಕ್ಷಣದೊಳಂಜನೆಯು ನೋಡುತಂ ।
ವಿನಯದಿಂ ಬೆಸಗೊಂಡ ಜನನಿಜನಕರದಾರು ।
ಮೆನಗೆ ಭೋಜನವೇನೆನುತ್ತ ಕೇಳಲ್ ಮಾತೆ ನಸುನಗುತ್ತಮಿಂತೆಂದಳು ॥
ಜನನಿಯಾನಯ್ಯಂ ಮಹಾಬಲಂ ಭೋಜನವ ।
ದನುರಕ್ತಫಲ ವೃತ್ತಿ ಶ್ರೀರಾಮಸೇವೆಯುಂ ।
ನೆನೆದಪುದು ಪೂಜಿಪುದು ಸುಖದಲಾಯುಷ್ಮಂತನಾಗಿರ್ಪುದೆಂದೊರೆದಳು ॥ (9)

ತಾಯ ಮಾತಂ ಕೇಳುತುದಯಿಸುವ ಭಾಸ್ಕರನು ।
ಹಾಯದಿಂಫಲವೆಂದು ತುಡುಕಲೈದಲ್ ರವಿಯು ।
ಪಾಯ ಬಂತೆಂದರಿದು ಚರಮಗಿರಿಯಂ ಸಾರ್ದರಾಗ ಕಳ್ತಲೆ ಕವಿಯಲು ॥
ಬಾಯಬಿಟ್ಟುದು ಲೋಕಮಗ್ನಿಹೋತ್ರಂ ಜಪಂ ।
ನ್ಯಾಯಂಗಳಲ್ಲದಲೆ ದೇವತೆಗಳಗೆ ಭಯವ ।
ನೀಯುತಿಕಂಗೆಟ್ಟು ಪಾಕಾರಿಯೆಡೆಗೈದಿ ದೂರಿದರ್ನಡೆದ ಪರಿಯ ॥ (10)

ಕೇಳ ವಿಸ್ಮಿತನಾಗಿ ಪುರಹೂತ ಕೋಪಮಂ ।
ತಾಳ ಜವದಿಂದಭ್ರಮಾತಂಗಮನ್ನಡರಿ ।
ಹೇಳಗಪಕೃತಿಯನೆಸಗಿದ ಕಪಿಯನರಿದಿಡುವೆನೆಂದು ಮುಂಬರಿದು ಬರಲು ॥
ಭಾಳಾಂಬಿಕಪರಾವತಾರ ಕಪಿವರ ಚಕ್ರ ।
ವಾಳ ಪರ್ವತದಗ್ರದಲ್ಲಿರಲು ಕಂಡಹಿತ ।
ಕೇಳನಂಗೈದು ಬರುತಿರೆ ಮರುತ್ಸುತ ನೋಡಿ ಹಿಗ್ಗಿದನು ಹರಿಯು ಕರಿಯ ॥ (11)

ಧವಳವರ್ಣದ ಚತುರ್ದಂತಿಯಂ ಕಾಣುತ್ತ ।
ತವಕದಿಂ ಪಿಡಿಯಲವ್ವಳಿಸಿ ಬಹ ಕಪಿವರನ ।
ಜವದಾರ್ಭಟೆಗೆ ಬೆದರುತಿಂದ್ರ ದಂಭೋಳಿಯಂ ತಿರುಹಿ ಧಿಕ್ಕೃತಿಗೈಯುತ ॥
ಕುವರನಂ ಕೆಣಕಲಾದುದು ಸಮರ ದೇವತಾ ।
ನಿವಹ ತಲ್ಲಣಗೊಳುತಲಿರೆ ಕಂಡು ಪಾಕಾರಿ ।
ಯುವಿರಳೋದ್ರೇಕದಿಂ ನೂರಂಚಿನಲಗಿನಿಂ ಪೊಡೆದನಾ ಕಪಿವೀರನ ॥ (12)

ಘನವಾಹನನ ಕರಾಘಾತದಿಂ ಪ್ಲವಗೇಶ ।
ತನುಭಾವವುಳಿದು ಭೂತಳದಿ ಕೆಡೆದಿರೆ ಕಂಡು ।
ಕಿನಿಸಿಂದ ಮಾರುತ ರಸಾತಳಕೆ ಪಾರಿದಂ ಸಂಚರಣೆಗೈವುದುಳಿದು ॥
ತನುಭೃತರುಗಳು ಚಿತ್ರಪ್ರತಿಮೆಯಂದದಿಂ ನಿಂದ ।
ರನಿಮಿಷರವಸ್ಥೆಯಂ ಕಂಡು ಮುಮ್ಮೂರ್ತಿಗಳ್ ।
ಮನದೊಲವಿನಿಂದ ಪೈತಂದು ಸುರರಂ ನೋಡಿ ಹರಿ ಕರುಣದಿಂದೆಂದನು ॥ (13)

ಸುರರೆಲ್ಲರುಂ ಕೇಳ ಸುತನಳದನೆಂದರಿತು ।
ಮರುತ ಕೋಪಿಸಿ ರಸಾತಳಕೆ ಗಮಿಸಿದ ಲೋಕ ।
ಬೆರಗಾಗಿ ನಿಂದುದಲೆ ಪ್ರಾಣವಿರಹಿತವಾದರೆಂತು ಚಲನೆಗಳಪ್ಪವು ॥
ಹರುಷಗೊಳಪುದು ಜಗತ್ಪ್ರಾಣನಂ ಬೇಗಯೆಂ ।
ದೊರೆಯಲಿಂದ್ರಾದಿ ದಿಕ್ಪಾಲದೇವರ್ಕಳಾ ।
ತರಳನಂ ಸಂತೈಸಿ ಪರಿಪರಿಯ ವರಗಳಂ ಕೊಟ್ಟರಾಕ್ಷಣದೊಳೊಲಿದು ॥ (14)

ಕುಲಿಶಹತಿಯಿಂದ ಹನುನೊಂದ ಖತ್ರಿಯಿಂದೀತ ।
ನೆಲದಿ ಹನುಮಂತನೆಂಬಭಿದಾನದಿಂದಿರಲಿ ।
ನಲವಿಂದ ವಜ್ರಾಂಗನೆನಿಸಿ ಧೀಯುತನಾಗಿ ಬಾಳಲಿನ್ನಸ್ತ್ರದಿಂದ ।
ಕೊಲೆಯಡಸದಿರಲೆಂದು ಸುರರಾಜವರವಿತ್ತ ।
ನೊಲಿದಗ್ನಿ ತನ್ನಸ್ತ್ರಶಸ್ತ್ರನಿಜಬಲಬಾಧೆ ।
ಕಲಿತವಾಗದೆ ಸುಖದಲಿಹುದೆಂದು ಪೇಳಲಾ ವೈವಸ್ವತಂ ನುಡಿದನು ॥ (15)

ಕೊಳುಗುಳದೊಳೆನ್ನ ಗದೆಯಿಂದೀತಗುಪಹತಿಯು ।
ಸುಳಯದಿರಲೆನುತ ನಿರುರುತಿ ನುಡಿದನಾಜಿಯೊಳು ।
ಖಳರೆಸಗುವತಿಮಾಯವೆನ್ನ ಶರದಿಂ ಬಾಧೆ ಸಂಜನಿಸದಿರಲೆನಲ್ಕೆ ॥
ಜಳದೊಳೆನ್ನಯಪಾಶದಿಂದ ಶತವತ್ಸರಂ ।
ಮುಳುಗಿರ್ದರುಂ ದುಃಖವಿಲ್ಲದಿರಲೆನ್ನಸ್ತ್ರ ।
ಜಳಮಾತ್ರಗಂಟದಿರಲೆಂದುಂ ಪ್ರಚೇತಸಂ ತರಳಗಭಯವನಿತ್ತನು ॥ (16)

ಮರುತ ತನ್ನಯ ಜಯೋತ್ತರವ ಶರಬಾಧೆಗುಂ ।
ಪರಿಹರವನೀಯೆ ವೈಶ್ರವಣ ಕೃಪೆಯಿಂದೆಂದ ।
ಸ್ಮರಿಸಿ ಜಡೆಯೊಳಗಮಿತ ಧನರಾಸಿ ಕಂಗೆಸೆಯಲೆನ್ನ ಕರವಾಳಹತಿಯುಂ ॥
ಶರಬಾಧೆ ಸೋಂಕದಿರಲೆನುತ ವರವಂ ಕೊಡಲು ।
ಹರ ತ್ರಿಶೂಲಂ ಪಾಶಶಕ್ತಿಮುಂತಾದುದಕೆ ।
ಪರಿಹರವ ಭಜಕರಿಂಗಿಷ್ಟಾರ್ಥಗಳನೀವ ಪರಿಯ ಪಾಲಿಸಿದನೊಲಿದು ॥ (17)

ನೆರದ ಗಾಂಧರ್ವರಿಷಿಚಾರಣಾದಿಗಳೆಲ್ಲ ।
ಪರಿಪರಿಯ ವರಗಳಂ ಕೊಡುತಮಿರೆ ಪೊಂಬೊಡೆಯ ।
ಚಿರತರಾಯುಷ್ಯಮಂ ಬುದ್ಧಿಯಂ ತನ್ನಸ್ತ್ರಹತಿಯ ಪರಿಹರಿಪ ಪರಿಯ ॥
ಕರುಣಿಸಿದರಾ ವಿಶ್ವಕರ್ಮ ತನ್ನಿಂದುದಿತ ।
ಕರವಾಳಮಾರ್ಗಡಾದ್ಯಾಯುಧಗಳಂದಲೀ ।
ಹರಿಯವಧ್ಯಮೆನುತ್ತ ವರವ ಪಾಲಿಸೆ ನೋಡಿ ಪದ್ಮದೇರಂ ನುಡಿದನು ॥ (18)

ಸರ್ವಾಮರರ ನಿಚಯ ರಿಷಿವಿಪ್ರರುಂ ತಮ್ಮ ।
ಸರ್ವಶಕ್ತಿಗಳತ್ತ ಕಾರಣದೊಳೀತರುಣ ।
ಸರ್ವದೇವಾತ್ಮನೆಂದೆನಿಸಿ ಮತ್ತದೃಶದಿಂ ಭೂತಳವ ಪೊರೆಯಲೆಂದು ॥
ಪರ್ವಿದಾನಂದದಿಂ ವರವೀಯೆ ಹನುಮಂತ ।
ಸರ್ವಗತನೆಂದೆನಿಸಿ ಸಕಲಮುನಿದೇವತಾ ।
ಗೀರ್ವಾಣಫಲದಾತನಾಗಿ ರಾರಾಜಿಸಿದನಾದುದುತ್ಸವ ಮಾರುತಗೆ ॥ (19)

ಶುಭಕರಸುಮೂರ್ತಿಯಂ ಮಾರುತಂಗೊಪ್ಪಿಸು ।
ತಿಭರಾಜವರದ ದೇವರ್ಕಳೊಡವೆರದೈದ ।
ಲಭವನೆಡೆಗೈದಿ ಚೌಷಷ್ಟಿ ವಿದ್ಯಗಳರಿತು ಪಾಕಶಾಸನನ ಪೊರೆಯು ॥
ಶುಭಕರದ ವ್ಯಾಕರಣವರಿತು ಭಾಸ್ಕರಸಹಿತ ।
ನಭದಿ ಸಂಚರಿಸುತ್ತಮಾಮ್ನಾಯ ಸಾಸಿರವ ।
ವಿಭವದಿಂ ಕೈಕೊಂಡ ಸುತನ ನಿಟ್ಟಿಸಿ ಮರುತ ಸಂತದಲಿಂತೆಂದನು ॥ (20)

ಆದುದುತ್ಸವವೆನಗೆ ಭವದೀಯ ಮಾತ್ರೆಯಂ ।
ಮೋದಗೊಳಸುತ ಮುಂತೆ ಶ್ರೀರಾಮ ಕೃಪೆಯನುಂ ।
ಸಾಧಿಸುವುದೆಂದರಿತು ಸಂಭ್ರಮದಲೈದಲೀ ತರುಣ ಗುರುವಚನವಿಡಿದು ॥
ಮೇದುರಪ್ರಿಯದಿಂದಮೆನ್ನ ಪರಿಪಾಲಿಸುತ ।
ಮಾದರಣೆಗೈದ ಕಲ್ಯಾಣಗುಣಗಳದೆಂತು ।
ಬೋಧೆಗಳವಡುವದೆಂದೊರೆದ ಸುಗ್ರೀವನೊಡನಿಂತೆಂದ ರಘುವೀರನು ॥ (21)

ಖಗತನಯ ಲಾಲಿಪುದು ತಿಳದಿರ್ದನೀ ಕಪಿಯ ।
ಬಗೆಯನೆಲ್ಲವನದೆಂತೆನೆ ಪೇಳ್ವೆ ನಿರ್ಗುಣವ ।
ಸೊಗಸಿಗೆನ್ನೊತ್ತಿನಲಿ ಸುಳವ ಮೂಲಪ್ರಕೃತಿಯೆಂದುದಿತ ಮೂರುಗುಣದ ॥
ಒಗುಮಿಗೆಯ ಮೂರನೆಯ ಗುಣಮೂರ ಶಿವಬ್ರಹ್ಮ ।
ನಿಗೆ ತಾಣವೆನಿಪ ಗೋಳದೊಳಿರ್ಪ ಭೂಜಲಂ ।
ಪೊಗುವಲ್ಲಿ ಗಗನಾಗ್ನಿಮರುತರೆಂಬೀ ಭೂತ ಮೂರರಿಂದೆಸೆವ್ರದನಘ ॥ (22)

ಅಲ್ಲಿ ಬ್ರದ್ನಾಖ್ಯ ಬ್ರಹ್ಮನಿಗಾರ್ಯಯಾಗಸದ ।
ಚೆಲ್ವಶರೀರಮುಘ್ರ್ಯಹಾರವಾಯುಗತಿ ।
ಯಲ್ಲಿ ಕಂಗೊಳಪ ಬತ್ತೀಸರ್ಬುದಂ ರುದ್ರರೋಲಗಿಸುತಿರೆ ವಹಿಲದಿ ॥
ಸಲ್ಲಲಿತ ದೇಕಪಾದ್ಯದ್ರು ಜ್ಞಾನಾನಂದ ।
ದಲ್ಲಿರ್ಪ ಪರಶಿವನ ಗುಣಗಳೆನ್ನುತ ತಿಳಯ ।
ರುಲ್ಲಾಸದಿಂ ಸದ್ವಿರಾಟಪ್ರಾಕೃತಿವಿಡಿದು ಪೂರ್ವಗೋಪ್ಯದ ಪರಿಯನು ॥ (23)

ಗೋವಿಬುಧರಕ್ಷಣೆಗೆ ನಂಬಿರುವದಕೆ ಮುನ್ನ ।
ತೀವಿಯಿಂದೇಕಪದರುದ್ರತ್ರ್ಯಂಬಕನಿಂದ ।
ತಾವೆಸಿಸುತಗಜೆಯೊಳು ಮರುತಮೂಲದೊಳ್ಬೈದುತಂಜನಾತನಯನೆನಿಸಿ ॥
ಈ ವಿಧದ ರೂಪ ಕೈಕೊಂಡು ರಾಜಿಪ ಪ್ರಿಯದೊ ।
ಳಾವನಾದರು ಭಜಿಸಲಾಪದೋದ್ಧರಣೆ ಗೈ ।
ದೀವ ಬೇಡಿದ ಫಲವ ಭೂರಕ್ಷಣಾರ್ಥಕಾಯ್ತಾ ಮೂರ್ತಿ ಸೂರ್ಯತನಯ ॥ (24)

ನಾಡೊಳುಳ್ಳಖಿಳ ಸುರಮಂತ್ರಾತ್ಮವಿಾ ಮೂರ್ತಿ ।
ಪಾಡಿದರ ಪೊಗಳದರ ಭಜಿಸುವರ ಪ್ರೀತಿಯಿಂ ।
ನೋಡುವರಿಗೊಲಿದು ಬೇಡಿದುದಿತ್ತು ರಕ್ಷಿಸುವ ಪರಬೊಮ್ಮನವತಾರವು ॥
ಮಾನುವಂ ಹರಬೊಮ್ಮಹರಿಗಳಂದವುಪ್ಪಿದಿವ ।
ಗೀಡುಂಟೆ ಸರ್ವಾತ್ಮನೆಂದರಿತು ಸಂತಸವ । (25)
ಮಾಡಿಕೊಂಬುದು ಪೇಳ್ವದೆನಿತು ಸದ್ಗುಣಗಳನು ಗಣಿಸಲಕ್ಕುಮೆ ಕಪೀಶ ॥

ಎನುತೊರೆದ ಗೋಪ್ಯಕರ ವಾರ್ತೆಯಂ ಕೇಳುತ್ತ ।
ತನುಪುಳಕದಿಂದ ಸುಗ್ರೀವ ಕೃತಕೃತ್ಯನೆಂ ।
ದೆನಿಸಿ ಬಿಗಿಬಿಗಿದಪ್ಪಿ ಮುದ್ದಿಸುತ ಸೌಖ್ಯಮಂ ಪಡೆದು ಮೈಮರೆದು ನಿಮಿಷಂ ॥
ಘನತರಾನಂದದೊಳಗೋಲಾಡುವನಿತರೊಳು ।
ಚಿನುಮಯಾತ್ಮಕರಾಮ ತನ್ನ ನಾಮಾಂಕಿತವ ।
ಮಿನುಗುವಂಗುಲಿಯಭೂಷಣವ ಕರದಿತ್ತನಾ ಹನುಮಂತಗತಿಪ್ರೀತಿಯಿಂ ॥ (26)
ಪ್ರೇಮದಿಂದಂಗುಳೀಯಕವ ಹಸ್ತದಿಕೊಟ್ಟು ।
ತಾಮರಸನಯನೆ ಜಾನಕಿಗೆ ಪೇಳುವ ಕುರುಹ ।
ನಾಮಗಳನುಸುರಿ ಬೀಳ್ಕೊಟ್ಟಿರಂಜನೆಯ ಸುತ ನಮಿಸಿ ರಘುವರನ ಪದಕೆ ॥
ತಾಮರಸಭವತನಯನಂಗದ ಪ್ರಮುಖಕಪಿ ।
ಭೀಮಬಲರೊಡಗೊಂಡು ಕಲಶಸಂಭವನಿರ್ಪ ।
ಧಾಮಮನ್ನರಸುತ್ತೈದಿದರಿತ್ತ ಸುಗ್ರೀವ ಕಪಿಬಲವನೆಲ್ಲ ಕರದು ॥ (27)
ಪೇಳಿದಂ ಮೊದಲಾನು ಪೇಳ್ದ ವಚನಂಗಳಂ ।
ತಾಳ ಮಾಸಗಳಲಿ ರಘುವೀರಗಂ ಪ್ರೀತಿ ।
ಯೊಳಗವ ಸಂಪಾದನಂ ಗೈದು ತಿಂಗಳೊಳಗೈತಹುದು ಮನ್ನಿಕಟಕೇ ॥
ಆಲಸ್ಯಮಿನಿತಾಗಲಾಂ ಕೊಲುವೆನೆಂದು ಕಪಿ ।
ಜಾಲಕರುಪುತ ಪಲವರೈದಿದರದೇನೆಂಬೆ ।
ಕೋಳಾಹಳಧ್ವನಿಗಳಿಂದ ದಿಗ್ದೇಶಗಳನರಸುತ್ತಪೋದರಿತ್ತ ॥ (28)
ರಾಮನಚ್ಚರಿಗೊಂಡು ರವಿತನಯನಂ ಕರೆದು ।
ಪ್ರೇಮದಿಂ ಬೆಸಗೊಂಡ ಕಪಿವೀರನೀ ಪರಿಯ ।
ಭೂಮಿಯೆಲ್ಲವನದೇಂ ಕಾರಣದಿ ಶೋಧಿಸಿದೆ ಕಂಡುದೆಂತೊರೆಯೆಂದನು ॥
ಭೀಮಬಲನಣ್ಣ ಬೆಂಬತ್ತಿ ಬರೆ ಭಯದಿಂದ ।
ಲೀ ಮಹಿಯೊಳೊಂದು ಗೋಪಾದದಗಲವ ಬಿಡದೆ ।
ನಾ ಮರಳಮರಳಸುತ್ತಿದೆನರಸ ನಾ ಚಕ್ರವಾಳಗಿರಿಯೊತ್ತಪಿಡಿದು ॥ (29)
ಎಲ್ಲೆಲ್ಲಿ ಪೊಕ್ಕರೆಡೆವಿಡದೆ ಬಂದಡಸುತಿರ ।
ಲೆಲ್ಲ ಲೋಕಂಗಳಂ ತಿರುಗಿ ಕಂಗೆಡಲಾಗ ।
ಸಲ್ಲಲಿತವಚನದಿಂದೆಲ್ಲ ಕೋಟಲೆಯುಳಿದು ಸುಖಮಿರ್ದೆ ದೇಶಗಳನು ॥
ಎಲ್ಲವಂ ಕಂಡ ಕಾರಣದ ಬಿನ್ನಪಗೈವೆ ।
ಮುಲ್ಲಾಸದಿಂದವಧರಿಸೆಂದು ಸುಗ್ರೀವ ।
ಸೊಲ್ಲಿಸಿದ ಶ್ರೀರಾಮಗುಣಧಾಮನಿಸ್ಸೀಮಗಾನಂದ ಪೆರ್ಚುವಂತೆ ॥ (30)
ಮೆಚ್ಚಿದಂ ಸಾಹಸವನಾಲಿಸುತ ರಘುವೀರ ।
ಮುಚ್ಚಟಿಯೊಳೈದಿ ಕಪಿಬಲ ಮೂರು ದಿಕ್ಕುಗಳ ।
ನಚ್ಚರಿಯೊಳರಸಿ ವೈದೇಹಿಯಂ ಕಾಣದಲೆ ದೇಶದೇಶದ ಕುರುಹನು ॥
ನಿಚ್ಚಳದಿ ಪಿಡಿದು ನಿಜಶಾಸನದಿನಂಗಳಂ ।
ಪೆಚ್ಚದಂದದಿ ಬಂದು ಕಾಣಿಕೆಯನಿತ್ತು ಪೇ ।
ಳ್ದಚ್ಚರಿಯುಗಳ ಕೇಳುತಂ ರಾಮನಿರಲಿತ್ತಮನ್ನೆಗಂ ದಕ್ಷಿಣದೊಳು ॥ (31)

ತಾರೇಯಜಾಂಬವ ಪ್ರಮುಖಕಪಿ ಶಾರ್ದೂಲ ।
ವೀರರೈತಂದು ವಿಂಧ್ಯಾಟವೀ ಮಧ್ಯದೊಳು ।
ಸೂರಿಯಾಸುತ ಪೇಳ್ದ ತಾಣಂಗಳೆಲ್ಲಮಂ ತೊಳಲಿ ಶೋಧಿಸುತ ಬಳಲಿ ॥
ಧಾರುಣೀಸುತೆಯ ಕಾಣದೆ ಮುಂದಕರುಗಿದ ।
ರ್ಭಾರಣ್ಯೆಯ ಕಾನನವನೊಳಪೊಕ್ಕು ಬಂದರತಿ ।
ದೂರ ಪಂಥಾನವಮಂ ಪಿಡಿದು ಗಿರಿನದಿಗುಹಾಶಯಗಳಂ ಶೋಧಿಸುತಲಿ ॥ (32)
ಶೋಧಿಸುತ ಮುಂದಕ್ಕೈತರೆ ಗುಹಾಗಹನಂಗ ।
ಳಾದಿಯಂ ನೋಡುತ ಬರೆ ನಿರ್ಜನಸ್ಥಾನವಂ ।
ಭೇದಿಸುತ ಬಳಲಿ ಮುಂದೈತಂದರಾ ಹರಿಗಳತಿಶಯದ ಧೈರ್ಯದಿಂದಂ ॥
ಮೇದಿನಿಯೊಳೊಂದೆಡೆಯ ಫಲಪುಷ್ಪಪರ್ಣಂಗ ।
ಳಾದಿಶೂನ್ಯತೆವೆತ್ತ ಶಾಖೆಗಳ ನಿಶ್ರೇಯ ।
ಮೂದ ವಾಪೀಕೂಪಪದ್ಮಾಕರಂಗಳಂ ಕಂಡರಾ ಕಪಿವೀರರು ॥ (33)
ಪುಲಿಕರಡಿಸಿಂಹಶಾರ್ದೂಲಂಗಳಲ್ಲದಿಹ ।
ಪೊಲಬ ಮೃಗಪಕ್ಷಿ ತರುಗುಲ್ಮವೀರುಧಂಗಳಂ ।
ಕಲಿತವಾಗದ ಭೂಮಿಯಂ ಕಂಡು ಪ್ಲವಗರತ್ಯಾಶ್ಚರ್ಯಗೊಳುತ ನಿಂದು ॥
ನೆಲವಿದೇನೆನೆ ಜಾಂಬವಂ ಪೇಳ್ದ ಪೂರ್ವದೊಳ್ ।
ಚೆಲುವಂಡೂನಾವು ತಾಪಸಾಶ್ರಯಮಿದುವೆ ।
ಕೆಲವುದಿನ ಪೋದಬಳಕಾದುದೀಪರಿಯದಂ ಚಿತ್ತ್ರಿಸನವಧರಿಪುದು ॥ (34)
ಪತ್ತ್ರವರುಷದ ಕುಮಾರಕನೋರ್ವನಿರ್ದನ ।
ತ್ಯುತ್ತ್ರಮದ ಮತಿಯವನಿಗಡಸೆ ರುಜೆ ಮುನಿದು ಋಷಿ ।
ಯಿತ್ತ ನಿಮರ್ಾನುಷ್ಯ ಮೃಗಪಕ್ಷಿತರುಗುಲ್ಮರಹಿತವಾಗಿರಲೆನ್ನುತ ॥
ಬಿತ್ತರದ ಶಾಪಮಂ ಕೊಟ್ಟು ಪೋದಂದಿಂದ ।
ಮಿತ್ತ ಸಕಲ ಪ್ರಾಣಿಶೂನ್ಯತರುಜಲಸಹಿತ ।
ವೆತ್ತುದೀ ನೆಲವೆನುತ ಪೇಳುತರಸುತ ನಡೆದರಲ್ಲಿಂದ ಸರಣಿವಿಡಿದು ॥ (35)
ಮುಂದೊಂದು ಭೀಕರದ ಗಹನದೆಡೆಯೊಳು ಲತಾ ।
ಬೃಂದಮಧ್ಯದೊಳೊರ್ವ ಘೋರರಕ್ಕಸನಿರಲ್ ।
ಬಂದಾತನಂ ಜಡಿದು ಕರಪಾದದಿಂ ಬಡಿದು ದಶಗಳೆನುತ್ತಲವರು ॥
ಕೊಂದನಾ ತಾರೇಯನಾ ಭೀಮರಕ್ಕಸನ ।
ಮುಂದೈದಿ ಗಿರಿದುರ್ಗಗಂಹ್ವರಾದಿಗಳೆಡೆಯ ।
ಲೊಂದನುಳಿಯದೆ ಧರಾನಂದನೆಯ ಬೆದಕಿದರ್ ಸಕಲ ಕಪಿವೀರರೊಲಿದು ॥ (36)
ತೊಳಲಿ ಬಳಲಿದರರಣ್ಯಾದ್ರಿ ನದಿನದಗಳಂ ।
ಕಳದರಗಣಿತ ದುರ್ಗ ದುರ್ಮಾಗಳನೆಲ್ಲ ।
ನಿಳೆಯಸುತೆ ಗೋಚರಿಸದಿರಲಂಗದಂ ನುಡಿದ ಸಕಲ ಕಪಿವೀರರೊಡನೆ ॥
ತಿಳದೆವಾವಾವೆ ಭೂಮಿಗಳ ಗಿರಿದುರ್ಗಗಳ ।
ತೊಳಲಿದೆವು ಕಾಣದಾದೆವು ಜನಕನಂದನೆಯ ।
ಕೆಳೆಗೊಂಡುದತ್ತಿಭೀಕರದ ಕಾಲ ಕಪಿಕುಲಕ್ಕೀಂ ಗೈವುದೆಂದಳಲಿದಂ ॥ (37)

ತರುಣಿಸುತನುಗ್ರಶಾಸನವ ತಿಳಿದಿಹುದೆಲ್ಲ ।
ಹರಿಕುಲಂ ವೈದೇಹಿ ಗೋಚರಿಸದಿರಲಾತ ।
ತರುವನೀ ಕಾಂತಿಯುಂ ಪರಿಪರಿಯ ಯುಕ್ತಿಗಳೆಲರಸಿ ನೋಡುವದೆನ್ನುತ ।
ಪರಿದು ನಾಲ್ದೆಸೆಗಳಂ ಬೆದಕಿ ಗಂಹ್ವರಗಳಂ ।
ನಿರತಾಂಧಕಾರದಾಲಯಗಳನ್ನೋಡಿದರ್ ।
ತೊರೆದು ದೇಹಶ್ರಮವ ಪಸಿವುನೀರಡಿಕೆಗಳನೊಮ್ಮನದೊಳೆಲ್ಲರೊಲಿದು ॥ (38)
ನೋಡಿ ವಿಂಧ್ಯಾಟವಿಯನೆಲ್ಲಮಂ ಶ್ರಮದಿಂದ ।
ನೋಡಿ ಶರದಭ್ರನಿಭರೌಪ್ಯಗಿರಿಯಂ ಕಂಡು ।
ಕೂಡೆತತ್ಶಿಖರದೊಳು ಸಪ್ತಪರ್ಣಾರಣ್ಯಲೋಧ್ರಕಾನನಗಳರಸಿ ॥
ನಾಡೆಲ್ಲಮಂ ತೊಳಲಿ ನಾನಾವಿಧದಿ ಬಳಲಿ ।
ಕೂಡದಾಗಲ್ ಮನೋರಥವಿರಥರೆನಲೊಂದು ।
ಗೂಡಿ ತರುನೆಳಲೊಳರೆನಿಮಿಷ ವಿಶ್ರಮಿಸುತ್ತ ಮುಂದರಸಲೊಡನೈದಿದರ್ ॥ (39)
ತಾರಾಂಗದರ ಕೂಡಿ ವಿಂಧ್ಯಪರ್ವತದಿ ಡು ।
ಸ್ಫಾರವೆನಿಸುವ ಕೂಟಗಂಹ್ವರವ ಕೇಸರಿಕು ।
ಮಾರನರಸಿದ ನೆಲದಲೊಗ್ಗಣಬಿಡದೆ ಮುದವೇರಿ ತರುಗುಲ್ಮಗಳಲಿ ॥
ವೀರಗಜಗವಯಶರಭಂ ಗಂಧಮಾಧನನು ।
ದಾರಮೈಂದದ್ವಿವಿಧನಳಜಾಂಬವಾದಿಗಳ್ ।
ಧಾರುಣೀಸುತೆಯನರಸಿದರಾ ಮಹಾದ್ರಿಯೊಳಗೊಂದೆಡೆಯುಮಂ ಬಿಡದೆಲೆ ॥ (40)
ಕಾನನಾಂತರಗಳಂ ತಿರಿಗಿ ಶೋಧಿಸಿ ಪರಿ ।
ಮ್ಲಾನಕರಪದರೆನಿಸಿ ಕ್ಷುತ್ಪಿಪಾಸಗಳಿಂದ ।
ಜ್ಞಾನರಾಗುತ ಬಳಲಿ ನಾಲ್ದೆಸೆಯ ನೋಡಿದರ್ ಜಲಶೂನ್ಯವಾದ ನೆಲನ ॥
ಯೇನೆಂಬುದಾ ಕಷ್ಟದತಿಶಯವ ಬಳಲುತ್ತ ।
ವಾನರಾಧಿಪರೊಂದು ಬಿಲವ ಕಂಡದರೊತ್ತ ।
ವೈನದಿಂ ಸಾರ್ದಿಟ್ಟಿಸಿದರೆಲ್ಲರೊಂದಾಗಿ ಜಾವಪರಿಯಂತರೊಲಿದು ॥ (41)
ನೀರಿಂದ ನೆನೆದ ಪಕ್ಕಗಳಿಂದ ಪಂಸೆಗಳ್ ।
ಕಾರಂಡಚಕ್ರಗಳ್ ಸ್ವರ್ಣಮಯದತಿರಾಗ ।
ಸಾರಸವಧೂಳಿಗಳ ಬೆರದು ಬಿಲದಿಂ ಪೊರಟು ಬಪ್ಪುದಂ ಕಂಡರೊಲಿದು ॥
ಚಾರುತರ ಸೌಗಂಧ ಸೀತಳಂ ಸುಕುಮಾರ ।
ನೂರುತಂ ಬರೆಕಂಡು ಶಾಖಾಮೃಗಂಗಳಂ ।
ಹಾರೈಸಿ ನೀರಡಿಕೆಯಿಂದ ಮೈತಂದದಂ ಪೊಕ್ಕರತಿ ಹರುಷದಿಂದ ॥ (42)
ಅತಿಬಲಾನ್ವಿತ ಕಪೀಶರ್ ಪೊಕ್ಕರಾ ಬಿಲವ ।
ನತುಲಕಳ್ತಲೆಯಿಂದ ಭರಿತವಾಗಿರೆ ಕಂಡು ।
ವಿತ್ರತಭಯಗೊಂಡು ಕಂಗಾಣದಿರೆ ಹನುಮಂತನಿಂತೆಂದ ನೊಲವಿನಿಂದ ॥
ಧೃತಿಗುಂದಲೇಂ ಪೊಕ್ಕಬಳಿಕ ಧೈರ್ಯದಿ ಪಿಡಿದು ।
ಕ್ಷಿತಿಯನೆಲ್ಲವ ನೋಡಿ ಮನದ ದುಮ್ಮಾನವಂ ।
ಹತ್ತಗೊಳಸವೇಳ್ಕೆಂದು ಪೇಳಲೋರ್ವರಿಗೋರ್ವರರಸುತ್ತ ನಡೆಗೊಂಡರು ॥ (43)

ಕೆಲನು ನೆಲನಂ ಪೋದರಲ್ಲಿಂದಲುಂ ಮುಂದೆ ।
ಪೊಲಬಕಾಣದೆ ಕರಕರಂಗಳು ಪಿಡಿದು ಮುಂ।
ದೊಲಿದು ನಡೆದರ್ ಕೆಲವ್ರುದೂರಮದರಿಂ ತೀರದೋರ್ವರೋರ್ವರ ತಕ್ಕಿಸಿ॥
ಕೆಲವು ನೆಲನಂ ಪೋಗಿ ತಿಮಿರಭಯಿಷ್ಟದೊಳು ।
ಸಿಲುಕಿ ಮುಂಗಾಣದಲೆ ಜೀವದಿಂ ಚಲನೆಯುಂ।
ತೊಲಗಿಸಿದನಾಗ ಪವನಾತ್ಮಜಂ ಧೃತಿಯಿಂದಮುಸುರ್ದನೊಲಿದೆಲ್ಲವರೊಳು •
ಡಮನಿಲ್ಲದತಿಪರಾಕ್ರಮಿಗಳೆಲ್ಲರು ಪಥ।
ಶ್ರಮಖಿನ್ನರೆಂದೆಸಿ ತೃಷೆಯಿಂದ ಪಲವುವಿಧ।
ಶ್ರಮಗೊಳುವುದನುಚಿತಂ ಪತಿಕಾರ್ಯನಿಷ್ಠರಿಗೆ ಬೆರತವಸ್ಥೆಗಳೊದಗಲು॥
ತಿಮಿರದುಪಟಳದಿ ಕಪಿತಿಂತಿಣಿಯು ಕಂಗೆಟ್ಟು।
ಯಿಮಗೆ ನೆರವಾರಿಂದ ಬರುವುದೀ ತಾಣದೊಳು।
ಸಮಯದೊಳು ಪೋಗಾಡಲೆಂತಹುದು ಗತಿವಿಡಿದು ನಡವುದುತ್ತಮಪದವಿದು॥ (45)
ಈ ಮಹದ್ಬಿಲವ ಪೊಕ್ಕರಸದಳ ಪಿಂದಿರುಗ।
ಲೀ ಮಹಧ್ವಾಂತದೊಳಗೆಲ್ಲಿ ಪೋಪುದೊ ಸರಣಿ।
ಈ ಮಹಾಪಂಥಾನ ಪಿಡಿದು ನಡದರೆ ಮುಂದೆ ಶುಭವಿಭವಮಪಜಯಗಳು॥
ರಾಮಪುರದರಸನಾಧೀನವೆಂದೊರೆಯಲತಿ।
ಪ್ರೇಮಗೊಂಡೆಲ್ಲರುಂ ಪೋಗುತಿರೆ ಮುಂದೊಂದು।
ಧಾಮ ಕಂಗೆಸೆದುದಚ್ಚರಿಯೆನಲ್ ಭಕ್ತರಿಂಗೆಡರುಂಟೆ ಮೂಲೋಕದಿ॥ (46)

ಸಂಧಿ 17 ಕ್ಕಂ ಪದ 741॥

## ಹದಿನೆಂಟನೆಯ ಸಂಧಿ-

ಸೂಚನೆ॥ ಹೇಮಾವಚನ ಪಿಡಿದು ಪೊರಮಟ್ಟು ಕಪಿಸಾರ್ವ।
ಭೌಮ ಚಿಂತಿಸುತಿರಲ್ ಪವಮಾನನಂದನಂ।
ಸಾಮದಿಂದುಪಚರಿಸುವನ್ನೆಗಂ ನೈದೋರ್ದ ಸೂರಸುತಾತ್ಮಭವನು॥

ಪದ॥ ಕತ್ತಲೆಯ ಮೊತ್ತದೋಳ್ ಕಂಗೆಟ್ಟತೊಳಲಿಪ್ಪವ।
ಗೋತ್ರಮರ್ ಹರಿಕೃಪೆಯನೈದಿ ನೋಡಿದತ್ತ।
ರಿತ್ತಕಾವ್ಯಥಿಕರಪ್ರಭೆಯು ಗೋಚರವಾಗಲಾಶ್ಚರ್ಯಗೊಳುತ ಮನದಿ॥
ಮತ್ತೆ ಹರುಷಂಗೊಳುತ ಪಮತೆಯುಂಬರೆ ರನ್ನ।
ತೆತ್ತಿಸಿದ ನೆಲಗಟ್ಟನಿಂದೆಸೆದುದಾಪೆಡೆಯ।
ಉತ್ತಮೋತ್ತಮ ಸರಿತ್ಸಾರಹಮ್ಯಂಗಳೆಸೆಯಲಿಟ್ಟಸಿದರಗಜೀ॥ (1)
ಅಡಿಗಡಿಗೆ ನವರತುನಖಚಿತ ಭೂಮಿತಳಗ।
ಳೆಡೆಗೆಡೆಗೆ ಸೌವರ್ಣಮಯ ಪಾದಪಂಗಳಾ।
ವೆಡೆಯೊಳುಂ ಲೇಖೋಪಯೋಗ್ಯ ಕರುಮಾಡಗಳ್ ವೈಜಯಂತದೊಳೆಸೆದವು॥
ಸುಡಿವ ಪಂಡಿತವಕ್ಕಿಗಳ ಕಲಸ್ವನ ಮಧುರ।
ದೊಡನೆ ಕೂಡಿದ ತಾಂಬ್ರತುಂಡಂಗಳುಲಿಗಳಂ।
ಬೆಡಗಬೀರಿತು ಕಪೀಂದ್ರರ ದೃಕ್ಸಮೂಹಕಂ ಪತ್ತಣ ಮನೋಹರಮೆನೆ॥ (2)

ಕುಣಿವ ನೋಗೆಗಳ ಸಮುದಾಯದ ವಿಡಾಯಿದಿಂ।
ಬೆಣಗುತಿಹ ಚಕ್ರತನುಥಾಸದ ವಿಲಾಸದಿಂ।
ಮಣಿತಮೆನೆ ಮೊರೆವ ಭೃಂಗಾವಳಿಯುಂ ಕಾದ ಅಂಬುಜದ ಜಂಗುಳಿಗಳ॥
ಪ್ರಣಯ ಕುಪಿತದ ಪಿಕದ ಮಂಗಡದ ಸಂಗಡದ।
ಭಣಿತೆಯಂತೆಸೆವ ಜೀವಂ ಜೀವಗಳ ಕಾಮ।
ನುಣುಧನಿಗೆ ಮೆಚ್ಚಿ ವ್ಯೆಮರೆಯುದಿಹುದೆನೆ ಮನಂ ಬೆರ್ಚಿಸುವುದಾ ನಗರವು॥ (3)

ಕನಕಮಯ ತರುನಿಚಯ ಶಾಖಾಗ್ರದೊಳು ರತುನ।
ಮೆನೆ ಕಿಸಲಯಂಗಳುಂ ಮೌಕ್ತಿಕ ಸ್ತಬಕಂಗ।
ಳೆನೆ ವಜ್ರಮಯ ಶಲಾಕುಗಳಂದ ಕಲ್ಪತರು ನಿಚಯಮಂ ಧಿಕ್ಕರಿಸುತ॥
ಬನಮೆಸೆದುದಲ್ಲಲ್ಲಿ ಭಾಸ್ಕರಪ್ರಭೆಯಂತು।
ಮಿನುಗುತಿಹ ಲತೆಗಳಂ ವೈಡೂರ್ಯಮಯ ಕಮಲ।
ವನವಿಹಗಸಂಪೂರ್ಣಮಾಗಿ ರಾರಾಜಸಿದುದೇನೆಂಬೆನಚ್ಚರಿಯನು॥ (4)

ಸುರಚಾಪತೋರಣಗಳೋರಣಗಳಕ್ಕಡೆಯ।
ಉರುತರದ ಕೇಸರಿಯ ಮ್ಯೆಸಿರಿಯ ಕಂಗೊಳಪ।
ಕರಕಲಿತಪಲ್ಲಕಿಗಳಲ್ಲಿ ಕಿವಿಗಿಂಪೆನಿಸಿ ಪಾಡುತಿಹ ಪುತ್ಥಳಿಗಳ॥
ತರುಣ ಭೃಂಗಾರವಗಳಾರವಕ್ಕನುಮೋದ।
ವೆರದುಲ್ಲಸಿತವಾದ ಪಲ್ಲವಾರಿಗಳಂದ।
ಮೆರೆದುದಳಕಾವತಿಯ ಚಳಕದಮರಾವತಿಯ ವೈಭವಕ್ಕಿಮ್ಮಡಿಯೆನೆ॥ (5)

ರತುನಮಯ ಶಯನಮಾನಂಗಳಾವಾವೆಡೆಯ।
ವಿತತಹೈರಣ್ಯಶಿಬಿಕಾಂದೋಳಕಾಯಾನ।
ತತಿಗಳಾವಾವೆಡೆಯ ಹೈಮರಾಜತಕಾಂಸ್ಯ ಭಾಜನಗಳೆಲ್ಲೆಲ್ಲಿಯು॥
ಅತಿಶಯಾಗರು ಮೃಗೀಮದ ದಿವ್ಯಗಂಧ ಸಂ।
ಗತಿಯಮೃತ ಕಲ್ಪಫಲ ಮೂಲಮಧುನಿಚಯ ಸಂ।
ಭೃತಮೆನಿಸುತಲ್ಲಲ್ಲಿ ನೋಡೆ ಶಾಖಾಮೃಗಗಳುಲ್ಲಾಸಗೊಳುತ ನಲಿಯೆ॥ (6)

ದೇವತಯೋಗ್ಯಮೆನಿಪಂಬರಗಳಂದ ರಾ।
ಜೀವ ಭವನೊಲುಮೆಯಂತೆಸೆವ ಕಂಬಲದಿಂದ।
ಪಾವನಾಜನನಿಚಯಪಾಸಿಕೆಗಳನಾಂತು ತೋರ್ದುದಡಿಗಡಿಗೆ ಶುಭಮಂ॥
ಆವಾವಕಡೆಯೊಲತಿಶಯಕಾಂತಿ ಫಲಭರಿತ।
ಮಾವದೆಂದಿಟ್ಟಿಸುವರತಿಶಯವ ಪೊಗಳಲಿ।
ನ್ನಾವನಿಂದಳವಹುದು ಶಿವನಿರವೆನುತ್ತಮಚ್ಚರಿಯಿಂದವೊಳಪೊಕ್ಕರು॥ (7)

ನೋಡಿ ವಿಸ್ಮಿತರಾದರಾ ನಗರದತಿಶಯವ।
ಕೂಡೆಕೂಡೆತಿಶಯಂ ಬೆರ್ಚಿತೋರ್ವರ ಕಾಣ।
ದೊಡೆದಲೆ ಫಲಮೂಲಗಳನಮೃತರುಚಿಯೆನಿಪ ಮಧುವ ನಾಸ್ವಾದಿಸದಲೆ॥
ಆಡಲಮ್ಮದೆ ಬೆದರುನೋಟದಿಂದೆಡಬಲವ।
ನೋಡುತ್ತಿದಾರ ನೆಲೆಯೋ ಮಹಾದೇವ ನೀ।
ನಾಡ ನಿರ್ಮಿಸಿದನಾವನೊಯೆನುತಲಚ್ಚರಿಯೊಳ್ಳೆದಿರರ್ ಕಪಿವೀರರು॥ (8)

ಮನುಜರಲ್ಲೀ ನೆಲದೊಳಾರನುಂ ಬೆಸಗೊಂಬೆ ।
ವನುವಿಂದ ನಿಟ್ಟಿಸುವುದೆಸದಳಂ ಕಂಗಳಂ ।
ಗಿನಶಶಿಪ್ರಭೆಗಳಂ ಮಿಕ್ಕು ನೋಳ್ಪರಸಾಧ್ಯಮೆನಿಸುತಿದೆ ಪರಬೊಮ್ಮನ ॥
ಮನೆಯೊಳಾ ಭಾಳಾಂಬಕನ ನೆಲೆಯೊ ಸರಸಿಜಭವನಿ ।
ಗನುವೋದನಿಲಯಮೋ ಮತ್ತಲ್ಲದಿನ್ನಾವ ।
ಮುನಿತಿಲಕನಿರ್ಪನೋ ಕಾಣದೆಂತೆನುತಳಲಿ ಬಳಲಿದರ್ ಕಪಿವೀರರೂ ॥ (9)

ವೈಕುಂಠಮಿತ್ರ ಕೈಲಾಸಕ್ಕೆ ನೇಹಿತ ವಿ ।
ಲೋನಪ್ರಿಯ ಸತ್ಯಮುಳ್ಳಾವಯಾಸ್ಯಸುರ ।
ಲೋಕಕ್ಕೆ ಕೆಳೆಯ ಲಕ್ಷ್ಮೀನಿಲಯಮೊನಗರಮಾರು ನಿರ್ಮಿಸಿದರಕಟ ॥
ಲೋಕಸಂಚರಣೆ ಮಾತುರಮಿಲ್ಲ ತೇಜಸಾ ।
ನೀಕದಿಂದಿಟ್ಟಿಸುವರಳವಲ್ಲ ಚೋದ್ಯವ ಪಿ ।
ನಾಕೆ ತಾನೇ ಬಲ್ಲದರಿತವನಲ್ಲಮೆನುತ್ತಮಚ್ಚರಿಗೊಂಡನು ॥ (10)

ಎನಿತು ಬಳಲಿದರೆಮಗೆ ಧೈರ್ಯಮಂ ತಿಳಪಿ ಮುಂ ।
ದನುವ ಪೇಳುವರಾರು ಧೃತಿಯಿಂದ ಕಾರಿಯವ ।
ನನುಗೊಳಸಬೇಕೆನುತ ಪ್ಲವಗರೊಮ್ಮನೆಯಿಂದಲ್ಲಲ್ಲಿ ಶೋಧಿಸುತಿರೆ ॥
ಯೆನಿತು ದೂರಂ ಪೋದರೆನಿತು ಪಂಥಾನಮಂ ।
ಕೊನೆಗಾಣಂಬರಿಲ್ಲ ಸುಳಸುಳದು ಸುತ್ತುತ ಮರಳೆ ।
ಜಿನದದಿಂ ಮೊದಲಿರ್ದ ತಾಣಕೈತಹುದಲ್ಲದಿನ್ನೊಂದು ತ್ರಾಣಮಿಲ್ಲ ॥ (11)

ತಿರುತಿರುಗಿ ಬಾಯಾರಿ ಸುರನೀಲಕಾಂತಿ ಸಂ ।
ಭರಿತಮಾಗಿಹ ಕೊಳದಿ ಜಲಮೊಂಟಿಲರುಗಲದು ।
ತೆರೆಯೆಸಗದಿರಲು ಬರಿದೆನುತ ಕೆಲಸಾರುತ್ತ ಬಜ್ಜರದ ಕಾಂತಿ ಮುಂದೆ ॥
ಪರಿವೃತ್ತಮಿರಲೈದಿ ಪರಿಕಲಿಸಿ ರನ್ನಗಳ ।
ಸುರುಚಿಯಿಂ ಲೋಹಿತಾಕೃತಿವೆತ್ತು ಖಳಲಿಸಿದು ।
ದರದೆ ಕಪಿನಾಯಕರ ಮರುಮರೀಚಿಕೆ ಮೃಗವ ಧಾವತಿಯಗೊಳ್ಪಂದದಿ ॥ (12)

ಪಳುಕಿನುಪ್ಪರಿಗೆಗಳ ಕಳೆಯಿಂದ ವಪ್ಪದು ।
ಜ್ವಲದಿಂದಮಾಮೆಡೆಯ ನೋಡಲೊಂದೇಪರಿಯು ।
ಬೆಳಗಿರ್ಪುದಲ್ಲದಿನಿತಾದರುಂ ಮುಂದೆಗವುದಿಲ್ಲವಾ ಭೂಮಿಯೊಲ್ಲ ।
ತೊಳಲಿ ಕಂಗೆಟ್ಟು ಕಪಿವೀರರತಿಭಯದಿಂದ ।
ಬಳಲುತ್ತಲೇಂ ಗತಿಯೆನುತ್ತ ಚಿಂತಿಸುತಲ್ಲಿ ।
ಕಳೆಗುಂದಿ ಕುಳ್ಳಿರ್ದರೇನೆಂಬೆ ನಿಜ ಜೀವಿತಾಶೆಗಳನುಳಿದು ॥ (13)

ಎತ್ತ ನೋಡಿದರು ಬೆಳಗುತ್ತಿರುವುದೆಲ್ಲ ತಟಿ ।
ದೊತ್ತ ಕಾಣುವದಿಲ್ಲ ರಘುಪತಿಯ ಕಾರ್ಯನವು ।
ಗೆತ್ತಣಿಂದಹುದೆಂತು ಪೊರಮಟ್ಟು ಜೀವದಿಂದುಳಿದು ಪೋಗುವುದೆನುತ್ತ ॥
ಚಿತ್ತಚಂಚಲದಿಂದ ಚಿಂತಿಸುತಮಿರಲಾ ಮು ।
ರುತ್ತಸುತನಿಂತೆಂದ ವಿಪದದೊಳಗತಿಧೈರ್ಯ ।
ವೆತ್ತಲ್ಲದಾ ಕಾರ್ಯ ವಶಮಾಗದೆಂದೆನುತಮುಸುರಿ ನೋಡಲೈದಿದಂ ॥ (14)

ಬೆದರದಿರಿ ನಾಂ ಪೋಗಿ ಬೆದಕುತೀ ಚಿಂತೆಯಂ।
ತುದಿಗೊಳಬೆನೆಂದು ಮಾರುತಿಯೈದಿ ಯೋಗಸಂ।
ಪದದಿಟ್ಟಯಿಂದರಿತ ತಾನಾಗ ಕನಕಮಯಗದ್ದುಗೆಯ ಮಧ್ಯದೊಳಗೆ॥
ಮುದದಿ ದಿವ್ಯಾಭರಣಪಿಟ್ಟು ಮಂಡಿಸಿ ಮೌನ।
ದುದಯದಿಂ ಧ್ಯಾನಯೋಗದೊಳರ್ಪ ಯೋಗಿಣಿಯ।
ಪದುಮನಯನೆಯ ಚೀರವಸನದಿಂ ರಾಜಿಪ ಸ್ವಯಂಪ್ರಭೆಯನಂ ಕಂಡನು॥ (15)
ಮೆಲ್ಲನಾ ಠಾವ ಕುರುಪಿಡಿದು ಮಾರುತಿಯೈದ
ಲಲ್ಲಿ ಕುಳ್ಳಿರ್ದ ಯೋಗಿಣಿ ಕಂಗಳಂ ನೋಡಿ।
ತಿಲ್ಲಿಗೈತಂದುದೇಂ ನೀನಾರು ಕಪಿರೂಪನೆಂತು ಬೆಸಗೊಂಡಿರಾಗ॥
ಸಲ್ಲಲಿತನುಡಿಗಳಂ ಹನುಮಂತನಿಂತೆಂದ ಶ್ರೀ।
ವಲ್ಲಭಂ ದಶರಥಾತ್ಮಜದೂತನಾಂ ಬಂದು।
ದೆಲ್ಲಮಂ ವಿಸ್ತರಿಪೆನವಧರಿಸು ಸಾಧುಕುಲರನ್ನೆಯೆಂದೊರೆದನೊಲಿದು॥ (16)
ಕೋಸಲೇಂದ್ರಂ ಪಂಕ್ತಿರಥಗೆ ನಾಲ್ವರು ತನಯ।
ವಾಸವೋಪಮಿತರೆಸರ್ದಿರ್ಪರದರೊಳು ಪೂರ್ವ
ನಾಸಿರದಳಾಕ್ಷಶ್ರೀರಾಮ ಲಕ್ಷ್ಮಣಸೀತೆಸಹಿತ ಪಿತೃವಾಕ್ಯಪಿಡಿದು॥
ಅಸುರರ ವಧಿಸಲೆಂದಾರಣ್ಯಕೈತಂದ।
ನೈಸೆ ಧರಣೀಸುತೆಯ ಕದ್ದೊಯ್ದ ದಶಕಂಠ।
ನಾ ಸುರನ ಪಥವಿಡಿದು ಬಂದು ಪಂಪಾತಟದಿ ಸುಗ್ರೀವನಂ ಕಂಡರು॥ (17)
ತರಣಿಸುತನಂ ಪೊರೆಯೆ ವಾಲಿಯಂ ಸಂಹರಿಸಿ।
ಸಿರಿಯ ಸುಗ್ರೀವಗುಂ ಪಾಲಿಸಿದಡಾತ ಕಪಿ
ವರರ ನಾಲ್ದೆಸೆಗೆ ಕಳುಪಿದ ಜನಕನಂದಿನಿಯ ಕುರುಪರಿಪು ಬಪ್ಪದೆನುತ॥
ಬರವಾದುದದರಿಂದ ವಿಂಧ್ಯಾಟವಿಯ ತೊಳಲಿ।
ಪರಿಪರಿಯ ಗುಹೆಗಳಂ ಶೋಧಿಸುತ ತೃಷೆಯಿಂದ।
ಮರಿಯದೀ ಕಳ್ತಲೆಯ ಗವಿಯ ಪೊಕ್ಕರ್ ಮರುಾಬಲಜಾಂಬವಾದ್ಯರೊಲಿದು॥
ಬರಬರಲ್ ಬೆಳಗು ತಲೆದೋರಿದುದು ಮತ್ತಿದಂ।
ಪರಿಕಿಸುತಮಿರೆ ಭವನ ಕಂಗೆಸೆದುದಾಶ್ಚರ್ಯ।
ಕರವಿದೆನುತಲ್ಲಲ್ಲಿ ನೋಡುತಿಹರಾ ಕಪಿಗಳವನೀತನುಭವೆಯನೂ॥
ಕರುಣದಿಂದೀಪರಿಯನರಿತೊಂದು ಮಾರ್ಗಮಂ।
ವಿರಚಿಸಲು ಸುಕೃತಮುಂಟೆನೆ ಕೇಳ ರಘುವರನ।
ಚರಿತೆಗಾನಂದಿಸುತ ಯೋಗಿಣಿಯು ಪೇಳ್ದಳಾ ಮಾರುತಕುಮಾರನೊಡನೆ॥ (18)
ತೊಳಲಿ ಶಾಖಾಮೃಗಗಳೆಲ್ಲ ಕಂಗೆಟ್ಟಿರುವೆ।
ರಿಳೆ ಪೆರರದಲ್ಲ ರಘುನಂದನನ ಸಿರಿಯನುತ॥
ತಿಳದೆಲ್ಲರುಂ ಪಕ್ವಫಲಮೂಲಗಳನುಂಡು ಸಂತಸವತಳೆದುಬರಲು॥
ತಿಳವನಿತ ಬಿತ್ತರಿಪೆನೆಂದರಾ ಮಾತಿನಿಂ।
ಕಳೆವೆತ್ತು ಪವನಸುತನೈದಿ ಪ್ಲವಗೇಶರಿಗೆ।
ತಿಳುಹಲಾನಂದದಿಂ ಫಲಮೂಲಗಳನುಂಡು ಸಂತಸದೆಲೈತಂದರು॥ (20)

ಬಂದು ತೇಜೋಭರಿತವಾದ ತಾಪಸಿಯನತಿ ।
ಛಂದದಿಂ ನುತಿಸಿವಂದಿಸಿ ದಿವ್ಯತರವಾದ ।
ಮಂದಿರವಿದಾರದಿಲ್ಲೋರ್ವಳೀ ನೀನಿರ್ಪ ಕಾರಣಂಗಳನೆಲ್ಲವಂ ॥
ಬಂಧುರಪ್ರೇಮದಿಂದೊರೆಯವೇಳ್ಕೆನೆ ಕೃಪೆಯೊ ।
ಳೆಂದು ನಿಜವೃತ್ತಾಂತಮಂ ಪೇಳಲನುಗೈದ ।
ಳೆಂದುಶೇಖರನೆಡೆಯ ವಿಶ್ವಕರ್ಮಾತ್ಮಭವೆಯಿರ್ದಳನುದಿನ ಭಜಿಸುತ ॥ (21)
ಹಾಮೆಯರೊಳತಿಚತುರೆ ಹೇಮಾಭಿದಾನದಿಂ ।
ಸೋಮಶೇಖರ ಭಕ್ತಿ ಪೆರ್ಚೆ ನರ್ತನದೊಳಂ ।
ದಾಮಹೇಶನ ತುಷ್ಟಿಗೊಳಿಸಿದಳ್ ದಯದಿಂದ ಹರನಿತ್ತನೀ ನಗರವಂ ।
ಕಾಮಿತಾರ್ಥಗಳೀವ ಕಲ್ಪಲತೆಗಳಮಣಿ ।
ಧಾಮಮಿಂದ್ರಾದಿಭೋಗಗಳನನುಭವಿಸೆನುತ ।
ನೇಮಿಸಿದರಂಗನೆಯು ಸಂತಸದೆಯಾ ಭವನದೆಡೆಯೊಳಾಗೆಸದಿರ್ದಳು ॥ (22)
ಬಲುವಿಲಾಸಗಳಿಂದ ವರ್ಷಮಯುತೊಯುತ್ತಂ ।
ನೆಲಸಿರ್ದು ತನಗೆ ಪ್ರಿಯಳಾಸೆನುತವಿಾ ಪುರವ ।
ನಲವಿನಿಂದಿತ್ತಳೆನ್ನಭಿದಾನವುಂ ಸ್ವಯಂಪ್ರಭೆಯೆಂದು ಬಳಕವಳು ॥
ಜಲಜಪೀಠನ ಪೊರೆಗೆ ನಡೆವಲ್ಲಿ ಪೇಳ್ದಳೆನ
ಗೊಲಿದು ತ್ರೇತಾಯುಗದಿ ಮಾನುಷಾಕೃತಿವಿಡಿದು ।
ನಳಿನಪತ್ರಾಕ್ಷನೈತಹ ಭೂಮಿಭಾರವನು ಪರಿಹರಿಸೆ ಪರಬೊಮ್ಮನು ॥ (23)
ಆ ಮಹಾಪುರುಷನಂಗನೆಯ ದಶಶಿರನೊಯ್ಯೆ ।
ತಾಮಸೀಚರನನರಸುತ ದಕ್ಷಿಣೋತ್ತರೈತಪ್ಪ ।
ರೀ ಮಹಾಬಿಲದೊಳಗೆ ಮತ್ತೆ ಶಾಖಾಮೃಗಗಳಂ ಪೊಜೆಗೈದು ಬಳಕ ॥
ರಾಮನೆಡೆಗೈದಿ ವಂದಿಸಿ ನುತಿಸಿ ಶ್ರೀಪತಿಯ ।
ನ್ಯೈಮದಿಂ ವೈಕುಂಠಕೈದೆಂದು ಪೇಳ್ದೈದ ।
ಳಾ ಮಾನಿನೀವಚನವಿಡಿದಾನು ಚಿರಕಾಲವಿರ್ದೆನವ ಜಾನಿಸುತಲಿ ॥ (24)
ಆದುದೆನ್ನಭಿಮತಂ ಪರಬೊಮ್ಮರಾಘವನ ।
ಪಾದಂಗಳಂ ಕಾಣ್ಬೆನೈದುವೆನೆನುತ್ತೊರೆದ ।
ರಾದರಿಸಿ ಮಗುಳೆ ಬಿನ್ನಪಗೈದ ಪವನಸುತ ಪಾವನತಪಸ್ವಿಯೊಡನೆ ॥
ಮಾಧವನ ಪೊರೆಗೆ ನೀಂ ಪೋಪರೆಮ್ಮಂ ಬೇಗ ।
ಮೇದಿನಿಗೆ ಕಳುಪಿ ಧರಣೀಸುತೆಯನರಸುವರೆ ।
ಸಾಧನಗಳಂ ತೋರವೇಳ್ಕೆನಲು ನಸುನಗುತ ಯೋಗಿಣಿಯು ಪೇಳ್ದಳೊಲಿದು ॥ (25)
ಆರಿಂದವಿಾ ಮಹಾಬಿಲವ ನಿರ್ಗಸಲರಿದು ।
ತೋರತಮನಾವೃತದ ಪಥಮಿಂತು ಬರಲು ಮುಂ ।
ದೋರದೇನಂತೆಂಬುದೀ ನೆಲದಗುಣ ಹರಂ ದಯಗೈದ ವರಮಹಿಮೆಯು ॥
ವಿಾರಿ ಪೊಕ್ಕರೆ ಪ್ರಾಣಮುಳಿಯದೆಂದರಿತರಿ ।
ನ್ನಾರಾದಡಂ ಪೊಗರು ನೀವಿದರೊಳಪೊಕ್ಕು ।
ತೋರದಾದಿರಿ ಕಾರಣಂ ರಾಮನಾಮಪ್ರಭಾವದಿಂದುಳಿದಿರಕಟ ॥ (26)

ಆದರೊಳ್ಳಿತು ಪ್ಲವಗಪತಿಗಳೆಲ್ಲರು ಧರೆಗೆ।
ಪೋದಪೆವೆನುತ್ತ ಮಾನಸದಲಿರೆ ನೇತ್ರಗಳ।
ನಾದರದಿ ಕರಗಳಿಂದಾಚ್ಛಾದನಂ ಗೈವುದೆನಲು ಬಾಲಕರಂದದೀ॥
ಹಾದಿಗೋಸುಗ ಕರಗಳಲಿ ಕಂಗಳಂ ಮುಗಿಯೆ।
ಮೇದಿನಿಯೊಳಿರ್ದರಾ ಬಿಲಮುಳದು ನಿಮಿಷದೊಳು।
ಪೋದ ಮಾರ್ಗಂ ಕಾಣದಾದುದಚ್ಚರಿಯಿನೇಂ ಪೇಳ್ವೆನಂದಿನ ಪರಿಯನು॥ (27)

ವಿಪದಮಂ ಕಳದು ಭೂತಳದಿ ಸಂತಸಗೊಳುತ।
ಕಪಿಗಳರೆ ಕಂಡು ತಾಪಸಿ ಪೇಳ ವೇಗದಿಂ।
ತಪನ ವಂಶಜನೆಡೆಗೆ ನಡೆದು ವಂದಿಸಿ ಪೊಗಳ ನೇಮವಿಡಿದ್ಯೈದಿ ಮುದದಿ॥
ಜಪಿಸುತಲೆ ಶ್ರೀರಾಮನಾಮಗಳ ಬದರಿಕಾ।
ವಿಪಿನದೆಡೆಗೈದಿದಳ್ ಕರುಣಿ ಕಪಿವರರೆಲ್ಲ।
ವಿಪರೀತಕರಚಾರಣೆಗಳೆಣಿಸುತೋರ್ವರೊಳಗೋರ್ವರಿಂತೆಂದರೊಲಿದು॥ (28)

ದಾನವಮಾಯಾಸುರಂ ನಿರ್ಮಿಸಿದ ಕಾಂಚನದ।
ಕಾನನಮಿದೆಲ್ಲಿ ಪೋದುದು ವಿಶ್ವಕರ್ಮ ಮನ।
ದಾನಂದದಿಂದೆಸಗಿದಿಂದ್ರಭವನೋಪಮಿತಮನೆಯದೇನಾದುದಕಟ॥
ಮಾನಿನೀಮಣಿ ನೃತ್ಯಗೀತ ಚಾತುರ್ಯ ಸು।
ಮ್ಯಾನಿ ಹೇಮಾಸಖಿಳದೆಲ್ಲಿ ಪೋದಳೊ ಕಪಟ।
ಮೇನಿದಚ್ಚರಿ ಕನಸಕಂಡತೆರದೊಳ್ ಪೋದವಕಟ ವಾಸರಗಳೆನಿಸೊ॥ (29)

ಕ್ರೂರಹೃದಯಗೆ ಪ್ರಭುತ್ವಂ ದೊರೆಯಲಾಗೆ ಸರಿ।
ತೋರದಡೆ ಕೊಲದುಳಿವನೆಂತು ನಾವ್ಯೆತಂದು।
ಧಾರುಣೀಸುತೆಯ ಕುರುಪರಿಯದಾತನ ಪೊರೆಗೆ ಪೋಗಿ ಶಿಕ್ಷೆಗಳನಾಂತು॥
ಭಾರಣೆಯ ಸಂಬಾಧೆಗೊಳುವದಕ್ಕಿಂದುಮಿ॥
ಧಾರುಣೀಧರದಿ ಪ್ರಾಯೋಪವೇಶಂ ಗೈದು।
ಮಾರುತಾಹಾರವೆರದಿರ್ಪುದೇ ಕ್ಷೇಮಕರಮೆನುತೊರೆದ ಪ್ಲವಗತತಿಗೆ॥ (30)

ತರಣಿಸುತಮಸಗೆ ಯುವರಾಜಪಟ್ಟವನಿತ್ತ।
ಪರಿಯಿಲ್ಲ ರಘುನಾಥ ಪ್ರಿಯದಿ ಪಾಲಿಸಿದನೆಂ।
ದರಿದಿರ್ಪರೆಲ್ಲ ಪೂರ್ವದ ವೈರಮಂ ಸ್ಮರಿಸಿ ಮನದಿ ಬೇರೊಂದನೆಣಿಸಿ॥
ಧರಣಿಜೆಯ ಕಾಣದಲೆ ರಾಜಾಜ್ಞೆಗುಂ ಮೀರಿ।
ಚರಿಪನೆಂದರಸಿಗುಂ ಪೇಳ ಕೊಲಿಸದೆ ಮಾಣ।
ಸರಿತಲ್ಲಿ ಗೈದುವದರಿಂತ ತನುವಂ ತೊರೆವುದತಿಲೇಸು ಮನ್ಮತವಿದು॥ (31)

ಎನುತಂಗದಂ ಪೇಳ್ದ ವಚನವಿದು ಸತ್ಯಮಹು।
ದೆನ್ನುತ ಕಪಿವರರೆಲ್ಲ ಕುರುಣದಿಂದಿಂತೆಂದ।
ಇನತನಯನನುಗ್ರಶಾಸನನೆಂದು ಮುಲ್ಲೋಕಜನವೆಲ್ಲ ತಿಳದಿರ್ಪುದು॥
ಜನಕಜೆಯ ಕಾಣವಾಯ್ತೆದಲಾ ಕಪಿರಾಜ।
ಕಿನಿಸಿಂದ ದಂಡಿಸದೆ ಮಾಣ್ದಪನೆ ವಿಷಮಕರ।
ಮನನಾತನಂ ಕಾಣ್ಬುಮತಿಗಿಂತ ನಾವುದೇ ಸುಕ್ಷೇಮಕರವೊಂದರು॥ (32)

ಪ್ಲವಗಾಧಿಪರ ನುಡಿಯ ಕೇಳಿ ತಾರಂ ಪೇಳ್ದ ।
ಕುವಲಯಾತ್ಮಜೆಯ ಕಾಣದೆ ಪೋಗಲಿಪ್ಪಸುತ್ತ ।
ಜವದಿ ಶಿಕ್ಷಿಸುವನಿದು ಸಿದ್ಧಮಂಗದಪೇಳ್ದ ನುಡಿ ಸತ್ಯಮಹುದು ನೋಡೆ ॥
ವಿವರದೊಳಗಿಹ ನಗರ ಪತ್ತಣಂ ಭೋಗಕರ ।
ದವಿರಳದ ಹರ್ಷ ಜನರಿಲ್ಲದಿಹ ತಾಣಮದ ।
ತವಕಪಂ ಸಾರಿ ಶಾರೀರಮಂ ತೊರೆವುದೇ ಲೇಸೆಂದು ನುಡಿದನೊಲಿದು ॥ (33)

ಅಂಗದಂ ಪೇಳ್ದುದಕೆ ಪ್ಲವಗಾದಿ ನಾಯಕರ್ ।
ಕಂಗೆಟ್ಟು ಕಳವಳಿಸಲೀ ಪರಿಯ ನೋಡಿ ಕಪಿ ।
ಪುಂಗವನ ಸಂತೈಸದಿರಕೂಡದಾದುದಾ ಮಾರುತಿಯ ಚಿತ್ತದೊಳಗೆ ॥
ಹಿಂಗಿಸಿವನಷ್ಟಾಂಗಯುಕ್ತಂ ಚತುರ್ಬಲವ ।
ಸಂಗಡದಿ ಪದಿನಾಲ್ಕುಗುಣಗಳಂ ಪೋಣಿಸಿವನಿ ।
ಗೇಂ ಗೈವೆನೆನುತಮುಪಚರಿಸಿದಂ ಸುರರಾಜಸುತಸುತನ ವಿನಯದಿಂದ ॥ (34)

ಮೂರುಪಾಯಗಳಿಂದ ನೋಡಿ ವಶವಾಗದಿರೆ ।
ಮೀರಿದಾ ಯುಕ್ತಿಯಂ ಬಳಸುವದು ಯುಕ್ತ ಕಪಿ ।
ವೀರಸುತ ಪಿತೃತುಲ್ಯವಿಕ್ರಮಂ ಧೀಯುತಂ ಚಪಲಕಪಿವಚನವಿಡಿದು ॥
ಈ ರೀತಿಯನುತಾಪ ಗೊಳುತ ರಕ್ಷಣೆ ಗೈದು ।
ಶಾರೀರಮಾತ್ರದಿಂದಿರುವುದಬಲರ ಮತಂ ।
ಸೂರಿಯನ ಸುತರ ಭಯಮೇನಿಹುದು ರಘುಪತಿಯ ಮುದ್ದಿನ ಕುಮಾರ ನಿನಗೆ ॥ (35)

ತ್ರಿಜಗಮಂ ನಿರ್ಮಿಸುವರಿಚ್ಛೆಗೈದರೆ ಕ್ರೋಧ ।
ರುಜೆಯಿಂದ ಕಲ್ಪಾವಸಾನಗೊಳಿಸುವರದಂ ।
ಸೃಜಿಸುವರು ಮಗುಳೆ ಶ್ರೀರಾಮಲಕ್ಷ್ಮಣರುಗಳು ವಿಪುಲಬಲಯುತರವರ್ಗೆ ।
ಕುಜನರೆಮ್ಮಿಂದಪ್ಪ ಸಾಹಾಯಮೇನುಂಟು ।
ಭಜಿಸಿದರ ತಪ್ಪನೆಣಿಸದೆ ಪೊರೆವುದುಂಟಲ್ತೆ ।
ದ್ವಿಜರಾಜನಿಭನೃಪರಿದಂ ತಿಳಿದು ಸಂಕ್ಲೇಶಗೊಳುವುದನುಚಿತಮೆಂದನು ॥ (36)

ಎನಿತು ವಿಪರೀತಗಳನೆಸಗಿದರು ಕರವಿಡಿದು ।
ಜನಪತಿಯು ಕೋಪಿಸಂ ಮತ್ತಾವನಲುಪಿದರು ।
ಮನವಲಿಡನಿದು ತಥ್ಯಮೌರಸಂಗಧಿಕಮೆಂದರಿದಿರ್ಪ ರಘುನಾಥನು ॥
ಇನಸುತನ ಭಯಮೇನು ಜನಿಸಲಮ್ಮದು ನೀನು ।
ಕಿನಿಸಿಂದಮುಳಲೇನು ಬರ್ಪುದಧಿಕ ಕೃಶಾನು ।
ವನುವಿಂದ ತನುತನುತೆಯರಾಂತು ಕಾರ್ಯಂ ಕೆಡಗುಮೆನುತ ಮಾರುತಿ ನುಡಿದನು ॥ (37)

ಎಂದು ಮಾರುತಜ ಪೇಳದಂದಮಂ ಕೇಳಿ ಮಗು ।
ಳೆಂದನಂಗದ ತಾತ ನೀನೆನಗೆ ದಯದಿಂದ ।
ಮುಂದೊರೆದುದುಚಿತಮಾದರು ಸೂರ್ಯಸುತನತುಲವೈರಿ ಮಾತ್ಪಿತಗೆ ಮೊದಲೆ ॥
ಇಂದೆನಗೆ ಯುವರಾಜಪಟ್ಟ ರಘುವೀರನಿಂ ।
ಬಂದುದೊಂದತಿಶಯದ ವ್ಯಥೆಯಾಂತನಿದ ಮನದೊ ।
ಳೊಂದಿಸುತಮೇನಾದರೆಣಿಸಿ ಕೊಲ್ಲದೆ ಮಾಣನೆಂಬುದೇ ದಿಟ ಕಪೀಂದ್ರ ॥ (38)

ಹುಸಿನುಸುಳುಚಾಪಲ್ಯಕ್ರೂರಕಾರ್ಯಗಳಗೆ ।
ಹಸವೂ ಸುಗ್ರೀವನಣ್ಣನಂ ಬಿಲದೊಳಗೆ ।
ಬೆಸರಳಿಸಿ ಬಂದುದಂ ರಘುವೀರನಂ ಪೊಂದಿ ಮತ್ತಗ್ರಜನ ಕೊಂದುವಂ ॥
ಹಸನಾಗಿ ತತ್ಸತಿಯನಾಕ್ರಮಿಸಿಕೊಂಡಿರ್ಪ ।
ಪಸುಘಾತಕೆಗೆ ಧರ್ಮಗುಣಮೆಂತು ಸಂಭವಿಪ್ಪು ।
ದಸುರಗಿಂದಧಿಕಮೊಂದರಿದಿರ್ಲೆನವನಿರ್ಪ ನಿಲಯಕಾಂ ಬರಲಮ್ಮೆನು ॥ (39)

ಕರಿಹಸ್ತಕಲಿತಕಮಲವ ಕಳೆದ ಮಾಳ್ಕೆಯೊಳಾ ।
ಸುರಪಸುತಹಸ್ತಗತಸಿರಿಯು ತಂದಿತ್ತರಘು ।
ವರನ ಮರದುದ ನೀನೇ ಬಲ್ಲೆ ಪಾಪಿಷ್ಟಂ ಕೃತಘ್ನನತಿಚಪಲ ಹೀನಂ ॥
ತರಣಿಸುತ ನಿಷ್ಕರುಣಿಯಾತನೆಡೆಗುಂ ಬಂದು ।
ಪೊರೆವುದೆಂತೊಡಲ ನಿಟ್ಟಿಸಿದ ಮಾತ್ರದೊಳೆನ್ನ ।
ತರಿಯದುಳವನೆ ಮರುಳಾತನವೆ ಕಾಣಾತ ಗರ್ತದೊಳಗೆ ಕೆಡದಪ್ಪುದುಕ್ತವೇ ॥ (40)

ಕ್ರೂರ ಶಠನು ನೃಶಂಸ ಪಾಪದಾಗಾರ ನಾ ।
ದಾರ ಕಾಮುಕ ತರಣಿಸುತನೆಡೆಯಲಾನಲ್ಪ ।
ಸಾರ ನಿಸ್ಸಹಾಯನಣಾಗಳದವೆನೆಂತು ಬಯಲಭ್ರಮೆಯಿಂದಮೇನು ॥
ಧಾರಿಣೀಸುತೆಯ ದೆಸೆಯಿಂದ ಬಂದಡಸಿತು ವಿ ।
ಕಾರಮೀ ಪರ್ವತದಿ ಪ್ರಾಯೋಪವೇಶದಿಂ ।
ಸೂರಿಪನರಸುಗಳೆವಂತೆ ಶ್ರೇಯಸ್ಕರವ ಸಂಪಾದನಂ ಗೈವೆನು ॥ (41)

ಹರುಷದಿಂ ನೀವೆಲ್ಲ ಶ್ರೀರಾಮನೆಡೆಗೈದಿ ।
ಚರಣಾಬ್ಜಗಳಗೆರಗಿ ಕಾರ್ಯಮಂ ಬಿತ್ತರಿಸಿ ।
ತರಣಿತನಯನ ಚಿತ್ತದೊಲವಂತು ತನುಗಳಂ ಸಲಹಿಕೊಳವೇಳ್ಕುಮೆನ್ನ ॥
ಪರಿಯ ಬಿನ್ನೈಸಿ ವಂದನೆಗೈದನೆಂದರುಪಿ ।
ಚರಣಕಭಿನತನಾದನೆಂದು ಸುಗ್ರೀವಗಂ ।
ತರುಣಿರುಮೆತಾರೆಯರಿಗರುಪಿ ಸುಖದಿಂ ಬಾಳ್ವುದೆನುತ ಜವದಿಂ ಪೇಳ್ದನು ॥ (42)

ಬಂದ ಕಾರ್ಯಂ ಪೋಗಿ ಬರಿಗೈಯೊಳಾನು ಕಿ ।
ಷ್ಕಿಂಧೆಗೆಂದಿಗು ಪೋಗೆ ರವಿಸುತನ ಕೈಬಾಧೆ ।
ಗಿಂದವೀ ಪರ್ವತದೊಳಹುದೆ ಲೇಸೆಂದೆನುತ ಪೇಳ್ದು ತಾರೇಯ ಬಳಿಕ ॥
ಛಂದದಿಂ ದರ್ಭೆಗಳ ಪರಪಿ ತನ್ಮಧ್ಯದೊಳ ।
ಗಿಂದಿರೇಶ ಮಹೇಶ ಶ್ರೀರಾಮಚಂದ್ರ ರಘು ।
ನಂದನ ನಮೋಯೆನುತ ಕುಳ್ಳಿರ್ದ ಕಪಿಕಟಕ ಕಳವಳಿಸಿ ಗದ್ಗದಿಸಲು ॥ (43)

ನೋಡಿ ಯುವರಾಜನಿರವಂ ಬಲೀಮುಖರೊಂದು ।
ಗೂಡಿ ಘೋಳೆಂದಳುತ ಸುಗ್ರೀವನಂ ಜರದು ।
ಕೂಡೆ ವಾಲಿಯು ಪೋಗಳ ದಶರಥಮಹಾರಾಯನಣುಗನೈತರಲು ಬನಕೆ ।
ಮೋಡಿಖಳ ಜನಕಜೆಯ ಕದ್ದೊಯ್ಯೆ ರವಿಜನೊಡೆ ।
ಗೂಡಲಾಯಿತೆಲ್ಲರಿಗೆ ಮರಣಕಾರಣಮೆನುತ ।
ಮಾಡಿಕೊಂಡಳಲುತಿರಲಾ ಶೈಲ ಮಾರ್ದನಿಯನಿತ್ತುದತ್ಯದ್ಭುತಮೆನೆ ॥ (44)

ಪರಿಪರಿಯಲಿಳಲಿ ಮೃತ್ಯುದಕಡೊಳ್ನಂದು ಬಂ।
ಧುರದುಃಖದಿಂ ದರ್ಭೆಯಂ ಪರಪಿ ದಕ್ಷಿಣಕೆ।
ಶಿಕವಿಟ್ಟು ಪ್ರಾಙ್ಮುಖದೊಳೆಲ್ಲರುಂ ಮಲಗಿದರ್ ಹಿಂಪಮುಂದೊಂದೆಣಿಸದೆ॥
ನೆರೆಕಲಧ್ವನಿಯಿಂ ಗುಹಾಂತರಾಳದಿ ಸುಪ್ತಿ।
ವೆರದಿರ್ದ ಚಿರಜೀವಿಸಂಪಾತಿಗುಂ ನಿದ್ರೆ।
ಪರಿಯೆ ಮೆಲ್ಲನೆ ಪೊರಟುಬಂದು ನೋಡಿದನಲ್ಲಿ ಮಲಗಿರ್ಪ ಕಪಿವೀರರ॥ (45)
ಚಿರಕಾಲ ಪಸಿದನಾಥನ ತೆರದಿ ಕಡೆಜಿರ್ದೆ।
ಗರಿಯಿಲ್ಲದೆನಗಶನವೃತ್ತಿಯಂ ಕಳ್ಪಿಸಿದು।
ದರರೆ ವಿಧಿ ಹರ್ಷಮಂ ಕೊಡೆದುಳವ್ರುದೆಯೆನುತ್ತ ಸಂತಸಂಗೊಳುತ ನಿಂದು॥
ಮರಣವಾದೊಂದೊಂದು ಕಪಿಯ ದೈನಂದಿನದಿ।
ಚರಿಸಿ ಸುಖದಿಂದಿರ್ಪೆನೆನುತ ಬೇಳದ ಕ್ರೂರ।
ತರಪಕ್ಕಿಯಂ ಕಂಡರಾ ಪ್ಲವಗಸತ್ತಮರ್ ಮನವ ದುಮ್ಮಾನದಿಂದ॥ (46)
ಎನುತ ಶೈಲೋಭಗೃಧ್ರಂ ನುಡಿಯಲಂಗದಂ।
ಹನುಮಂತನೊಡನೆಂದ ಜನಕಜಾಕೃತ್ಯವಡೊ।
ಳನತನಯ ವಾನರರ ಕುಲವ ಶಿಕ್ಷಿಸಲೆಂದು ಗೃಧ್ರತೆಯೊಳೈತಂದನೋ॥
ಘನವಿಪತ್ತಡಸಿತ್ತನ್ಯಾಯಮಾಳ್ದನ ಕಾರ್ಯ।
ವನು ಮಾಡಿ ಪೋಗಾಡಿ ತನುವ ಜಸಮಂ ಪಡೆಯ।
ದಿನತರಣ್ಯಾನೀಕದೊಳಗನಾಯಾಸವಾಗಿ ಪೋಪ್ರುದಾಯ್ತುಕಟೆಂದನು॥ (47)
ಎಂದಿರ್ದರೊಂದು ದಿನ ಪೋದಲ್ಲದಾಗದೇ।
ನೆಂದರೂರ್ಜಿತವಾದ ಕೀರ್ತಿಯಂಗಳಸವಲೆ।
ಬಂದಡವಿಯೋಳ್ ನಾಯಿನರಿಗೆ ತುತ್ತಾಯಿತೆಂಬದೊಂದೆ ಮನದೊಳಗಲೆವುದು॥
ಇಂದೀವರಾಕ್ಷಿ ಜಾನಕಿಗಾಗಿ ದಶಗಳನ।
ಬಂಧುರಪರಾಕ್ರಮಕ್ಕಿದಿರಾಗಿ ಕಾದಿ ಮಡಿ।
ದಂದಾ ಜಟಾಯು ತಿರ್ಯಗ್ಜಂತು ಮುಕ್ತಿಯಂ ಗಳಸಿದಂ ಲೋಕವರಿಯೆ॥ (48)
ಸ್ವಾಮಿಕಾರ್ಯಕೆ ತನುವ ತೆತ್ತಂ ಜಟಾಯು ಮಿಂ।
ದೀ ಮಹೀತಳದೊಳುತ್ತಮಕೀರ್ತಿ ಬಂದೊದಗಿ।
ಸೋಮರವಿಯಿರ್ಪನ್ನ ಶಾಶ್ವತದಿ ಬಾಳ್ದಪಂ ಪದಾರ್ದಡುಂ ಧರೆಯೊಳು॥
ತಾಮಗದಿ ಕಾನನದಿ ಕಾರ್ಯಮೊಳ್ಳನಿತಿಲ್ಲ।
ದೀ ಮಹತ್ಕಷ್ಟದನುಭವದಿಂದ ವ್ಯರ್ಥಮೆನೆ।
ನಾವಮಿಲ್ಲದೆ ಪೋಪ್ರುದಾಯಿತೆಂದು ಮರುಗಿದಂ ಮರುತಸಂಭೂತನೊಡನೆ॥ (49)
ಧರಣಿಪತಿದಶರಥಂ ಕೊಟ್ಟಪರದಿಂ ರಾಮ।
ಧರಣೀಶ ಜನಕೆ ಬರೆ ಪಂಕ್ತಿಕಂಧರ ಬಂದು।
ಧರಣಿಜೆಯ ಕದ್ದೊಯ್ಯೆ ಸುಗ್ರೀವನೊಳು ನೇಹವಾಗೆ ಜಾನಕಿಯನರಸಿ॥
ಬರಲು ಪಾತಾಳ ಬಿಲದೊಳಗೆ ತಿಂಗಳುದಿನಂ।
ಪರಿಪೂರ್ಣವಾಗೆ ಭೂಮಿಜೆಕೆರುಪರಿಯದಾಗೆ।
ಮರಣ ಬಂದೊದಗಿತೀ ಕಪಿಗಳಗೆ ಕೈಕಾಮಹಾತ್ಮೆಯಿಂದೇನೆಂಬೆನು॥ (50)

ಭೂಮಿಯೊಳಗೇಂ ಕೃತಾರ್ಥನೋ ಜಟಾಯುವು ಧಣಿದಿ।
ಭೀಮಬಲರಾವಣನ ಕೂಡೆ ಸೆಣಸುತ್ತಲಿ ಸು।
ತ್ರಾಮ ಸಂತೊಷದೊಳ್ ಭೌತಿಕದ ತನುವುಳಿದು ಕೀರ್ತಿದೇಹವಗಳಿಸಿದಂ॥
ರಾಮಪುರದರಸನಂಘ್ರಿಯುಲಿಮಗೆ ಪ್ರಿಯದಿಂದ।
ನೇಮಿಸಿದ ಕಾರ್ಯಕೊಣ್ಣೆಯು ಬಂದು ದುಷ್ಕೀರ್ತಿ।
ದಾಮನಾದೆನೆನುತ್ತ ಮರುತಾತ್ಮಭವನೊಡನೆ ಬೇಳ್ಪುಮರುಗಿದನಂಗದ॥ (51)

(ಸಂಧಿ 18 ಕ್ಕಂ ಪದ 792.)

## ಹತ್ತೊಂಭತ್ತನೆಯ ಸಂಧಿ

ಸೂಚನೆ॥ ಗೃಧ್ರರಾಜನ ವಚನರಚನೆಯಿಂ ಹರ್ಷನಿರ್।
ನಿದ್ರವಾಗಲು ತೆರಳ ಶಾಖಾಮೃಗಂಗಳು ಬ।
ಲೋದ್ರೇಕ ದರ್ಪದಿಂದೈತಂದು ಕಂಡರಾ ವಾರಾನ್ನಿಧಿಯ ಬೇಗದಿ॥

ಹಿಮಗಿರಿಶನೂಜೆ ಕೇಳ್ ಕಪಿಗಳತಿದುಃಖದಿಂ।
ಕ್ರಮದಿಂದ ಮರುಗುತಿರಲತಿಘೋಷಮದ್ರಿಯಂ।
ಭ್ರಮೆಗೊಳಿಸಲಾ ಜಟಾಯುವು ಮಡಿದನೆಂಬುದಂ ಕೇಳ್ದು ಸಂಪಾತಿಗಾಗ॥
ಮಮತೆ ಪುಟ್ಟಿತು ತಮ್ಮನಳಿದ ಕೇಳಲ್ಕೆನುತ।
ವಿಮಲಮತಿ ಮೆಲ್ಲನೈತಂದು ತಾಂ ಬೆಸಗೊಂಡ।
ನಮಿತಸಂಕ್ಲೇಶದಿಂದಾ ಕಪೀಂದ್ರರ ವಿನಯುತತರಮಧುರವಾಣಿಯಿಂದ॥ (1)

ಭಾನುಕರದಗ್ಧಪಕ್ಷದಿ ಬಿರ್ದನಾ ಜನ।
ಸ್ಥಾನದೊಳಗೆ ಜಟಾಯುವಾ ದಶರಥನಿಂದ।
ಮಾನಿತನದೆಂತಾದಸಮದೊಳು ದಶಶಿರನ ಕೇಣಿ ತಾನೆಂತು ಮಡಿದಂ॥
ಈ ವಿಧಾನವನೆಂತು ತಿಳಿದಿರದನೆನಗೊರೆದು।
ದೀನತೆಯು ಪರಿಯವೇಳ್ಕೆಯು ಪಕ್ಕಗಳಿಂದ।
ಮಾನು ಬರುವಡಶಕ್ತನೆನುತ ಕೂಗಿಟ್ಟನಾ ಸಂಪಾತಿ ಶೈಲಾಗ್ರದೆ॥ (2)

ಬಲುಕಾಲಕಾದುದು ಕನೀಯಸನ ವಾರ್ತೆಶ್ರುತಿ।
ಕಲಿತ್ರಮೆಂದೆನುತಳುತ ಪಲುಬುತಿಹ ಪಕ್ಕಿಯಂ।
ಘಳಲನಿಟ್ಟಿಸಿ ಕಪೀಶ್ವರರೆಲ್ಲ ದಯದಿಂದ ಸಂತೈಸವೇಳ್ಕುಮೆನುತ॥
ಕಲಿಗಳಾಲೋಚನಂ ಗೈದು ಬಂದಾ ಗೃಧ್ರ।
ನಿಳಿಸಿತಂದೊಂದೆಡೆಯಲ್ಲಿಟ್ಟು ನಿಜವೃತ್ತಗಳ।
ಚಳಕದಿಂ ಪೇಳಲನುಗೈದನಾ ವಾಲಿಸುತನಾನಂದಚಿತ್ತದಿಂದ॥ (3)

ಮುತ್ತಯ್ಯರಿಕ್ಷರಾಜನುಮಿರ್ದ ವಾನರಂ।
ಸತ್ವದಿಂ ಮತ್ತಾತನಣುಗರೀರ್ವರು ಖ್ಯಾತಿ।
ವೆತ್ತರೀ ನೆಲದೊಳಗೆ ವಾಲಿಸುಗ್ರೀವರೆಂಬಭಿದಾನ ಕಪಿವರರಿಗೆ॥
ಉತ್ತಮೋತ್ತಮ ಗುಣಗಣಂಗಳಾಲಯನಾ ರ।
ಘೋತ್ತಮಂ ದಂಡಕಾರಣ್ಯಕೈತರೆ ದೈತ್ಯ।
ಮತ್ತಾತನಂಗನೆಯ ಕಳವಿನಿಂ ಕದ್ದೊಯ್ದರಾ ದನುಜನಂ ಕಾಣುತ॥ (4)

ದಶರಥಪ್ರಿಯಮಿತ್ರನಾ ಜಟಾಯುವು ಬಂದು ।
ಪಿಸುಣಖಳನೊಳ್ ಸೆಣಸಿ ಮಡಿದರಾತನ ನೋಡಿ ।
ರಸೆಯರಸ ರಘುವೀರ ಸಂಸ್ಕರಿಸಿ ಕಳುಪಿದಂ ವೈಕುಂಠಮಂದಿರಕ್ಕೆ ॥
ಬಿಸಜಾಕ್ಷ ರಾಮಗೆನ್ನಯ ಪಿತೃವಿನೊಳಗಾಯ್ತು ।
ಸುಸಖಿತ್ವ ಸುಗ್ರೀವಗಾಗಿ ಪಿತನಂ ಕೊಂದು ।
ಸಸೆಕಪಿರಾಜ್ಯಮಂ ಪಾಲಿಸಿದ ಪಟ್ಟಾಭಿಷೇಚನಂ ಗೈದು ಮುದದಿ ॥ (5)

ಧರಣಿಜೆಯನರಸುವಡೆ ನಾಲ್ಕುಕಡೆಗಂ ಕಪೀ ।
ಶ್ವರರ ನಟ್ಟಿದರಾವು ಸುಗ್ರೀವನಾಜ್ಞೆಯಿಂ ।
ಬರುತ ಬೆದಕುತಮವನಿಜಾತೆಯಂ ಕಂಗಾಣದೊಂದು ಬಿಲಮಂ ಪೊಕ್ಕೆವು ।
ಪರಿದುಪೋದುದು ಮಾಸಮಾ ನೆಲದಿ ಕಾಂತೆ ನಿಜ ।
ಕರುಣದಿಂದವನಿಯಂ ಕಾಣಿಸಿದರಿಂದೆಮ್ಮ ।
ದೊರೆಯ ಶಾಸನಕಂಜಿ ಪ್ರಾಯೋಪವೇಶಮಂ ಕೈಕೊಂಡೆವೀ ಗಿರಿಯೊಳು ॥ (6)

ಎಂದ ವಾನರರ ನುಡಿಗೇಳ ಸಂಪಾತಿ ತನು ।
ನೊಂದಳುತಮಿಂತೆಂದ ತಮ್ಮಂ ಜಟಾಯುವಂ ।
ಕೊಂದ ದಶಕಂಧರನ ತರಿದಲ್ಲದೀ ಶೋಕ ಪೋಗದೆನಗಾದರೀಗಾ ॥
ಕುಂದಿಹುದು ಜರೆಯಿಂದ ತನು ಪಕ್ಷಮಿಲ್ಲದತಿ ।
ಮಂದವಾದದು ಗಮನ ವೈರಮಂ ಪೋಗಾಡ ।
ಲಿಂದಶಕ್ತತೆವೆತ್ತೆನೇಗೈವೆನೆನುತಳಳಿ ಪೂರ್ವವೃತ್ತವನೊರೆದನು ॥ (7)

ಪೂರುವದಿ ಪ್ರತ್ಯವಥೆಯವಸರದೊಳಾವೀರ್ವ ।
ರೋರಂತೆ ಸೂರ್ಯಮಂಡಲವ ನಿಟ್ಟಿಪೆವೆಂದು ।
ತೋರಗಮನದೊಳ್ಬೈದೆ ಭಾನುಕರವಹ್ನಿಯಿಂದಾ ಜಟಾಯುವು ಬಳಲಲು ॥
ಕಾರುಣ್ಯದಿಂದ ಪಕ್ಷಗಳಲಾಚ್ಛಾದಿಸಲು ।
ಭಾರಣೆಯ ತಾಕೆಂದ ಗರಿಬೆಂದು ಬೇಗದಿಂ ।
ಧಾರಿಣಿಗೆ ಕೆಡೆದೆವಾವ್ರೋರ್ವರೋರ್ವರ ಕಾಣದಂದಿನಿಂದಿರ್ದೆವೈಸೆ ॥ (8)

ಎಂದು ಸಂಪಾತಿ ಪೇಳ್ದರಂಗದಂ ವಿನಯ ।
ದಿಂದ ಕೇಳದ ಭವದ್ಭ್ರಾತೃ ವೃತ್ತಾಂತಮಂ ।
ಛಂದದಿಂದಾಂ ಪೇಳ್ದೆ ಧರಣೀತನೂಭವೆಯು ಪೋದ ಸರಣಿಯು ತಿಳದಡೆ ॥
ಬಂಧುರಪ್ರೇಮದಿಂದೊರೆದು ಪೊರೆವುದೆನುತ್ತ ।
ಬೃಂದಾರಕೇಂದ್ರಸುತಸುತನು ಬೆಸಗೊಂಡರಾ ।
ನಂದದಿಂ ಪೇಳ್ದನಾ ಸಂಪಾತಿ ಪ್ಲವಗಾಧಿನಾಥರಚ್ಚರಿಗೊಂಬೊಲು ॥ (9)

ಬಲವಿಲ್ಲ ವೃದ್ಧಗೃಧ್ರಂ ಪಕ್ಕಮೆರಡಿಲ್ಲ ।
ಸುಲಭಮೆನ್ನಿಂದಪ್ಪದೇನಾದಡಂ ಮಹಾ ।
ಬಲರಾಘವೇಶಕಾರ್ಯಕ್ಕೆ ವಾಕ್ಸಹಾಯವ ಗೈವೆ ತೋರ್ದನಿತರೊಳಗೆ ॥
ಜಲಧಿಮಥನದ ತ್ರಿವಿಕ್ರಮನಾದ ಹರಿಜನುಂ ।
ಜಲನಿಧಿಯು ಲೋಕಂಗಳೆಲ್ಲಮಂ ಕಂಡಿರ್ದ ।
ಬಲು ಚಿರಂತನದೇಹ ಜೀರ್ಣವಾಗಿರ್ಪುದೆನುತೊರೆದ ಸಂಪಾತಿ ಮುದದಿ । (10)

ಕಾಳಮೇಘದ ಪೊರೆಯು ಪೊಳೆವ ಸೌಧಾಮಿನಿಯು ।
ಲೀಲೆಯಂ ಶ್ರೀರಾಮಸೌಮಿತ್ರಿಯರ ಪೆಸರ ।
ನಾಲಸ್ಯಮಿಲ್ಲದಾಲಾಪಿಸುತ ಕೊಟ್ಟಿರ್ದ ಭೂಷಣವ ಕೆಳಗಿಡುತಲಿ ॥
ಮೇಲೆ ಪುರಪಥವಿಡಿದು ಪೋಪ ದಶಗಳನೆಡೆಯು ।
ಜೋಲುತಳುತ್ತೈದುತಿರೆ ಕಂಡೆ ದಶವದನೈಯ್ಯಳು ।
ಪ್ಪಾಲಯವನವನವನಕುರುಪಂ ಕುಲೋದ್ಭವಗಳಂ ಪೇಳ್ವೆನಾಲಿಸು ಕಪೀಶ ॥ (11)
ದ್ವಿಜಕುಲೋತ್ತಮ ವಿಶ್ರವಸುತನಯನವಗೆ ಪೂ ।
ರ್ವಜನು ವೈಶ್ರವಣ ಲಂಕಾದ್ವೀಪವಾಸ ।
ವಿಜಯನೆಂದೆನಿಸಿ ರಾವಣನಿರ್ಪ ಮೂಲೋಕವೀರರಂ ಗಣನೆಗೊಳ್ಳದೆ ॥
ಅಜನಿಗೋಸುಗ ವಿಶ್ವಕರ್ಮ ನಿರ್ಮಿತಗೈದು ।
ಭಜನೆಯಿಂ ಪೌಲಸ್ತ್ಯ ಕೊಂಡನಾತನ ನಾಡ ।
ಕುಜನರಾವಣನಾಳ್ವ ನಗರ ದೇವಪುರಕ್ಕಿಂ ಮಿಗಿಲೆನಿಸಿರ್ದುದು ॥ (12)
ಬಳಸಿಹುದು ಲವಣಾಂಬುರಾಶಿ ತಡಿಯಂ ನೀಳ ।
ದಳತೆ ಶತಯೋಜನಂ ರತುನಮಯ ರಕ್ಕಸರ ।
ಬಳಗದಾಕಾರಮೆಂದೆನಿಸಿರ್ಪುದಾ ನಗರ ಸುರಪತಿಗಸಾಧ್ಯಮೈಸೆ ॥
ಇಳೆಯ ಸುತೆ ಲಂಕೆಯೊಳಗಿರ್ಪಳೆಂಬುದ ನಾನು ।
ತಿಳಿದಿರ್ಪೆ ತಾನಿದುವೆ ಸತ್ಯ ಪ್ಲವಗೇಶರಾ ।
ಜಲನಿಧಿಯ ವೇಗದಿಂ ದಾಂಟಿ ನೋಡಿದಡವನಿಸುತೆಯಂ ಕಂಗೆಸೆವಳನಘರಾ ॥ (13)
ಜ್ಞಾನದೃಷ್ಟಿಯೊಳಾನು ತಿಳಿದಿರ್ಪೆ ಲಂಕೆಯೊಳು ।
ಜಾನಕಿಯನಿರ್ಪಕೆ ಸಂದೇಗವಿಲ್ಲವೆಂತೆಂದ ।
ರಾನೆರೆವೆ ಪ್ರಥಮ ಪದವಿಯು ಕಳಿಂಗಾದಿಗಳಿಗೌಧಾನ್ಯ ಜೀವನಗಳು ॥
ಮಾನನಿಧಿಯೆರಡನೆಯ ಪಥವು ಬಲಿಭೋಜನಗ ।
ಳಾನಂದಕರಮೆನಿಪ್ಪುದೈ ಕ್ರೌಂಚಭಾಸಗಳ ।
ನೂನಪಥ ಮೂರನೆಯದಾ ಸೇನಪಕ್ಷಿಗಳ ಸರಣಿ ನಾಲ್ಕನೆಯದೈಸೆ ॥ (14)
ಪದ್ದುಗಳಗೈದನೆಯ ಪಂಥಾನಮಾರನೆಯ ।
ಪದ್ಧತಿಯು ಮುದ್ದಂಚೆಗಳದೇಳನೆಯ ಮಾರ್ಗ ।
ಮುದ್ಧತಪರಾಕ್ರಮಗರುತ್ಮಂತನದು ಗಗನಗಮನಿಗಳಿಗಿದು ಸಿದ್ಧವು ॥
ಯುದ್ಧನೆಲೆಕಿನ್ನೂರು ಯೋಜನಂ ಕಾಣ್ಬುಡುಗ ।
ಪದ್ದುಗಳ ಪದ್ಧತಿಯು ಲವಣವಾರಾಸಿಯಂ ।
ಬುದ್ಧಿದನ್ನರಿದು ದಾಂಟಿದರೆ ಜಾನಕಿ ನಿನಗೆ ತೋರ್ದಪಳು ಕಪಿಲಲಾಮ ॥ (15)
ತಡಿಯಿಂದ ನೂರು ಯೋಜನದಗಲಮಂ ದಾಂಟಿ ।
ಲೊಡನೆ ಪಟ್ಟಣಮೆಸೆವುದೊಳಪೊಕ್ಕು ನೋಡಿದರೆ ।
ಪೊಡವಿಯಣುಗಿಯ ಕಾಣ್ಬರಿದಕೆ ಸಂದೇಗವಿಲ್ಲವಿದು ನನ್ನಿಯೆಂದರಿವುದು ॥
ಕಡಲದಾಂಟುವರುಪಾಯಗಳನಾಳೋಚಿಸುತ ।
ನೊಡನೆ ಪತಿಕಾರ್ಯಮಂ ಸಾಧಿಪುದು ನೀವೆನುತ ।
ನುಡಿದನಾ ಸಂಪಾತಿ ಸಕಲ ಕಪಿನಾಯಕರು ಸಂತಸಂಗೊಳುವಂದದಿ ॥ (16)

ಕರದೊಳ್ಳೈದರೆನ್ನ ನೀರಧಿಯೆಡೆಗೆ ಸ್ವರ್ಗತೆಗೆ ।
ವಿರಚಿಸುವೆನುದಕವೆನಲ್ಕೆ ವಾನರರಲ್ಲ ।
ತ್ವರಿತದಿಂ ಕೊಂಡೊಯ್ಯಲಾಗಲಾ ಸಂಪಾತಿ ಸ್ನಾನವಮಂ ರಚಿಸಿ ಮನದೆ ॥
ಸ್ಮರಿಸುತ ಜಟಾಯುವಿಗೆ ಜಲವಿತ್ತುರಾತನಂ ।
ಕರತಂದು ಗಿರಿಯಗ್ರದೊಳಗಿಟ್ಟು ಕೇಳದರ್ ।
ಧರಣಿಜೆಯನ್ನೊಯ್ದುದಂ ನಿನಗೆ ಪೇಳ್ವವರಾರು ತಿಳುಪವೇಳ್ಕೆಮಗೆಂದರು ॥ (17)

ತರಣಿಕಿರಣಾದಿಗರಿಗಳುರಿದು ಮತ್ತೀ ಶೈಲ ।
ಶಿರದಿ ಕೆಡೆಯಲ್ ವೃತಪ್ರಾಯದಿಂ ಕೆಲವು ದಿನ ।
ಮರದು ತನುಭಾವಮಂ ಮೂಂಧತೆಯೊಳಂದಾಮುದೆಚ್ಚರಿಕೆ ಮೇಣ್ದೇಹಕೆ ॥
ತರುಣಿಂ ಸುಪಾರ್ಶ್ವನೆನ್ನರಸಿ ಬಂದಂ ನೋಡಿ ।
ಮರುಗಿ ನಿತ್ಯಾಹಾರವಮಂ ಕೊಟ್ಟು ಶರೀರ ।
ಭರಣೆ ಗೈವುತಮಿರ್ದ ಮಗನೊಂದುದಿನ ಚರಿಸುತಿರ್ದ ನೀರಧಿಯೆಡೆಯೊಳು ॥

ಆ ಸಮಯದೊಳು ಚಂದ್ರರೇಖೆಯುಂ ಪಿಡಿದು ಬರು । (18)
ವಾ ಸಿಂಹಿಕಾಸುತನ ತೆರದಿ ವಿಂಶತಿಕರಗ ।
ಳಾಸುರಂ ಧರಣಿಜೆಯನಂಕದೇಶದಿ ತಳೆದು ಬಂದನಂಬುಧಿಯ ಪೊರೆಗೆ ॥
ಲೇಸೆನಿಪ ನುತಿಗಳಂದನುನಯದಿ ಮಾರ್ಗಮಂ ।
ಬೇಸರದೆ ಯಾಚಿಸುತಮಾಗಸದ ಗತಿಯಿಂದ ।
ಮಾ ಸುವಾಸಿನಿಸಹಿತ ಲಂಕಾಪುರವ ಪೊಕ್ಕನೇನೊಂದನೆಣಿಸದಾಗಾ ॥ (19)

ವಿನಯದಿಂ ಯಾಚಿಪರ ವಂದಿಸಲಸಾಧ್ಯಮಿಾ ।
ವನಧಿಮೇಖಲೆಯೊಳೆಂದರಿತು ಸುತನೈತಂದು ।
ಯೆನಗೊರೆದ ಬಳಿಕಲಾನಿಟ್ಟಿಸಿದೆ ರಾವಣನ ಬನದಿ ವೈದೇಹಿಯನ್ನು ॥
ವನನಿಧಿಯನುತ್ತರಿಸಿ ಪೋದರಾ ಪಟ್ಟಣದಿ ।
ಜನಕಸುತೆಯಂ ಕಂಡು ಹರುಷದಿಂ ಬೀಳ್ಕೊಂಡು ।
ಮನದೊಲವಿನಿಂದೈದಲಹುದೆಂದು ಸಂತೈಸಿ ಪೇಳ್ದನಾ ಸಂಪಾತಿಯು ॥ (20)

ಯೆನ್ನ ವೃತ್ತಾಂತವಮಂ ನಿಮಗಾನು ವಿಸ್ತರದಿ ।
ಬಿನ್ನವಿಪೆ ನೀಕಬ್ಬಮೇಕಾಗ್ರಬುದ್ಧಿಯಿಂ ।
ಚೆನ್ನಾಗಿ ಲಾಲಿಸುದಂಬುಜಾನನೆಯಿರ್ದ ನೆಲೆಯ ತತ್ವದೊಳರುಪುವೆಂ ॥
ಮುನ್ನನಾಂ ಗರಿಬೆಂದು ವಿಂಧ್ಯಶಿಖರಿಗೆ ಕೆಡೆದು ।
ಬಿನ್ನತೆಯೊಳೈದಾರು ದಿವಸ ವೈಮರೆದಿರ್ದ ।
ರನ್ನೆಗಂ ಪೊರಬ್ಬಬಲದೊಳೆಚ್ಚರವಾಗಲಿಟ್ಟಿಸಿದೆ ನಾಲ್ದೆಸೆಗಳಾ ॥ (21)

ನಾನಾಪರಿಯ ನೋಡಲೆನಗೆ ಕಾಣಿಸದಾದು ।
ದೇನಾದರೊಂದು ವಸ್ತುವು ಭಯದಲಳುತಿರ್ದ ।
ರಾ ನೆಲದಿ ಕೆಲಕಾಲಕರಿವಾಯ್ತು ಲವಣಾಬ್ಧಿಯನು ತನ್ನ ಮಾನಸಕ್ಕೆ ॥
ಯೇನೆಂಬೆ ಪಕ್ಷಿಗಣವೃಕ್ಷಕಂಧರಕಲಿತ ।
ವಿಾ ನಗಾಗ್ರಂ ವಿಂಧ್ಯಮೆಂದರಿತೆ ಸಂಚರಿಸೆ ।
ಜ್ಞಾನಪಕ್ಷಗಳಂದ ತೀರದಳಲುತಮಿರ್ದನೊಂದು ಮರದೆಡೆಯೊಳಳುತ ॥ (22)

ಪರಮ ಪುಣ್ಯಾಶ್ರಮ ನಿಶಾಕರಮಹಾಮುನಿಯು ।
ಕರುಣಾಮಂದಿರಮಿರ್ದುದಾ ಮಹಾಮೌನಿ ತಾ ।
ಸುರರ ನಗರಿಗೆ ಪೋಗಿ ಪಾಕಶಾಸನನಿರವ ನೋಡಿ ಬಹೆನೆಂದರುಗಲು ॥
ಮರದ ನೆಳಲೊಳಗಷ್ಟಸಾಹಸ್ರ ವತ್ಸರಂ ।
ನರಳುತಾಂ ಕಡದಿರ್ದರವ್ನೆಗಂ ತಾಪಸಂ ।
ಧರಣಿಯುಂ ನಿಟ್ಟುಸುವರೈತಂದು ಮೋದದಿಂದಾಶ್ರಮದೊಳೊಪ್ಪಿರ್ದನು ॥ (23)
ಬಲುಕಾಲ ಕಷ್ಟದಿಂದಾ ಪುಣ್ಯಪುರುಷನಂ ।
ಗೆಲವಿಂದ ಮೆಚ್ಚಿಸುವೆನೆನುತ ಪೊಗಳುತ ಬಂದು ।
ಫಲಮೂಲ ಸೀತಜಳಪೂರಿತದ ಸರಸಿಗಳ ಕಂಡೆನಾಶ್ರಮದೆಡೆಯಲಿ ॥
ಲಲಿತಸೌರಭಕಲಿತಮರುತ ಸುಳಿಯಲ್ಕಾಯ್ತು ।
ಬಲಮೆನಗೆ ಮೆಲ್ಲನಾ ತಾಪಸನ ಕಾಣ್ಬೆನೆಂ ।
ದೊಲವಿಂದ ಬನವನಾರಿದೆನಲ್ಲಿ ಕೆಲವುದಿನ ಚೇತನಂದಳೆದೆನಯ್ಯ ॥ (24)
ಭಗವಂತ ಮೌನಿತಾಂ ಬರಲು ಸ್ನಾನಕ್ಕೆನುತ ।
ಬಗೆಬಗೆಯ ಮೃಗಪಕ್ಷಿ ಸಂದೋಹ ಪಿಂದೈದ ।
ಲಗಣಿತದ ದಾನಿಯುಂ ಜನರು ಕಿವಿದೈತಪ್ಪ ತೆರದೊಳಿರಲಾ ಮೌನಿಯು ॥
ಮಿಗೆಹರ್ಷದಿಂ ಬರುತ ಕಂಡೆ ತರುನೆಳಲೊಳಗೆ ।
ಚಿಗಿದ ಪಕ್ಕಗಳಿಂದ ಬಿದ್ದಿರ್ದ ಗೃಧ್ರನಂ ।
ದೊಗುಮಿಗೆಯ ಕರುಣದಿಂ ನಿಂದು ನಿಟ್ಟಿಸಿದನರೆನಿಮಿಷಮೆನ್ನಂ ಪ್ರಿಯದೊಳು ॥ (25)
ಪದುರ್ಗಳ ದೊರೆಗಳೀರ್ವರು ಮರುತಜೀವಿಗಳ ।
ತ್ಯುದ್ಧತಪರಾಕ್ರಮಿಗಳಸುರಸುರರಂ ಗಣಿಸ ।
ದಿರ್ದ ಸಂಪಾತಿಯುಂಜಟಾಯುಮೆನೆ ನಾಮಗಳನಾಂತು ಮನುಜಾಕೃತಿಯೊಳು ॥
ಮುದ್ದಾಗಿ ವಂದನಂ ಗೈದಿರಲೆ ನೀನೋರ್ವ ।
ನಿದ್ದವೆ ಕನೀಯನೇನಾದ ರುಜೆಯಿಂದೇಕೆ ।
ದಗ್ಧಪಕ್ಷಗಳಾದವೆನುತ ಬೆಸಗೊಂಡರಾಂ ಮುನಿಗೆ ವಿಜ್ಞಾಪಿಸಿದೆನು ॥ (26)
ದೇವ ಕೇಳ್ ಜಿನ್ನವಿಸೆ ನಾಚುತಿದೆ ಮನುಕರಣ ।
ದಾವಾನಳದಿ ಬೆಂದು ಕಳವಳದಿ ನಾಚಿಸುವ ।
ತಾವಲ್ಲವಿದೆಯಾದರನಿತಿನಿತು ನಿಜಶಕ್ತಿಯುಳ್ಳನಿತ ಬಿನ್ನವಿಪೆನು ॥
ನಾವೀರ್ವರುಂ ರಜತಗಿರಿಯೊಳಗೆ ಹರನೆಡೆಯ ।
ಕೋವಿದ ಪ್ರೌಢಿಯುಂ ಪಣಬಂಧನಂ ಗೈದು ।
ದೇವಭಾಸ್ಕರನೊಡನೆ ಚರಮಗಿರಿ ಪರಿಯಂತ ಪೋಗಿಬರ್ಪೆವೆನುತ್ತಲೆ ॥ (27)
ನಡೆದೆವಾಗಸಕಡರಿ ರವಿಮಂಡಲದ ಪೊರೆಗೆ ।
ನುಡಿಸುತಿಹ ವೀಣೆಗಳ ಪಾಡುತಿಹ ಗಾನಗಳ'
ನೊಡನೆ ಕೊಂಡಾಡುತಿಹ ಬ್ರಹ್ಮಘೋಷಂಗಳಂ ದೇವತಾನಾಟ್ಯಗಳನು ॥
ಸಡಗರದಿ ನೋಡುತ್ತಮಾದಿತ್ಯಪಥವಿಡಿದು ।
ನಡೆದು ಪುನರಪಿ ನೋಡೆ ಕಂಗಳಗೆ ತೋರ್ದುದೀ ।
ಕಡಲು ಭೂಮಿಗೆ ಬಿಟ್ಟ ಸೂತ್ರಮೆನೆ ಕುಲಗಿರಿಗಳೆಲ್ಲ ಕಿರಿಗಲ್ಲಾದವು ॥ (28)

ಝಳ ಬೆರ್ಚಿತ್ರೀರ್ವರಿಗೆ ಭಾಸ್ಕರನ ಕರಣದು ।
ಜ್ವಳ ಬೇಗೆಯಿಂದ ಕಳವಳಸಿ ಮೂರ್ಛೆಯು ಕವಿಯೆ ।
ವಿಳಯಾಂಧಕತಿಭಯಂ ಮುಸುಕಿತೀರ್ವರನೊಂದೆಪರಿಯಾಗಿ ಶಕ್ತಿಗುಂದಿ ॥
ತಿಳಿಯದಾದುದು ಪೂರ್ವದಕ್ಷಿಣೋತ್ತರಗಳು ।
ತೊಳಲುತಿರೆ ಭೂಸನ್ನಿಕಾಶ ಭಾಸ್ಕರಬಿಂಬ ।
ಕಳೆಯಿಂದ ಲಕ್ಕಯೊಜನದಗಲ ಕಂಗೆಸೆದುದವಸರದೊಳೇನೆಂಬೆನು ॥ (29)

ಗರಿಗಳೆಲ್ಲವು ಬೆಂದರಾ ಜಟಾಯುವಿಗಾನು ।
ಮರೆಗೈದೆ ಪಕ್ಕಗಳನುರಿದವಾ ಕಿರಣದಿಂ ।
ದುರುಳದೆವು ಭೂತಳಕೆ ತಮ್ಮನೇನಾದನೋ ದೇಹವೆಲ್ಲಿಗೆ ಪೋದುದೊ ॥
ಅರಿಯದಾದೆನು ಮೂರ್ಛೆಯಿಂದವೈದಾರು ದಿನ ।
ಮರೆದಿರ್ದವೇನೊಂದನರಿಯದೆ ಮಹಾಶೈಲ ।
ಶಿರಮೆನುತವೆಂಟು ದಿನಕಂ ತಿಳದೆನೊಡನೆ ವಿಜ್ಞಾಪಿಸಿದೆನು ॥ (30)

ಕೇಳ ವಿಸ್ಮಿತನಾಗುತಾ ಮುನಿಯುರೆನಿಪುಷ ।
ತಾಳದಂ ಮೌನವಂ ದಿವ್ಯನೇತ್ರಗಳಂ ನಿ- ।
ರಾಳಮತಿಯಿಂದರಿದ ಮುಂದಪ್ಪ ಕಜ್ಜಗಳ ನಿಜತಪೋಮಹಿಮೆಯಿಂದ ॥
ಬೇಳದಂ ಪ್ರಿಯದಿಂದ ಸಂತಾಪಗೊಳಲೇಕೆ ।
ಕಾಳಾದುದೆಲ್ಲ ಸುಖಕಾರಣವುದಂ ಬೇಳ್ವೆ ।
ಕೇಳು ಚಂಚಲಮುಳದೆನುತ್ತ ಬಿತ್ತರಿಸಿದಂ ಮುನಿಪ ಕೃಪೆಯಿಂದೆನ್ನೊಳು ॥ (31)

ಧರಣಿಪರ ಮಕುಟಮಣಿ ದಶರಥಮಹಾರಾಜ ।
ನರಸೆನಿಪನಾತಗುಂ ಪಿರಿಯಮಗನೆರಡನೆಯ ।
ತರುಣಲಕ್ಷ್ಮಣವಿದೇಹಾತ್ಮಜೆಯು ಸಹಿತವಾ ಪಿತೃವಚನವಿಡಿದು ಬನಕೆ ॥
ಬರುವರು ಜನಸ್ಥಾನದೆಡೆಯೊಳುಂ ರಾವಣಂ ॥
ಧರಣಿಜೆಯ ಕದ್ದೊಯ್ದು ಪರಿಪರಿಯ ಉಪಚರಿಪ ।
ನರಸಿ ಕೈಕೊಳ್ಳದಿರಲನಿತರೊಳು ವಾಸವಂ ತಿಳದೀವ ಪರಮಾನ್ನವುಂ । (32)

ಸುರರಿಗತಿದುರ್ಲಭವ ಪರಮಾನ್ನಮಿಂದ್ರನಿಂ ।
ಬರಲರಿತು ಸೀತೆಯುದ ಪಿಡಿದಗ್ರಭಾಗವುಂ ।
ಧರಣಿಯೊಳಗಿಡಲದು ಶ್ರೀರಾಮಗರ್ಪಿತಮದಾಗಲೆಂದೊರೆವಳೊಲಿದು ॥
ಪರಮ ಪುರುಷನ ಕೃಪೆಯೊಳಾಗಲಾನಂದಕರ ।
ಧರಣಿಸುತೆಯಂದಿನಿಂ ಪಸಿವುನೀರಡಿಕೆಗಳ ।
ಪರಿದು ಸುಖದಿಂದಿರ್ಪಳರಸನಂ ಕಾಣ್ಬನ್ನ ಭೋಜನಂ ಗೈದಂದದಿ ॥ (33)

ದೇವತೋಷಣ ವ್ಯರ್ಥವಾಗದಲೆ ಭೂತಳದಿ ।
ದೇವರಾಮಂಗಿತ್ತ ಪಾಯಸದ ಮಹಿಮೆಯಂ ।
ಪಾವನಿತನಾವಮಾಮೃತಸ್ವಾದನೆಯೊಳಾಗಲಾಕೆಗಂ ಸಂತುಷ್ಟಿಯು ॥
ಆ ವಸುಮತೀಯರಸನೈತಂದು ಪ್ಲವಗಪತಿ ।
ಗೀವನಭಯುವ ವಾಲಿಯ ಕೊಂದು ಜಾನಕೀ ।
ದೇವಿಯನ್ನರಸುವಡೆ ಕಳುಪುವರು ಕಪಿಬಲವ ಚರರಿಲ್ಲಿಗೈತಪ್ಪರು ॥ (34)

ಸೀತೆಯಂ ಕಾಣದವರಳಲುತಿರೆ ನೀಂ ಬೇಳ ।
ಶೀತಾಂಶುಮುಖಿಯಿರ್ಪ ನೆಲೆಯು ತತ್ವದಿ ತೋರಿ ।
ದೂತರಂ ಸಂತಸಂ ಗೊಳಸಲವರರುಪುವರು ರಘುಪತಿಯ ಮಹಿಮೆಗಳನು ॥
ಪಾತಕಂ ಪರಿದುಪೋಗಿರ್ಪ ಪಕ್ಷಗಳೆರಡು ।
ಜಾತಂಗಳಾದಪವು ನಿನಗೆನುತ ಮುನಿಯೊರೆದ ।
ವಾತಸಂಗೀಕರಿಸವೇಳ್ಕುದುದನಿತರೋಳ್ ಮುನಿವೇಳ್ದನತಿವಿನಯದಿ ॥ (35)
ಎನ್ನಯ ತಪೋಬಲದೊಳುತ್ತಮಂ ಕೃಪೆಯಿಂದ ।
ಮುನ್ನಿನಂದದಿ ಪಕ್ಷಬಲತೇಜಗಳ ದೇವ ।
ರನ್ನಸಂಪ್ರಿಯ ಸೇವೆಯಿಂದ ತನುಸಾರ್ಥಿಕ್ಯಮೆನಿಸಲೆಂದಾನೊರೆಸೆನು ॥
ಇನ್ನೊಂದ ಯೋಚಿಸದೆ ಕಪಿದೂತರೈತಪ್ಪ ।
ಸನ್ನಾಹಮಂ ನೋಡುತಿಹುದೆನುತಮುಪಚರಿಸು ।
ತನ್ನನಾ ಮುನಿವರಂ ಪೊಕ್ಕ ತನ್ನಾಶ್ರಮವನಾನಂದಸಂದೋಹದಿ ॥ (36)
ಅಂದಿನಿಂದಾನು ನೀವೈತಪ್ಪ ಮಾರ್ಗಮಂ ।
ಛಂದದಿಂ ದಿಟ್ಟಿಸುತಮಿರಲಾದುದಾ ವಚನ ।
ಸಂದೋಹ ಪಲಬಗೆದು ನಿಮ್ಮಮುಖದಿಂ ಕೇಳ್ವೆ ಶ್ರೀರಾಮ ಚರಿತೆಗಳನು ॥
ಬಂದಪವು ಪಕ್ಷಂಗಳೆನಗೆ ನೋಡುತಮಿರುವ ।
ದೆಂದರಾ ವಾರ್ತೆಗಚ್ಚರಿಗೊಂಡು ಕಪಿವೀರ ।
ಬೃಂದ ನೋಡುತಮಿರ್ದರನಿತರೊಳು ಮೂಡಿದವು ಗರಿಗಳಾ ಪರ್ದಿಗಾಗ ॥ (37)
ಕುರುಲಿಂದ ದಳಗಳನೆ ಪೋಳಿಯೋ ಮುಂಬರಿದು ।
ಗರಿಯಾಗಿ ಪಕ್ಷಂಗಳೆರಡು ಸಂಭವಿಸಲ್ಕೆ ।
ಮಿರವ ಜವ್ವನಕಾಲದುರಭರಂ ಕೈಸಾರಲಾ ಗೃಧ್ರರಾಜ ನುಡಿದಂ ।
ಪರಮಮುನಿ ನುಡಿದ ನುಡಿಗಿರವ ನಿಟ್ಟಿಪುದು ಶ್ರೀ ।
ಹರಿಯ ಕೃಪೆಯಂ ನೋಳ್ಪುದೆನುತೊರೆವುತಾನಂದ ।
ಭರಿತನಾಗುತ ಗರಿಗಳಂ ಕೊಡಪಿ ತಿರುಗಿದಂ ಕಪಿವರರ ಮುಂಗಡೆಯೊಳು ॥ (38)
ಎಂದಿಗೈದಿದ ಪಕ್ಷವೆನಗೆ ಬಂದವು ನೋಡಿ ।
ಬೃಂದಾರಕೇಂದ್ರನುತ ರಾಘವನ ಸನ್ಮಹಿಮೆ ।
ಯಿಂದೆನುತಮೊರೆದು ಮಗುಳಿಂತೆ ಕಪಿವೀರರೊಳು ಸಂಪಾತಿ ವಹಿಲದಿಂದ ॥
ಎಂದಿಗಾದರು ರಘೋತ್ತಮನ ಪದಪದ್ಮಗಳ ।
ಪೊಂದಿದರಿಗೆಡರುಂಟೆ ಪೋದ ಪಕ್ಕಗಳೆನಗೆ ।
ಬಂದುದಂ ದೃಷ್ಟಾಂತಮಾಗಿ ತಿಳಿದಾನಂದಗೊಳುವುದೈ ನೀವೆಂದನು ॥ (39)
ರಾಮಸಂಪ್ರಧ್ಯಾನಗೈದರಿಗೆ ಸೌಖ್ಯಗಳ ।
ಸ್ತೋಮ ಸಂಭವಮಹುದೆನಲ್ಕೆ ತಚ್ಚರರಿಂಗೆ ।
ತಾಮಸೀಚರಕೆನಿತು ಕಜ್ಜಮೆನಿತುಂಟವನ ಜವದಿಂದ ನೀವೈದುತ ॥
ಭೂಮಿಜೆಯ ಕಂಡು ಕುರುಪಿಡಿದೈದವೇಳ್ಕೆಂದು ।
ಪ್ರೇಮದಿಂ ಪೇಳ ಬೀಳ್ಕೊಂಡಾಗ ಗೃಧ್ರನೃಪ ।
ರಾಮನಾಮವ ಜಪಿಸುತಂಬರಕೆ ಪಾರಲಾಗಖಿಲ ಜನಮಚ್ಚರಿಗೊಳ್ ॥ (40)

ಸಂಪಾತಿವೇಳ್ದ ವಚನಗಳಿಂದ ಕಪಿಗಳುಂ ।
ಸೊಂಪಾಂತು ಗರ್ಜಿಸಿದರಖಿಲ ಲೋಕಂ ನಡುಗೆ ।
ಮುಂಪಾಸ್ವಗಮೆನುತ್ತಮತಿವೀರತ್ವನದಿಂದಪೈ್ದಿ ಮತ್ತಾ ವಾರ್ಧಿಯುಂ ॥
ತುಂಪಾದ ಸುಚ್ಛಾಯದೊಳು ಕುಳಿತು ಕಲ್ಲೋಲ ।
ಗುಂಪುಗಳ ನಿಟ್ಟಿಸುತವಾಶ್ಚರ್ಯಗೊಳುತಿರ್ದ ।
ರಿಂಪಿನಿಂ ಶ್ರೀರಾಮಪುರದರಸನಂಘ್ರಿಗಳ ಮಹಿಮೆಗಳ ನೆನೆದುನೆನೆದು ॥ (41)

(ಸಂಧಿ 19 ಕ್ಕಂ ಪದ 834.)

## ಇಪ್ಪತ್ತನೆಯ ಸಂಧಿ.

ಸೂಚನೆ ॥ ವಾರಧಿಯನುತ್ತರಿಸಲಂಭೋಜಸಂಭವಕು ।
ಮಾರ ನುತಿಸಲು ಹರುಷಗೊಂಡು ಸಂತಸದಿಂದ ।
ವೀರಮಾರುತಿ ಮಹೇಂದ್ರಾದ್ರಿಯುಡರಿದನಖಿಲ ದೇವತಾನೀಕಯು ನಲಿಯೆ ॥

ಪದ್ಯ ॥ ರಾಜ ಹಸ್ತಾಗ್ರಹೋತ್ರವವನಾರ್ಜಿಸಿ ವಿಭವ ।
ರಾಜಿಸುವ ಶ್ರೀನಿವಾಸಸ್ಥಾನವೆಂದೆನಿಸಿ ।
ರಾಜರಾಜಪ್ರಮುಖರೈತಂದು ಸೇವಿಸುವ ಚಕ್ರವರ್ತಿತ್ವಮಾಂತು ॥
ಓಜೆಯಿಂದ ಮಹೇಂದ್ರಪದವಿಯುಂ ಮಿರ್ದ ಸಂ ।
ರಾಜಿಸುವ ಸರ್ವತೋಮುಖಗಿರಿಯೊಳಂದಬ್ಧಿ ।
ರಾಜ ಕಂಗೆಸೆದನಾ ಕಪಿಸಾರ್ವಭೌಮರಿಂಗಗಜೆ ಕೇಳಾಕ್ಷಣದೊಳು ॥ (1)
ಬಾಡಬದ ಪಾನಶಾಲೆಯೊ ನವೀನವಗಳೋಲಿ ।
ದಾಡುವಾಲಯವೊ ಲಕ್ಷ್ಮೀಜನ್ಮಮಂದಿರವೊ ।
ಬೀಡಾರವೊ ವರುಣರಾಜಂಗೆ ದೇವತಾಸಮುದಯಕ್ಕಿದು ಸತ್ರವೊ ॥
ನೋಡಲು ಗ್ರಹಂಗಳಿಗೆ ಮಜ್ಜನದ ಮನೆಯೊ ಸಿರಿ ।
ನಾಡೊಡೆಯನಾರಾಯಣಂಗೆ ಶಯ್ಯಾಗೃಹವೊ ।
ಬೇಡಿದೈಶ್ವರ್ಯ್ಯವಿತ್ತರಂಗಿತವ ಕಲ್ಪತರುವೆನಿಪ್ಪುದಧಿಯ ಕಂಡರು ॥ (2)
ತರಣಿಯುತನಾಗಿ ಚಂದ್ರೋಲ್ಲಾಸಕರ ಚಪಲೆ ।
ಗಿರವೆನಿಸಿ ಸ್ಥಿರಸುಪ್ರಸಾದ ರಸವಿದ್ರುಮಾ ।
ಕರಮೆನಿಸುತಂ ಜನದ ಸಮುದಯೋಲ್ಲಾಸದಿಂ ಮುಕ್ತಾವಿಹಾರವಾಗಿ ॥
ವರವಿಕ್ರಮಾದಾರವಾಗಿ ಲಾವಣ್ಯಾ ಭವ ।
ದರೆ ಪುಣ್ಯಜನಸೇವ್ಯವಾಗಿ ಬಾಡಬಭರಣ ।
ಶರಧಿಯಾಶ್ಚರ್ಯ ನಿರವಧಿಯೆನಿಸಿ ತೋರ್ದುದಾ ಕಪಿಸಾರ್ವಭೌಮರಿಂಗೆ ॥ (3)
ಗುರುಚರಣಕರುಣದಿಂವನಿಮಿಷೋಪಾಸ್ತಿಯೊಳ್ ।
ಬೆರದಾ ತ್ರಿಕೂಟವ ಸಮುದ್ರತೆಯನಾಂತು ಶಂ ।
ಕರದ ಮೃಡಪರಿಪೂರ್ಣನೆಂದೆನಿಸಿ ಬಾಹ್ಯದೊಳ್ ಜಡಭಾವವಂ ತೋರುವ ॥
ನಿರತಿಶಯ ರಾಜಯೋಗಿಯ ತೆರದಿ ಗಂಭೀರ ।
ಕರನಬ್ಧಿರಾಜ ಕಂಗೊಳಿಸಿದಂ ಕಪಿವರರ ।
ಸರಿಸದೊಳ್ ತಿರೆಯುಟ್ಟ ನೀಲಪಟದಾಶ್ಚರ್ಯಮಡಿಗೆಯಂದದಿ ತೋರ್ದನು ॥ (4)

ಲಲಿತೋರ್ಮಿತಾಯುತದಿ ಧನದ ಪ್ರಾಕೃತನಂತೆ ।
ಚೆಲುವೆ ಹಂಸಾವತಂಸದೆ ಸತ್ಯಮಂಬರದ ।
ಸುಲಭಮೆಸಲು ಕಬಂಧಯುತಮಾಗಿ ರಣಭೂಮಿದಂಡಕಾರಣ್ಯದಂತೆ ।
ಕಲಿತಾನಿಮಿಷಸೇವ್ಯನಾಗಿ ಕಾಮುಕಹೃದಯ ।
ಸಲೆಸಗ್ಗಮೆಂಬಂತೆ ಪರಪುರುಷಸಂಗಮುದ ।
ಬಲುಹಿಂದ ಸಾಂಖ್ಯನೆಯು ಕುಲಟಾಸಮೂಹದಂತಾದಧಿ ರಾರಾಜಿಸಿದುದು ॥ (5)
ಬಾಡಬೋಜ್ವಳದಿಂದ ವೇದರಾಸಿಯು ತೆರದಿ ।
ಕೂಡಿ ಪ್ರಸಾಧಮಂ ಸತ್ಕಾವ್ಯಮೆಂಬಂತೆ ।
ನೋಡೆ ಗಾಂಭೀರ್ಯಯುತನಾಗಿ ಧೀರೋದ್ಧಾತನಾಯಕನ ಮಾಳ್ಕೆಯಿಂದೆ ।
ಬೀಡೆನಿಸಿ ಬಹುಜೀವನಂಗಳಗೆ ನಗರಮೆನೆ ।
ಕೂಡೆ ಮರ್ಯಾದೆಲಂಘನೆಗಳಲ್ಲದೆ ಸತೀ ।
ನಾಡೆಂಬೊಲುದಧಿ ಕಂಗೆಸೆದುದಂಗದಮುಖ್ಯ ಶಾಖಾಮೃಗಂಗಳಂಗೆ ॥ (6)
ಶಿವಲೋಕದಂತೆ ಶ್ರೀವಾಲಾಪದಿಂ ಬಹುಳ ।
ದ್ರವಿಡಭಾಷೆಯೊಳಗಸ್ತ್ಯಾಲೀಢ ಕೃಪಣನಂ ।
ತವಿರಳದ ಚಂದ್ರಾವಲೋಕ ಮಾತ್ರೋಲ್ಲಾಸಮಾಗಿ ಖಲಹೃದಯದಂತೆ ।
ವಿವಿಧ ಭಂಗಾಶ್ರಯಣಮೆನಿಸಿ ಪೆರರ್ಗೈಸಿರಿಗೆ ।
ಕವಿಪನೆನಲೊಡಲ ಕಿಚ್ಚಿಂದ ತೋರಿದನಬ್ಧಿ ।
ಭವನ ಭೀಕರರವದಿ ಕಂಗೆಸದನಾ ಕಪಿಪ್ರವರರಚ್ಚರಿಗೊಂಬೊಲು ॥ (7)
ಸುಳಸುಳದು ತೋರ್ಪ ನೀರಾನೆಗಳ ಮೀನುಗಳ ।
ಪೊಳಪೊಳದು ಚೀರ್ಪ ಘನಚಕ್ರಗಳ ನಕ್ರಗಳ ।
ಬೆಳಬೆಳದು ಬರ್ಪ ಬೆರ್ತರೆಗಳಂ ನೊರೆಗಳಂದಡಿಗಡಿಗೆ ಭುಲ್ಲವಿಸುತ ॥
ದಳದಳನೆ ಬರ್ಪ ಬೆದೊರೆಗಳಂ ಹರಿಗಳಂ ।
ಕಳಕಳನೆ ನೆಗದ ಬೇರ್ಘನಗಳಂ ಪನಿಗಳಂ ।
ಪೊಳಪೊಳದುದುದಧಿ ಭೂಮಲಯಕುಂ ಪ್ರತಿನಿಧಿಯೆನಲ್ಕೆ ಕಪಿವರರೆಡೆಯೊಳು ॥ (8)
ಪಡದೇಂ ಘನಾನುಗ್ರಹಂಗಳಂ ಲಾವಣ್ಯ ।
ಮಡುವೆನಿಸಿ ಫಲಮದೇನಮೃತರಾಸಿಯುಪೆತ್ತು ।
ಬಿಡುಗಣ್ಣವರಿಗಿತ್ತು ಕಾರ್ಯಮೇನಿಂದ್ರಂಗೆ ಸಿರಿಯ ಕೈಗೈದದೇನು ॥
ಒಡಬನುಘ್ಘುಡಬಾಧೆಯಡಿಗಡಿಗೆ ಬೆರ್ಚುತ್ತ ।
ಮೊಡಲ ಬಾಧಿಪಡುಳದಾಯ್ತು ಸಂಚಿತವಾರ ।
ಬಿಡದೆನುತ ಲೋಕಕೆಚ್ಚರಿಪಂತೆ ಸಾಗರದ ಘೋರರವ ತೋರ್ದುದಾಗ ॥ (9)
ಸಂಗರಾಂಗಣಭೀಮ ಬಲಿ ಸಾರ್ವಭೌಮಸುರ ।
ಪುಂಗವನೆನುತ್ತಾತ್ಮಭವೆಯಿತ್ತರಾತಂಗೆ ।
ಬೆಂಗೊಲೆಯು ಪ್ರತ್ಯುಪಜನಹತ್ಯದುರುಪಾತಕಂ ಬೆಂಬಿಡದೆ ಬಂದಡಸಲು ।
ಕಂಗಳುಂ ತಾವರೆಗಳಾಗಿದ್ದೈದಂದಿನ ಭು ।
ಜಂಗಮಾ ಭೋಗಭೋಗಾಸಕ್ತಿಯಾದುದಿದ ।
ಕೇಂಗೈವೆನೆನುತಬ್ಧಿ ಸುಯಿಪನೋಯೆನೆ ಘೋರರವದಿ ರಾಜಿಸುತಿರ್ಪುದು ॥ (10)

ಪೆತ್ತನಿಪ್ಪತ್ತೇಳು ತಾರೆಗಳ ದಕ್ಷ ಸಸಿ।
ಗಿತ್ತ ದಿಕ್ಪಾಲಕರ ನೋಡದಾದಂ ದೇವ।
ತೋತ್ರವಾಗನೇಕ ನಕ್ಷತ್ರಮಾಲಿಕೆಗಳಂ ಪಡೆದಿವೆನೆಂದಬ್ಧಿಯು ॥
ಬಿತ್ತರದ ತೆರೆಗೈಗಳಂದಲೇಂ ಬೇಡುವನೊ।
ಮುತ್ತುಗಳ ಸೇಸೆಗಳ ತಳದನೊ ಸುರಾಂಗನಾ।
ಮೊತ್ತಕೆನಲಂಬರವ ಚುಂಬಿಸುವ ಕಂಕಣಗಳಂದೇಂ ಮನಂಗೊಳಿಪವೊ ॥ (11)
ಎಡೆಯಡೆಯೊಳುತ್ತರಂ ನಕ್ರಮಕ್ರಮದಿ ಬಾ।
ನೆಡೆಯುನಂಟಿರೆ ಬಲಿಗಳಲ್ಲಲ್ಲಿ ಹಂಸೆಗಳು।
ನಡೆಯುಲೊಪ್ಪಿರೆ ಸತ್ಯಲೋಕವಂ ಪೋಗುವರೆ ಪಟಿಕ ಸೋಪಾನಗಳನು ॥
ಬಿಡುಗಣ್ಣರೊಡೆಯನೇಂ ನಿರ್ಮಿಸುವ ಮುಕ್ತಾಳಿ ॥
ಗೊಡನೆ ಪಂಥಾನವಂ ತೋರಿದನೊಯೆಂಬೊಲೇಂ।
ಯೆಡೆಬಿಡದೆ ತೋರುವ ಮರಾಳತತಿ ನೋಟಕರ ಕಂಗೆಸೆದವತಿಚಿತ್ರದಿ ॥ (12)
ಸಗರನಂದನರು ನಿಜಕರತಳದೊಳು ನೆಲನ।
ನಗಿದಿಂಬುಗೈದಿತ್ತು ಸಾಗರನ ಪೆರ್ಚಿಸಿದ।
ಬಗೆಯಿಂದಮವರ ಕೀರ್ತಿಗಳು ಮೂರ್ತೀಭವಿಸಿ ಸ್ವರ್ಗಾದಿಲೋಕದೊಳಗೆ ॥
ನಗುತ್ತೈದುತಿರ್ಪವೋಯೆನಲು ತೆರೆತೆರೆಗಳಲಿ।
ನೆಗೆನೆಗೆದು ಗಮಿಸುತಿಹ ಹಂಸಸಂತತಿಗಳೇಂ।
ಸೊಗಸನಿತ್ತಪವೊ ವ್ಯೋಮಂಕಷದಿ ನೋಡಲ್ಕೆ ಸನ್ಮಾರ್ಗದಚ್ಚರಿಯೊಳು ॥ (13
ಹರಿಯು ನೋಡಲ್ಕಳಿಯು ಮಹಲಕ್ಷ್ಮಿನಂದನೆಯು।
ಗಿರಿಯುಣಾಗ ಮೈನಾಕನಾಶ್ರಿತಂ ಘನರಾಜ।
ಪರಿಪರಿಯು ವಾಹಿನಿಸಮಿಶ್ರದಿಂದೆನಗಿರ್ದ ಭಂಗಬಿಡದಂಡಲೆವುದು ॥
ಬರಿದೆ ರತ್ನಾಕರನದೆಂದೆನ್ನ ಕರೆದಪರ।
ಹರಸಖಾಸ್ಥಳದಂತೆ ಶಿವಗಣಂ ತೋರ್ದೇನು।
ಗುರುವತನಕೊಣೆಯುಂ ಬಂದಡಗಿತೆಂದಬ್ಧಿ ಕೊರಗುವೊಲು ಮೊಳಗೆಸದದು ॥ (14)
ನವರಸಪ್ರೀತ ಜೀವನದಾತ ಘನನೇತ।
ಕುವಲಯಪ್ರಿಯು ಸಿರಿನಿಕಾಯು ಸಂಪದದಾಯು।
ವಿವಿದ ಚಿತ್ರಂಗಳಗೆ ನಿಲಯು ನಯವಿನಯಂಗಳಾಲಯು ಸಮುದ್ರಪೆಸುತ ॥
ತವಕದಿಂ ನವಕವೆನಲವನೀಸರಿದ್ರೂಪ।
ಯುವತಿಯರ್ ಮೋಹಿಸುತ ಬಂದು ದಣಿವರೊಯೆನಲ್।
ಜವದಿಂದತತ್ತಟದೊಳಾಡುತಿಹ ಘನರಾಜಿ ಕುರುಳ್ಗಳೆನೆ ಮೋಹಿಸುವವು ॥ (15)
ಹರಿಯು ವೈರಿಯು ಗಿರಿಯುನಿರಿಸಿಕೊಳೆ ನಿನಗಿದುವೆ।
ತರವಲ್ಲಮಿದು ಪೊಲ್ಲ ಸುಖಮಲ್ಲ ಬಿಡುಬಿಡೆಲೊ।
ಶರಧಿ ನಿರವಧಿಪರಾಕ್ರಮಿಗೆ ನೀನಿದಿರಾಗಿ ನಿಲ್ವೆಯುಯೆನುತ್ತಮೊರೆದು ॥
ಮಿರುಗಿಸುತ ಚಪಲಕರವಾಳಗಳ ಸಿಡಿಲೆಸಲ್।
ಬಿರುನುಡಿಗಳಂದ ಧಿಕ್ಕರಿಸುದಕ್ಕರಿಸುತಿದೆ।
ಘುರವಿಜಯು ಜೀವನನೀವನಲ್ಲದೆ ಬೆದರಿ ಮರೆಯೊಕ್ಕರನ್ನೀವವೇ ॥ (16)

ಬಲುಘನಾಶ್ರಯಣವನು ಕಂಡು ಮತ್ತೊರ್ವನಾಂ ।
ಪಲಬರಿಗದೆಂತೀವೆನೆನುತ ಪ್ರಯೋಜಕದಿ ।
ಕಲಿತಜಡಧಿಯೊಳರದೆಥೋಚಿತದಿ ಜೀವನಗಳತ್ತು ಸಂತೈಸಿ ಬಳಿಕ ॥
ಕಲಶಭವ ಚಳುಕೀಕೃತಂಗೈದ ಕಾಲದೊಳು ।
ನಲವಿಂದ ಯಾಚಿಸುವಡಾರು ಬರ್ಪರುಯೆನು ।
ತ್ತುಲಿವ ಮೇಘಾಳ ಸಂಭ್ರಮಗಳಾವಾವೆಡೆಯು ತೋರ್ಪವಚ್ಚರಿಗಳೆಸಲು ॥ (17)
ನೀರಾಟಕೆಳಸಿರ್ಪ ನೀರಾನೆಗಳು ಬಡಬಿ ।
ತೋರೆ ಶಿಖಿರನ್ನಪುಷ್ಪಿತವಿಟಪಿಗಳ ಪಿಡಿದು ।
ದೂರಕಿಡುತಿರಲಚ್ಚರಿಯು ಬೀರ್ದುದುದಧಿಯುಂ ದೇವತತಿಯಾಚಿಸಿದಡೆ ॥
ಸಾರಕಲ್ಪದ್ರುಮತುರಂಗವೈರಾವತವ ।
ಕಾರುಣ್ಯದಿಂದ ತೆರೆಗೈಗಳಿಂದ ಪರಿಯು ।
ಲೋರಂತೆ ತೆತ್ತೆನೆನುತೌದಾರ್ಯಮಂ ತೋರುವಂತದೇಂ ಶೋಭಿಸುವದೊ ॥ (18)
ತಡಿಯೊಳೆಡೆಗೊಳದಲ್ಲಿಗಲ್ಲಿಗುಂ ರವಗಳುಂ ।
ಕೊಡುವ ಘನತುಂಬಿಗಳ ಕಂಡು ನೀರಾನೆಗಳ್ ।
ಮುಡುಮುಡಿಸಿ ವೈರದಿಂ ಬಂದಿರಿಯೆ ಜೀಮೂತದಿಂದ ಝುಲ್ಲೆಂದುದುರುವಾ ।
ಬಿಡುಮುತ್ತುಗಳದೇನು ಚಿತ್ರಮೆಂದೆಸಿಸುವದೊ ।
ಕೊಡುತ ಜೀವನವ ಪೊರೆದು ದಧಿರಾಜಗೆ ಕಾಣ್ಕೆ ।
ಗೊಡಲೆನುತ ಮುಕ್ತಾಫಲಂಗಳಂ ಚೆಲ್ಲಿದನೊ ಘನನೆಂಬೊಲೇಂ ತೋರ್ಪುದೊ ॥ (19)
ಮುನಿಮುನಿದು ನುಂಗಿದಂ ಮುನ್ನೊಮ್ಮೆ ಮತ್ತೊಮ್ಮೆ ।
ಕನಲಿ ಕಡುಗೋಪದಿಂ ಭಾರ್ಗವಂ ಕೊಡಲಿಯುಂ ।
ತನಗೆತ್ತಿ ಒತ್ತರಿಸಿಕೊಂಡ ಭೂಮಂಡಲವನಿಂದೀಗರುವನಾತ್ಮಜ ॥
ಮನದಹಂಕಾರದಿಂ ದುಲ್ಲಂಘಿಸೆನ್ನನುಂ ।
ಮನತರವ ಕಿಂದೆನಿಸಿ ದಾಂಟಲ್ಕೆ ಬಂದಿಹಂ ।
ಎನುತಬ್ಧಿ ನೆನೆದು ಮನಕವಡಿ ನಿಂದಿಹನೆನಲ್ ತೆರೆಗಳಂ ಕದಡಿರ್ದುದು ॥ (20)
ಮೀನಕರ್ಕಟನಕ್ರಚಕ್ರಗಜಕಮಠ ಸು ।
ವ್ಯಾನದಿಂ ಸುಳಿವ ಜನಮಾನಸಾಂಗನೆಯುರ ನ ।
ವೀನ ಸಲ್ಲಾಪಗಳ ಬೆಪ್ಪೊಡೆದು ಪುಟಕೆಗವ ಸುಭಾಷಣೆ ಮುತ್ತುಗಳನು ॥
ಆನಂದದಿಂದಿಟ್ಟಸಿ ಪಿ (ಡಿ ಯು ಲ್ಬ) ರ್ಪ ಸುರ ।
ಮಾನಿನೀ ಗಣವ ಕಂಡಂ ಭೋಧಿ ಗಹಗಹಿಸಿ ।
ತಾ ನಗುವನೋ ಯೆನಲ್ ಸಳ್ನೊರೆಗಳಲ್ಲಲ್ಲಿ ಸಂಕಲಿತದಿಂ ತೋರ್ದವು ॥ (21)
ಮೇಲುವರಿದೈತಪ್ಪ ತೆರೆಗಳಂ ನೆನದು ।
ಮೇಲಕತರುವ ಮರಾಳಂಗಳುರು ಪಕ್ಷ ಸಂ ।
ಚಾಲನೆಯೊಳುದುರ್ವ ತುಂತುರ್ವನಿಗಳಭ್ರಗಜಮನ್ಯೋನ್ಯಕಲಹದಿಂದ ॥
ಸೀಳೆ ಕುಂಭಸ್ಥಲೋಚ್ಚರಿತ ಮುಕ್ತಾಫಲದ ।
ಜಾಲಂಗಳೆನಲಚ್ಚರಿಯುಲೆಸದುದಂಬುಧಿಯು ।
ಮೇಲೆ ಸುರಪತಿಹಸ್ತಮುಕ್ತ ಮುಕ್ತಾಕ್ಷತಾವ್ರಾತದ ಬೆಡಂಗಿನಿಂದ ॥ (22)

ಉಡುರಾಜಗಪಕೃತಿಯನೆಸಗುವ ದಿವಾಕರನ ।
ಬೆಡಗಳ ಪಿಡಿದು ತಡಿಯೊಳಗೆ ಸೆರೆಯಿಟ್ಟನೋ ।
ಕಡಲೊಡೆಯನೆನಲು ಲಾವಣ್ಯನಿಧಿಯೆಂದೆನುತ ಮೋಹಿಸಿ ನದೀಸತಿಯರು ॥
ಕಡುಮುಮ್ಮತಿಯಿಂ ಪೊಗಳೆ ಕರವನಿರ್ದ್ದಲು ಬೆರಳ್ಗಳ ।
ಎಡೆಗೆಡೆಗೆ ತೋರುವವೊ ಕೆಂಜಡೆಗಳಂ ಕೆದರಿ ।
ಕಡಲದೇಂ ನಿದ್ರಿಸನೊಯೆನಲು ವಿದ್ರುಮಲತೆಗಳಾ ತಳಿಸಿ ಕರಮೆಸೆದವು ॥ (23)
ದಿನಪನುಪಳಕಂಜಿ ಕಳ್ತಲೆಯು ಜಂಗುಳಿಯು ।
ವನರಾಸಿಯೊತ್ತ ನಿರಿರ್ದದೋ ತಾಮಿಕೆ ।
ಜನರಂಗಕಾಂತಿ ಪರಕಲಿಸಿ ಕಣಿಯಾದುದೋ ನಿಸಿಗಳೀನಡರಿರ್ದವೋ ॥
ಎನಲು ನೀರಂಧ್ರತರಸೈಲ್ಯದಿಂದ ತಮಾಲ ।
ವನಮುಸ್ಸರಾಂಗನಾಭೋಗಪ್ರಯೋಗ್ಯಕರ ।
ಮೆನಿಸಿ ತೋರ್ದುದು ಪರ್ದದೇರನತರುಚ್ಛಾಯ ವಿನಯಾನುಕಾರದಿಂದ ॥ (24)
ನಾತ್ರುಳಂಗ ಲವಂಗ ಖರ್ಜೂರ ಪಿಪ್ಪಲೀ ।
ವಾತ್ರಮೇಲಾಲತಾಕುಂದಪುಂಜಗಳೆಡೆಯು ।
ಲಾತಪಕ್ರಮನಿವಾರಣಗೈವ ಸುರಸಿದ್ಧಚಾರಣಗಂಧರ್ವರಾ ॥
ಮಾತನನುಸರಿಸುವರೆ ಗಿಳಿಗಳ ವಿಲಾಸತತಿ ।
ನೂತನತೆ ಗಹಗಹಿಸಿ ನಲಿವ ಪಿಕಸಂತತಿಯು ।
ರೀತಿಗಳ ನಿಟ್ಟಿಸುತ ಸಂತಸಂಗೊಳುವ ಸುರಕಾಮುಕರದೇಂ ತೋರ್ಪರೊ ॥ (25)
ಹರಿಯಂತೆ ಶಂಖಚಕ್ರಾಬ್ಜಲಾಂಛನದಿಂದ ।
ಹರನಂತೆ ಕೆಂಜಡೆಗಳುರಗಭೂಷಣದಿಂದ ।
ಸರಸಿಜೋದ್ಭವನಂತೆ ಹಂಸಗಣಸಂಸೇವ್ಯವಾಗಿ ಸುರನಾಥನಂತೆ ॥
ನಿರತಾನಿಮಿಷ ಸೇವ್ಯಮಾಗಿ ಕೃತುಲಿಹನಂತೆ ।
ಹರುಷದ ವಿಪೋಷಣದೊಳಾಗಸಮೆನಲ್ಕುಡುಪ ।
ತರಣಿಕೋಷಿತಮಾಗಿ ತೋರ್ದುದಂಭೋರಾಸಿ ಪ್ಲವಗಾದಿನಾಥರಿಂಗೆ ॥ (26)
ಮುಗಿಲನೊಳಪೊಕ್ಕು ಕಂಪಾಲತೆಯನೊಡಗೊಂಡು ।
ಗಗನತಳದಿಂ ಬಿಳದು ವಾರಾಸಿಯುದರದೊಳು ।
ಸೊಗಯಿಸುವ ರಿಷಿಗಳಂ ಕೈಕೊಂಡು ಭಯಪಕ್ಷಪಾತದೆಗ್ಗಳದಿಂದಲಿ ॥
ಸೊಗಸತೋರುವೆನಬ್ಧಿರಾಜಗೆಂದೆನುತ ಪೃಥು ।
ನೆಗದು ನೀರೊಳ್ಪೊಕ್ಕು ಮುಗುಳಾಗಸವನುತರಿ ।
ಬಗೆಬಗೆಯ ಚೋದ್ಯಮಂ ತೋರ್ಪ ಕೆಮ್ಮೊಗ್ಗಳೆನೆ ಲಕ್ಷ್ಮೀಕಟಾಕ್ಷಮೆನಲು ॥ (27)
ಕರಿತುರಗಧೇನುಮೊದಲಿತರದಿವ್ಯನಾಯಿಯರ ।
ಪರಿಪರಿಯ ಭೋಗಗಳ ಪಾಕಶಾಸನನಿಗಿತ್ತೆ ।
ನರಸುತನನಿಂದಮಮರಾವತಿಯೊಳಿರ್ಪುದಂ ನೋಡಿ ಸಂತಸವ ತಾಳ್ದು ॥
ಬರುವೆನೆಂದಾಗಸವನಡರಿ ಸಂತೋಷದಿಂ ।
ದೆರಪಿಲ್ಲವಾದಂತೆ ಮುತ್ತುಮಾಣಿಕಗಳಾ ।
ತೆರೆಯಿಂದ ಪರಕಲಿಸಿ ತಾರಾಗಣಗಳಂತದೇನಚ್ಚರಿಯ ತೋರ್ಪವೊ ॥ (28)

ಕೊಳದುರ್ಕವನೆವಿದೇನಾಗಸವ್ರೊ ಪಾದಗಳ ।
ಚಳಕವಸಿಯಾಡದೇಂ ಭೂತಳವ್ರೊ ಮಾತುಗಳು ।
ಬಳಸಲರಿದಾಗಿರುವದೇಂ ಭಾನುಮಂಡಲವ್ರೊ ಕಪಟಿಗಳ ಹೃದಯಂಗಳೊ ।
ನಳಿನಪೀಠನ ಸೃಷ್ಟಿಗವಧಿಭೂಮಿಯೊ ವರುಣ ।
ನುಳುಮೆಗಿದು ಸರ್ವಸ್ವಮೋಯೆನ್ನುತಾಶ್ಚರ್ಯ ।
ಗೊಳುವ್ರೊಲಂಭೋರಾಸಿ ತೋರ್ದುದಾ ಜಾಂಬವಾದ್ಯಖಿಲ ವಾಸರರ ಕಣ್ಗೆ ॥ (29)
ಗಗನದಂತೆಸೆವ ದುಷ್ಪಾರದಂಭೋನಿಧಿಯು ।
ಮಿಗೆ ನೋಡಿ ಖಿನ್ನತೆಯನಾಂತ ಕಪಿಸಂದೋಹ ।
ಬಗೆಬಗೆಯು ಸಂಬಾಧಕಲಿತನುಡಿಗಳನಾಡತಲ್ಲಲ್ಲಿ ನೋಡುತಿರಲು ॥
ನಗುತ ಜಾಂಬವನಖಿಲರುಪಚರಿಸಿ ಯುವರಾಜ ।
ನಿಗೆ ಪೇಳ್ದಮುಂದೈದುವಾಳೋಚನೆಯೊಳಾವ ।
ಬಗೆಯೊಳಾದರು ನೀರಧಿಯು ನೆಗೆವ ಯತ್ನಮಂ ಕಾಣೆನುತ ನುಡಿದನೊಲಿದು ॥
ಎನುತ ಜಾಂಬವ ಪೇಳಲಂಗದಂ ಬೇಗದಿಂ । (30)
ಮನವೊಲಿದು ಕಪಿಗಳಂ ಕರದು ಕುಸ್ತರಿಸುತ್ತ ।
ವಿನಯದಿಂ ಬೆಸಗೊಂಡ ವಾರ್ಧಿಯನ್ನುತ್ತರಿಸಿ ವಾನರಾಧಿಪನೈಸಿರಿಯು ।
ಘನವೆನಿಪರಾರೆಮಗೆ ಪೇಳ ಶ್ರೀರಾಮಪದ ।
ವನಜಹಿತಕಾರಿಗಳು ಮುಂಬರಿದು ಬಹುದೆನುತ ।
ವಿನಯರಸಭರಿತದಿಂ ಕೇಳುತಂ ನುತಿಗೈದನಾ ಬಲೀಮುಖತತಿಯನು ॥ (31)
ಬಲವಂತರತಿನಿಪುಣರತುಲಗಮನೋಸ್ಸಾದ ।
ಕಲಿತರಾಳೋಚನಾಪರರಮಿತ ಜನಮುಳ್ಳ ।
ರೆಲೆ ವಾನರಶ್ರೇಷ್ಟರೆಲ್ಲ ಪತಿಕಾರ್ಯದೋಳ್ ನಿಷ್ಠೆಯಿಂ ಮುಂಬರಿವುತ ॥
ಜಲನಿಧಿಯನುಂ ದಾಂಟಿ ಸೀತಾಂಗನೆಯ ಕಂಡು ।
ಪಲವುಪಾಯಗಳಿಂದ ಕುಲವರಕ್ಷಣೆ ಗೈವ ।
ನೆಲವುಳ್ಳರಾರೆನುತಮಂಗದಂ ಬೆಸಗೊಂಡನಾಗ ಕಪಿಸತ್ತಮರನು ॥ (32)
ಯುವರಾಜನೀ ಪರಿಯು ಬೆಸಗೊಳಲ್ ತವಕದಿಂ ।
ಪ್ಲವಗಶತಿಗಳು ತಮ್ಮತಮ್ಮ ಬಲಚ್ಫ್ರಯವ ।
ವಿವರಣಂಗೈದರಾ ಕ್ಷಣದಿ ಶಾಖಾಮೃಗಗಳಧಿನಾಥಗಂ ಪ್ರೇಮದಿ ॥
ಗವಯಗಜನುಗವಾಕ್ಷಶರಭಮೈಂಧದ್ವಿವಿಧ ।
ರವಿರತ ಸುಷೇಣಜಾಂಬವಮುಖ್ಯರೆಲ್ಲ ।
ಜವಗಳಂ ಬಿತ್ತರಿಸಲನುಗೈದರಂಗದನ ಮುಂಗಡೆಯಲನುಮೋದದಿ ॥ (33)
ಪತ್ತುಯೋಜನವನು ಗವಾಕ್ಷ ದಾಂಟುವೆನೆನಲು ।
ಮತ್ತೆ ಪದಿನೈದ ಗವಯಂ ನೆಗೆಯಲಿಚ್ಛೈಸ ।
ಉತ್ತರದಿ ಶರಭ ಮೂವತ್ತು ಯೋಜನವನೆನೆ ಗಂಧಮಾದನ ನುಡಿದನು ॥
ಉತ್ತರಿಪೆನೈವತ್ತು ಯೋಜನವನೆನೆ ಮೈಂಧ ।
ಮತ್ತೆ ಅಾಸರವತ್ತು ಪೋಪೆನೆನಲಾ ದ್ವಿವಿಧ ।
ನುತ್ತರಪನಿತ್ತನೆಂಭತ್ತುದಾಂಟುವೆನಿದಕೆ ಸಂದೇಹಮಿಲ್ಲಮೆನುತ ॥ (34)

ಬೇಳದ ಸುಷೇಣನದರಿಂದೈದು ಬೆರ್ಚಿಗೆಯು ।
ನೀಳ ಮತ್ತಾ ಸಮಯದೊಳಗೆ ಜಾಂಬವ ನುಡಿದ ।
ಕೇಳರೈ ಕಪಿಗಳರ ಪೂರ್ವವೃತ್ತಗಳೊರೆದು ಫಲಮಿಲ್ಲದಾದರೀಗ ॥
ಬೇಳಬೇಕಾಯ್ತು ಜವ್ವನ ಪೋದ ಬಳಿಕ ಮ ।
ತ್ತಾಳುತನಮೆಲ್ಲಿಯದು ರಘುನಾಥನೊಳಗವ ।
ತಾಳ ಮಕಳಿದೊಳು ತೊಂಬತ್ತು ಯೋಜನವ ನಾಂ ದಾಂಟ ಬಂದವೆ ಮೆಲ್ಲನೆ ॥ (35)

ಬಲಿಯು ಬಂಧಿಸೆ ತ್ರಿವಿಕ್ರಮು ಬರ್ಪನೆಂದೆನುತ ।
ನೆಲವ ಸುರರಿಗೆ ಬೇಳ್ದ್ವಿಡಾರು ಮತ್ತೊಂದಾಗಿ ।
ಲಲಿತಗಮನದಿ ಕನಕಶೈಲಮಂ ಬಳಸಿದೆನು ಜವ್ವನದ ದುರುಭರದೊಳು ॥
ತೊಲಗಿತಾ ಬಲಮುಷ್ಟಿ ಬಲಿವುದೇನ್ಯೆ ಚಪಲ ।
ಕಲಿತಮಾನಸಮಂದಗತಿಯೆನುತ ರಿಕ್ಷಪತಿ ।
ಯುಲಿಯೆ ಕೇಳ್ದಂಗದಂ ತನ್ನ ವೃತ್ತಾಂತಮಂ ಬೇಳಲುಜ್ಜುಗಗೊಂಡನು ॥ (36)

ನೂರು ಯೋಜನದುದಧಿಯಂ ದಾಂಟಲಾಪೆನಾ ।
ನೋರಂತೆ ಬರಲಮ್ಮೆನೆನಲು ಜಾಂಬವನಾ ಕು ।
ಮಾರನಂ ಕುಸ್ತರಿಸಿ ಕಪಿರಾಜತನಯ ನೀನತುಳ ಸಾಹಸಿಯೆಂಬುದಾ ।
ಧಾರಿಣಿಯೊಳಾರರಿಯರಕಟ ಪರಿವೃಢ ಪೋಪ ।
ಚಾರರಂ ಕಳುಪಿ ಮೇಲಾರೈದುಕೊಂಬುದೌ ।
ದಾರ ಪೌರುಷಮಲ್ಲದೈದಿಬಹದೇನಧಿಕ ನೃಪರೀತಿ ನೀತಿಯಲ್ಲ ॥ (37)

ನೀನೋರ್ವ ಸುಖದಲಿರಲಹವು ಕಾರ್ಯಗಳೆಲ್ಲ ।
ನ್ಯೂನಮೇನಿದಕೆ ನಾವೆಲ್ಲ ಭವದಾಶ್ರಯಾದ ।
ಧೀನರಾಗಿದ್ದೇನು ಫಲ ಬೆಸಸಿದನಿತನಂ ಮಾಡಿ ತಂದೊಪ್ಪಿಗಿವೆವು ॥
ಧ್ಯಾನಿಸದೆ ಮನಬಂದ ತೆರದೊಳಾಜ್ಞಾಪಿಸುವ ।
ದೇನು ಮತ್ತನುಮಾನಮೆನುತ ಜಾಂಬವ ನುಡಿಯ ।
ಲಾನಂದದಿಂದಮಂಗದ ನುಡಿದ ಮನದಿಷ್ಟದಭಿಮತವ ವಿಸ್ತರದೊಳು ॥ (38)

ಎಲ್ಲರ ಬಲಂ ಪರಾಕ್ರಮಗಳುಂ ಕಾಣ್ಪಟ್ಟ ।
ವಿಲ್ಲನಾನೈದದಿರಲೀ ಕಾರ್ಯದೊಳು ಪ್ರಾಣ ।
ನಿಲ್ಲ ವದದೆಂತಯ್ಯ ಕಾರ್ಯಮಂ ಕಂಡವಲ್ಲದೈಯ್ಯನೆಡೆಗೈದೆ ಸಲ್ಲ ॥
ಅಲ್ಲದಿರಲೆಲ್ಲ ಪ್ರಾಯೋಪವೇಶವ ಮಾಳ್ಪ ।
ನೊಲ್ಲನಂಗೀಕರಿಪುದೆಂದಂಗದಂ ಬೇಳ್ದ ।
ರುಲ್ಲಾಸದಿಂದ ಜಾಂಬವ ನುಡಿದನಖಿಲ ಕಪಿವೃಂದಮಾನಂದಗೊಳಲು ॥ (39)

ಮಗನೆ ಕೇಳ್ ಕರದೊಳಗೆ ಚಿಂತಾಮಣಿಯನಿಟ್ಟು ।
ಸುಗುಣಸುರಧೇನುಮಂ ನಿಳಯದೊಳಗಿಂಬಿಟ್ಟು ।
ಮಿಗೆನಿಲಿಂಪದ್ರುಮ ವನಂಗಳದೊಳಂಬಿಟ್ಟು ನಿಜಮನೋರಥದೇಳ್ಗೆಗೆ ॥
ಬಗೆವರೇನನುಮಾನಗಳನುಂ ಪ್ರಭಂಜನನ ।
ಮಗ ನಿನ್ನಸಂಗಡಿಗನೆನಿಸಿರ್ದು ಕಾರ್ಯಗಳ ।
ಬಗೆಯದಂತಿಹುದೆನುತ್ತೆಣಿಸುತಿಹೆ ಕಂಕಣವ ನೋಡೆ ಕನ್ನಡಿಯು ಬೇಕೆ ॥ (40)

ಇಂದೆಮ್ಮ ಹರಿಕುಲವ ಪೊರೆದೀ ವಿಪತ್ತುಗಳ ।
ಬಂದೀಕರಣಗೈದು ಸಕಲಜನದಾನಂದ ।
ಸೊಂದೆನಿಪರೀ ಜಗತ್ಪ್ರಾಣನಂದನ ವಿಪದ್ಬಂಧುವೆಂದೊರೆದು ಬೇಳ ॥
ಛಂದದಿಂದಂಗದನ ಸಂತೈಸುತಾ ರಿಕ್ಷ ।
ಬಾಂಧವಂ ಮಾರುತಿಯ ನೋಡಿ ಮೃದುಮಧುರನುಡಿ ।
ಯಿಂವ ನುತಿಗೈದನಾ ಕಲ್ಯಾಣಗುಣಗಣಗಳೆನಿಸಿ ಸಂತೋಷವೆರಸಿ ॥ (41)
ಬಲಪರಾಕ್ರಮದಿಂದ ರಾಮಲಕ್ಷ್ಮಣರುಗಳ ।
ಚೆಲುವ ಜವಸತ್ವದಿಂ ಖಗಪತಿಯ ಖಗಸುತನ ।
ಗೆಲಿದಿರ್ಪ ಬಾಹುಬಲಶಾಲಿ ತಾರಾಮಾಲಿಯುಪರಾಪತಾರನೆನಿಸಿ ॥
ಸಲಲಿತದಿ ಸರ್ವ ದೇವಾತ್ಮನಾಗಿರ್ದನಿ ।
ನ್ನೊಲವ ಸಂಪಾದಿಸಿದರಿಂಗಖಿಲ ಸಂಪದಗ ।
ಳೊಲಿದಪವೆನಲ್ಕೆ ಸಾಕ್ಷಾತ್ತಾಗಿ ನೀನಿರ್ದು ಕುಲದೈನ್ಯತೆಗಳೀತಕೆ ॥ (42)
ತ್ರರಣಿಮಂಡಲಕೆ ನಡೆದಾ ಮಹಾಜವಗಳಂ ।
ಸುರಚಿರದ ಕುರುಹ ಪಶ್ಚಿಮನಗಗಳಗ್ರದೊಳ್ ।
ಗಿರಿಸಿ ಪದಗಳ್ ನಿಗಮಗಳ್ ಕಳಿತ ಸಾಹಸಂ ಮೊದಲಾದ ಗುಣಗಣಗಳ್ ॥
ಶರಣಜನದಿಷ್ಟಾರ್ಥವಿತ್ತಾಪದೋದ್ಧರಣ ।
ವೆರಸಿರ್ಪ ಪರಿಪರಿಯ ವಿಸ್ಮಯಂಗಳನೆಲ್ಲ ।
ಮರಸಿ ಮನದೊಳರ್ದರೀ ಪ್ಲವಗ ಸಂತತಿಗೆ ಗತಿಯಾರು ಕಪಿವರೇಣ್ಯ ॥ (43)
ಇನಸುತನ ಭಯದಿಂದ ಕನಲಿ ಕಪಿವರರೆಲ್ಲ ।
ತನುಗಳಂ ಬಿಡಲೆಳಸಿ ತತ್ತರಂಗೊಳುತಮಿ ।
ರ್ದನುವ ನಿಟ್ಟಿಸಿ ಸುಮ್ಮನಿರ್ಪಡಾರ್ಪೈ ಪೊರೆವರೀ ದೀನ ಸಂತತಿಯನು ॥
ನೆನೆದವರಿಗಿಷ್ಟಾರ್ಥಗಳ ಕೊಡುವ ಶ್ರೀಮೂರ್ತಿ ।
ಯನು ಸನ್ನಿಧಾನದೊಳಗಿಟ್ಟು ಕಾರ್ಪಣ್ಯಗೊಳೆ ।
ನಿನಗೆ ಬಹುದಪಕೀರ್ತಿಯಲ್ಲದಾರ್ಗೇನುಂಟು ವಿಫಲನುಡಿ ಬರಿದು ಗಂಟು ॥ (44)
ಶರಧಿಯೆನಿತುಂಟು ಗೋಷ್ಪದಿಯಲ್ಲದಿದು ನಿನಗೆ ।
ಮರುತಪಿನತಾತನಯಜವಗಳೀಂ ನೀಂ ಚಿತ್ತ ।
ವೆರಸಿದಡೆ ವಿಕ್ರಮತ್ರಿವಿಕ್ರಮಭವನ್ಮೂರ್ತಿ ಸನ್ನಿಕಾಶಮೆನಿಪ್ಪುದೆ ॥
ನೆರದ ಕಪಿವರರೆಲ್ಲ ಸಾಹಸವ ನಿಟ್ಟಿಪರೆ ।
ಪರಿಪರಿಯ ಪ್ರಾರ್ಥನೆಗಳಂ ಮಾಳ್ಪ ಬಾಂಧವರ ।
ಹರುಷಗೊಳಸುವದನಾಥರ ದೇವ ಭಕ್ತಜನಜೀವ ಕೇಳ್ ಸಮಯಕಾವಾ ॥ (45)
ಎಂದು ಬಹುವಿಧದಿಂದ ಜಾಂಬವಂತಂ ನುತಿಸ ।
ಲಂದಾ ಜಗತ್ಪ್ರಾಣನಂದನಂ ಹರುಷರಸ ।
ದಿಂದ ಹಿಗ್ಗಿದನದೇಂ ಸನ್ನುತಿಪ್ರಿಯಕರನೊ ಸಾಧುಚಾರಿತ್ರತರನೋ ॥
ಬೃಂದಾರಕರಪದವಿ ವಶವಾದತೆರದೊಳಾ ।
ನಂದವಾರ್ಧಿಯೊಳಾಳಿ ಕಾಯಮಂ ಬೆಳೆಸಿದ । (46)
ನೊಂದು ನಿಮಿಷಕೆ (ಮಹಾ) ಮಂದರದ ಪಾಸಟಿಯೆನಲ್ಕೆಮರುತಾತ್ಮಭವನು ॥

ಬೆಳಗಿದಳು ವೀರರಮೆ ಮುಖಬಾಹುಮಂಡಲಗ ।
ಳೊಳು ವಿಲಾಸವ ತೋರಲತಿ ಶೌರ್ಯದಿಂ ದೇಹ ।
ಬೆಳೆಯ ಬರುತಿರೆ ಕಂಡು ಕಪಿಕಟಕ ಸಂತಸಂಗೊಂಡು ಕೈಮುಗಿದು ನಿಂದು ॥
ನಳನಳಿಪ ನವಿನುಡಿಗಳಿಂದ ನುತಿಗೈವುತಿರೆ ।
ಲಿಳೆ ಸಂತಸಂಗೊಳುವೊಲೆಲ್ಲ ಕಪಿವೀರರುಂ ।
ನಲಿವಂತೆ ವರಸುಧಾಕಲಿತ ವಾಣಿಗಳಿಂದಪೇಳ್ದನಂಜನೆಯ ಸುತನು ॥ (47)

ಕೇಳಿರೈ ಕಪಿವರರು ನಿಮಗೆ ಸಂಭ್ರಮವ ಕ ।
ಟ್ಟಿಳು ರಘುವರಲಕ್ಷ್ಮಣಾದಿಗಳಗತಿಶಯವ ।
ನಾಳದನಿಗತುಳ ಕೀರ್ತಿಯನೊಂದು ನಿಮಿಷದೋಳ್ ಪತ್ರಿಕಾರ್ಯಕೋಸುಗದಲಿ ॥
ಜಾಳಿಸಿಪ ನೀರಧಿಗಳೆಲ್ಲವಂ ಲವಣಾದಳ ।
ವಾಳದನ ಪರಿಯೆನುತ ನೂರು ಯೋಜನಗಳಿರೆ ।
ಸೂಳನಲಿ ದಾಂಟುವೆನು ನೋಡೆಂದು ಪ್ಲವಗರೊಳು ನುಡಿದ ಕೇಸರಿಯ ಸುತನು ॥ (48)

ರಸೆಯಣುಗಿಯಿರ್ಪ ಲಂಕಾಪುರವ ಶೋಧಿಸುವೆ ।
ನಿಸಿಯೊಳಗೆ ಸಿಕ್ಕಿದರೆ ದಶಗಳನೆ ರಜ್ಜುವಿಂ ।
ಬೆಸುಗೆಗೈದೆಳತಂದು ಭವದೀಯ ಸನ್ನಿಧಿಯ ಕೆಡಹುವೆಂ ಕ್ಷಣಮಾತ್ರದಿ ॥
ವಸುಮತೀಯರಸ ರಘುರಾಜೇಂದ್ರಚಂದ್ರಮನ ।
ಜಸವು ಮುಲ್ಲೋಕಜನರರಿವಂತೆ ಲಂಕೆಯೊಳು ।
ಹಸರವುನ್ನಿಟ್ಟುಬಹೆನೆಂದು ಮಾರುತಿ ನುಡಿದ ಕಪಿಕುಲೋತ್ತಮರೆಡೆಯೊಳು ॥ (49)

ಎನುತೆಲ್ಲರೊಳು ಬೀಳ್ಕೊಂಡು ಶ್ರೀರಾಮಪುರದರಸ ।
ನನು ನೆನೆದು ದಿಗ್ವಿಜಯಜಯಮೂರ್ತಿಮಾಹೇಂದ್ರ।
ವನು ನೋಡುತಾರೋಹಣಂ ಗೈಯಲಿಚ್ಛೈಸಲಖಿಳ ಕಪಿವರರೆಲ್ಲರು ॥
ತನತನಗೆ ಜಯ ವಿಜೇಭವ ದಿಗ್ವಿಜೇಭವ ಗ ।
ಳೆನುತಮಾನಂದದಿಂ ಪೊಗಳುತಿರಲೆಚಬಲದೊ ।
ಳನವಂಶಭವನ ಕೀರ್ತಿಧ್ವಜಂ ಗಿರಿಯೇರಿದಂತೇರ್ದ ಪವನ ಸುತನೊ ॥ (50)

ಸಂಧಿ 20 ಕ್ಕಂ ಪದ 884 ಕ್ಕಂ.

ಮಂಗಳಮಹಾಶ್ರೀ

---

ಇದು ರಾಮಚಂದ್ರಪಾದಾರವಿಂದವಂದನಪವನನಂದನವರಪ್ರಸಾದಾಸಾಧಿತ
ಸಾರಸ್ವತಾ ಸಾಹಿತ್ಯ ಸಾಮ್ರಾಜ್ಯ ಸರ್ವಕಷ ಚತುರ್ವಿಧ ಕವಿತಾ
ಪರಿಶೀಲಿತಾತ್ಮನಿಷ್ಠಾಗರಿಷ್ಠಗಾಂಧರ್ವಕಳಾವಿದ ವಿವಿಧ
ವಿದ್ವಜ್ಜನೋಪಲಾಲನೀಯ ರಾಮಪುರಿ ಹಂಪೆ
ಯಾಮಾತ್ಯ ತನೂಭವ ವೆಂಕಾಹ್ವಯ
ವಿರಚಿತಮಾದ ಶ್ರೀಮದ್ರಾಮಾಯಣ
ಮಹಾಪ್ರಬಂಧದಲ್ಲಿ
ಕಿಷ್ಕಿಂಧಾಕಾಂಡ
ಸಮಾಪ್ತಿಃ.

ಶ್ರೀ ಶ್ರೀ ಶ್ರೀ

# LIST OF AGENTS FOR THE SALE OF MADRAS GOVERNMENT PUBLICATIONS.

## IN MADRAS CITY.

ACCOUNT TEST INSTITUTE, Egmore, Madras.
CITY BOOK COMPANY, Madras-4.
HIGGINBOTHAMS, LIMITED, Madras-2.
P. VARADACHARI & CO., Madras-2.
THE SOUTH INDIA SAIVA SIDDHANTHA WORKS PUBLISHING SOCIETY, Madras-1.
VENKATRAMA & CO., Madras-1.
V. PERUMAL CHETTY & SONS, Madras-1.
M. DORAISWAMY MUDALIAR & CO., Madras-1.
C. SUBBIAH CHETTY & SONS, Madras-5.
SOUTH INDIA TRADERS, Madras-14.
FREE INDIA CO-OPERATORS' AGENCY, Madras-14.
THE SECRETARY, THE CENTRAL POLYTECHNIC CO-OPERATIVE STORES, LIMITED., Madras.

## IN MUFASSAL.

THE EDUCATIONAL SUPPLIES COMPANY (R.S. Puram), Coimbatore.
D. SREEKRISHNAMURTHY, Ongole, Guntur district.
M. SESHACHALAM & CO., Masulipatnam, Krishna district.
HINDUSTAN DIARY PUBLISHERS, Vijayavada, Krishna district.
THE COMMERCIAL LINKS, Governorpet, Vijayavada, Krishna district.
E. M. GOPALAKRISHNA KONE, Madurai, Madurai district.
K. P. AHMED KUNHI & BROS., Cannanore, Malabar district.
P. K. BROTHERS, Kozhikode, South Malabar district.
A. VENKATASUBBAN, Vellore, North Arcot district.
TIMES MODERN MART, Salem, Salem district.
K. BHOJA RAO & CO., Mangalore, South Kanara district.
U. R. SHENOY & SONS, Mangalore, South Kanara distri ct.
P. N. SWAMINATHA SIVAM. Pudukkottai, Tiruchirappalli district.
S. KRISHNASWAMI & CO., Tiruchirappalli.
PALANIAPPA BROTHERS, Tiruchirappalli.
S. R. SUBRAMANIAM, Tirunelveli, Tirunelveli district.
ARIVUNOOLAGAM, Ootacamund, Nilgiris.
TRIVENI PUBLISHERS, Masulipatnam.

## IN OTHER STATES.

JAIN BOOK AGENCY, New Delhi-1.
INTERNATIONAL BOOK HOUSE, Trivandrum.
BHARAT STORES, Ernakulam.

## AGENTS SPECIALLY APPOINTED FOR THE SALE OF SRI BHARATHIAR'S PUBLICATIONS.

ANANDAVIKATAN, Madras-2.
THE SWADESAMITRAN, Madras-2.
SRIMAGAL & CO., Madras-1.
M. PALANI & CO., Pudukkottai.
THE KALAIMAGAL & CO., Colombo-11.
MOHAN & CO., LIMITED, Colombo.